ಉಷಾ ಸಾಹಿತ್ಯ ಮಾಲೆ: ೩೦

# ಜೋಕಾಲಿಯ ಮೇಲೆ

ಮೂಲ ಲೇಖಕಿಯರು

**ಮಾಲತಿಬಾಯಿ ಬೇಡೇಕರ್**

ಅನುವಾದಕರು

**ಡಿ. ಎಸ್. ಕುಲಕರ್ಣಿ**

ಉಷಾ ಸಾಹಿತ್ಯ ಮಾಲೆ

ಮೈಸೂರು

# ವಿಭಾವರೀ ವಾಙ್ಮಯ ಕುರಿತು

೧೯೩೩ರಲ್ಲಿ 'ಕಳ್ಯಾಂಚೆ ನಿಶ್ವಾಸ'ವೆಂಬ ಪುಟ್ಟ ಲಲಿತಕೃತಿಯೊಂದು 'ವಿಭಾವರೀ ಶಿರೂರಕರ, ಬಿ.ಎ.' ಎಂಬ ಅಂಕಿತದೊಡನೆ ಪ್ರಕಟವಾದಾಗ, ಮಹಾರಾಷ್ಟ್ರದ ವಿಮರ್ಶಾ ವಾಙ್ಮಯದಲ್ಲಿ ರಸಿಕ ವಾಚಕರನೇಕರ ಎದೆ ಗಡಲಿನಲ್ಲಿ ಒಂದು ಬಿರುಗಾಳಿ ಬೀಸಿದಂತಾಯಿತು. 'ಮೊಗ್ಗೆಗಳ ನಿಟ್ಟುಸಿರು' ಎಂಬರ್ಥದ್ದು ಆ ಪುಸ್ತಕದ ಹೆಸರು. ಆದರೆ ಬರೆದವರೊ? 'ವಿಭಾವರೀ ಶಿರೂರಕರ, ಬಿ.ಎ.' ಯಾರಿವರು ವಿಭಾವರೀ ಶಿರೂರಕರ?— ಎಲ್ಲರೂ ಒಬ್ಬರೊನ್ನೊಬ್ಬರು ಕೇಳುವವರೇ ಆದರೆ ಯಾರಿಂದಲೂ ಆ ಪ್ರಶ್ನೆಗೆ ಸರಿಯಾದ ಉತ್ತರವೇ ದೊರೆಯದು. ಅದಾವುದೋ ಮೂಲೆಯಲ್ಲಿದ್ದುಕೊಂಡು ಇಷ್ಟು ಸರಸವಾಗಿ ಬರೆದು ಎಲ್ಲರ ಮನವನ್ನು ಸೂರೆಗೊಳ್ಳುವ ವ್ಯಕ್ತಿಯದಾವದೆಂಬ ಬಗ್ಗೆ ಉಂಟಾಗಿದ್ದ ಕುತೂಹಲ, ಮುಂದೆ ಒಂದರ ಹಿಂದೊಂದರಂತೆ 'ಹಿಂದೋಳ್ಯಾವರ' (ಜೋಕಾಲಿಯ ಮೇಲೆ ೧೯೩೪), 'ವಿರಲೇಲೆ ಸ್ವಪ್ನ' (ಕಾಣದಾದ ಕನಸುಗಳು, ೧೯೩೫) ಎಂಬೆರಡು ಪುಸ್ತಕಗಳೂ ಅದೇ ಹೆಸರಿನಲ್ಲಿ ಪ್ರಕಟವಾದ ಮೇಲಂತೂ ಉತ್ಸಾಹದ ಹುಚ್ಚು ಹೊಳೆಯಾಗಿ ಹರಿಯಿತು. ತರ್ಕ ವಿತರ್ಕಗಳಾದವು; ಈ ಪುಸ್ತಕಗಳ ಲೇಖನ ಶೈಲಿ, ವಿಷಯ ವ್ಯಾಪ್ತಿ, ಜೀವನ ದೃಷ್ಟಿ, ನಿರೂಪಣ ವೈಶಿಷ್ಟ್ಯ ಇವೇ ಮೊದಲಾದ ವಿಮರ್ಶಾ ಶಾಸ್ತ್ರದ ಸಾಧಕ ಬಾಧಕ ಪ್ರಮಾಣಗಳ ಕತ್ತಿ-ವರಸೆಯಾಟವಾಡಿ, ಹಲವರ ಕೊರಳಿಗೆ ಈ ಹೆಸರಿನ ಮಾಲೆ ಹಾಕುವ ಪ್ರಯತ್ನಗಳೂ ನಡೆದವು. ಮಹಾರಾಷ್ಟ್ರದ ಸುಮಾರು ೬-೭ ಸ್ತ್ರೀ ಪುರುಷರ ಲೇಖಕರು ಈ ಅನಾಮಿಕ ಕೀರ್ತಿಯ ಇಡುಗಂಟಿಗೆ ಒಡೆಯರಾಗುವಂತಾಯಿತು. ಆದರೂ ಈ ಹೆಸರಿನ ಛದ್ಮವೇಷದ ಕಗ್ಗಂಟು ಇನ್ನೂ ಒಡೆಯದೇ ಇತ್ತು.

ಮೊನ್ನೆ ಮೊನ್ನೆ ೧೯೫೦ರಲ್ಲಿ ಅವರ 'ಬಳೀ' (ಬಲಿ) ಎಂಬ ಮತ್ತೊಂದು ಕಾದಂಬರಿ ಪ್ರಕಟವಾದಾಗ ಅವರ ಕೀರ್ತಿ ಶಿಖರಕ್ಕೆ ಮುಟ್ಟಿತು. ಈ ಮಧ್ಯೆ ೧೦-೧೨ ವರುಷಗಳಲ್ಲಿ ಈ ಹೆಸರಿನಲ್ಲಿ ಯಾವ ಬದ

ಲಾವಣಿಯೂ ಬಂದಿರಲಿಲ್ಲವಾದ್ದರಿಂದ ಕಣ್ಮರೆಯಾಗುತ್ತಲಿದ್ದ ಈ ಹೆಸರಿನ ವಾದವು, ಕೆಲವೇ ದಿನಗಳ ಹಿಂದೆ ಬಂದ 'ಸಾಖರ ಪುಡಾ' ಎಂಬ ಮರಾಠೀ ಚಲಚ್ಚಿತ್ರದ ಕಥಾ ಲೇಖಕಿಯರು ಇವರೇ ಎಂದಾಗ, ಮತ್ತೆ ಮುಂದೆ ಬಂದಿತು. ಆದರೆ ಆ ಹೊತ್ತಿಗಾಗಲೆ 'ವಿಭಾವರೀ ಶಿರೂರಕರ' ಎಂದರೆ ಪುಣೆಯ ಹೆಸರುವೆತ್ತ ಲೇಖಕಿಯರಾದ ಸೌ. ಮಾಲತೀಬಾಯಿ ಬೇಡೇಕರ (ಪೂರ್ವಾಶ್ರಮದ ಬಾಳೂತಾಯಿ ಖರೆ) ಸುಪ್ರಸಿದ್ಧ ಮರಾಠೀ ಚಲಚ್ಚಿತ್ರ ನಿರ್ಮಾಪಕರೂ, ದಿಗ್ದರ್ಶಕರೂ ಆದ ಶ್ರೀ ವಿಶ್ರಾಮ ಬೇಡೇಕರ ಅವರ ಪತ್ನಿಯರೆಂಬುದು ಅನೇಕರಿಗೆ ಆಗಲೇ ತಿಳಿದಿದ್ದಿತು.

ಹೋದ ವರ್ಷವೇ ಅವರ ಈ ಗುಪ್ತನಾಮದ ವಿಷಯವಾಗಿಯೂ, ಮತ್ತು ಅವರ ಬರವಣಿಗೆಯ ಕುರಿತೂ ಕಾಲಕಾಲಕ್ಕೆ ನಡೆದ ಚರ್ಚೆ, ಊಹಾಪೋಹ, ಮತ್ತೆ ಬೇರೆ ವಿಮರ್ಶಾತ್ಮಕ ಲೇಖನ ಇವುಗಳ ಸಂಕಲನಾತ್ಮಕ ಹೊತ್ತಿಗೆಯೊಂದು 'ವಿಭಾವರೀಚೆ ಟೀಕಾಕಾರ' (ವಿಭಾವರಿಯ ಟೀಕಾಕಾರರು) ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಅವರ ಪುಸ್ತಕಗಳ ಕುರಿತು ಶಾಲೆ, ಕಾಲೇಜು, ಮತ್ತಿತರ ಸಾಹಿತ್ಯ ಸಭೆಗಳಲ್ಲಿ ನಡೆದ ಚರ್ಚೆ, ಬೇರೆ ಬೇರೆ ಚಿಕ್ಕ ದೊಡ್ಡ ಪತ್ರಿಕೆಗಳಲ್ಲಿ ಪ್ರಕಟವಾದ ವಿಮರ್ಶಾತ್ಮಕ ಲೇಖನ ಮುಂತಾದ ಎಲ್ಲ ಸಾಮಗ್ರಿ ಕೈಗೆ ದೊರೆಯುವುದು ಸಾಧ್ಯವಿಲ್ಲದಿದ್ದರೂ, ಕೈಗೆ ದೊರೆತುದಷ್ಟೇ, ತಾವು ಪ್ರಕಟಿಸಿದ ಪುಸ್ತಕದಾಕಾರದ ೨೦೦೦ ಪುಟಗಳಷ್ಟಾಗಬಹುದೆಂದು, ಆ ಗ್ರಂಥದ ಸಂಪಾದಕರು ತಮ್ಮ ಮಾತಿನಲ್ಲಿ ಹೇಳಿದ್ದಾರೆ. ಎರಡು, ಎರಡೂವರೆನೂರು ಪುಟಗಳ ಈ ಪುಸ್ತಕದಲ್ಲಿ ಅವರ ಪ್ರತಿಭೆಯನ್ನು ಮೆಚ್ಚಿ ಹೊಗಳಿದವರಲ್ಲಿ ಮಹಾರಾಷ್ಟ್ರದ ಅನೇಕ ನಾಮಾಂಕಿತ ವಾಙ್ಮಯ ವಿಶಾರದರಿದ್ದಾರೆ; ಅವರ ಜೀವನ ದೃಷ್ಟಿಯನ್ನು ತೆಗಳಿದವರೂ ಇದ್ದಾರೆ; ಅವರ ಗುಪ್ತ ನಾಮವನ್ನು ಡಂಭಾಚಾರದ ಸಾಧನವೆಂದು ಜರೆದವರೂ ಇದ್ದಾರೆ. ಆದರೆ ಸ್ತ್ರೀಯೊಬ್ಬಳ ಲೇಖನದ ಕುರಿತು ಸ್ವತಂತ್ರ ಗ್ರಂಥ ನಿರ್ಮಿತಿಯಾಗುವ ಸನ್ಮಾನ ದೊರೆತುದು ಮರಾಠಿಯಲ್ಲಿ ಇದೇ ಮೊದಲು ಸಲವೆಂದು ತೋರುತ್ತದೆ.

ವಿಭಾವರೀ ಶಿರೂರಕರರವರ ಕಥೆ ಕಾದಂಬರಿಗಳಲ್ಲಿ ವ್ಯಕ್ತವಾಗುವ ಸಾಮಾಜಿಕ ದೃಷ್ಟಿಕೋನದ ಕುರಿತು ಅಭಿಪ್ರಾಯಭೇದವಾಗಬಹುದಾದರೂ

ಅವರ ಉನ್ನತ ಪ್ರತಿಭೆಯ ಕುರಿತು, ಅವರ ಲೇಖನ ಶೈಲಿಯ ವೈಖರಿಯ ಕುರಿತು ಬಹಳಷ್ಟು ಮತಭೇದಗಳಿರಲಾರವು. ಅವರ ಕೃತಿಗಳನ್ನು ಓದಿದ ಯಾರೂ ಅವರ ಶಕ್ತಿಯುತವಾದ ಬರವಣಿಗೆಯನ್ನು ಮೆಚ್ಚಿ ತಲೆದೂಗದಿರರು. ೧೦-೧೫ ವರುಷಗಳವರೆಗೆ ಅವರ ವಿಷಯವಾಗಿ ಮಹಾರಾಷ್ಟ್ರ ವಿಮರ್ಶಾ ವಾಙ್ಮಯ ಪ್ರಪಂಚದಲ್ಲಿ ನಡೆದ ಚರ್ಚೆ ಸುಮ್ಮನೆ ನಡೆಯಲಿಲ್ಲ. ಅವರ ಬರವಣಿಗೆ ಕಂಡವರನ್ನು ಕೆಣಕದೆ ಬಿಡಲಿಲ್ಲ. ಅಂಥವರೆಲ್ಲ ತಮ್ಮ ತಮ್ಮ ಪ್ರತಿಕ್ರಿಯೆಗಳನ್ನು ವ್ಯಕ್ತಪಡಿಸಿದರು. ಅವರು ಬರೆದಂಥ ವಿಷಯಗಳ ಕುರಿತು ಬರೆದ ಇತರ ಕತೆ ಕಾದಂಬರಿಗಳಿಲ್ಲವೆಂತಲ್ಲ. ಆದರೆ ಅದೇಕೋ ವಿಭಾವರಿಯಷ್ಟು ತನ್ನ ಬರವಣಿಗೆಯಿಂದಾಗಿ ಪ್ರೀತ್ಯಾದರಗಳನ್ನು ಅದರಂತೆ ದ್ವೇಷ ತಿರಸ್ಕಾರಗಳನ್ನು ತಮ್ಮ ಉಡಿಯಲ್ಲಿ ಕಟ್ಟಿಕೊಂಡವರಿಲ್ಲ. ಈ ಪುಸ್ತಕವನ್ನೋದಿ ಕನ್ನಡ ವಾಚಕರು ತಮ್ಮ ನಿರ್ಣಯಕ್ಕೆ ಬರಬಹುದಾದರೂ, ಈ ವರೆಗೆ ಆದ ಪ್ರತಿಕ್ರಿಯೆಗಳ ದೃಷ್ಟಿಯಿಂದ ಒಂದೆರಡು ಮಾತುಗಳನ್ನು ಹೇಳಬೇಕೆನ್ನಿಸುತ್ತದೆ.

'ಕಳ್ಯಾಂಚೆ ನಿಶ್ವಾಸ'ವು ಮೊಟ್ಟಮೊದಲು ೧೯೩೩ರಲ್ಲಿ ಪ್ರಕಟವಾದಾಗ ಮರಾಠೀ ಸಾಹಿತ್ಯ ಪ್ರಪಂಚದಲ್ಲಿ ಹೊಸದೊಂದು ಪಂಜು ಹತ್ತಿ ಉರಿಯಲಾರಂಭಿಸಿತು. ಅಲ್ಲಿಯವರೆಗೆ ಮೂಕಳಾಗಿ ಎಲ್ಲ ದುಃಖಗಳನ್ನು ಬಾಯಿ ಬಿಗಿಹಿಡಿದು ಅನುಭವಿಸಿದ್ದ ಸ್ತ್ರೀ ಮೊದಲುಸಲ ತನ್ನ ದುಃಖಗಳನ್ನು ತೆರೆದು ಹಿಡಿದು, ತಾನೂ ಒಬ್ಬಳು ಮನುಷ್ಯಳು, ತನ್ನ ಸಮಸ್ಯೆಗಳೂ ಇತರ ಸಮಸ್ಯೆಗಳಷ್ಟೇ ಮಹತ್ವದವು. ಅವುಗಳನ್ನು ಸಹಾನುಭೂತಿಯಿಂದ ಅರಿತು ನೋಡಿ ಪರಿಹಾರ ಹೇಳಲೇಬೇಕು ಎಂದು ಎಲ್ಲರೆದುರು ಸಾರಲು ಬಂದು ನಿಂತಳು. ವಿಶೇಷವಾಗಿ ಪಲ್ಲಟಿಸುತ್ತಿದ್ದ ಸಮಾಜ ವ್ಯವಸ್ಥೆಯಿಂದಾಗಿ ಮಧ್ಯಮ ವರ್ಗದವರ ಮನೆಗಳಲ್ಲಿದ್ದ ಕನ್ನಿಕೆ ತನ್ನೆಲ್ಲ ಕೌಮಾರ್ಯದ ಆಶೆ ಆಕಾಂಕ್ಷೆಗಳನ್ನು ತನ್ನಲ್ಲಿಯೇ ಹುದುಗಿಸಿಟ್ಟುಕೊಂಡು ಜಗತ್ತನ್ನೆದುರಿಸಬೇಕಾದ ಪ್ರಸಂಗವುಂಟಾಯಿತು. ಬಾಲ್ಯ ಕಳೆಯುತ್ತಲೇ ಮದುವೆಯಾಟವಾಡಿ ಗಂಡನ ಮನೆಯಲ್ಲಿ ಕಣ್ಮರೆಯಾಗುತ್ತಲಿದ್ದ ಕಾಲ ಅಳಿದುಹೋಯಿತು; ಅಲ್ಲಿಯವರೆಗೆ ನಡೆದುಬಂದಿದ್ದ ಸಾಮಾನ್ಯರ ಜೀವನ ಕ್ರಮದಲ್ಲಿ ವಿಶೇಷ ಸ್ಥಿತ್ಯಂತರಗಳಾದವು. ಮದುವೆಯ ವಯಸ್ಸ

ಮುಂದೆ ಬಿದ್ದಿತಲ್ಲದೆ, ಮದುವೆಯಾಗುವುದೂ ಮೊದಲಿಗಿಂತ ಕಠಿಣ ವಾಯಿತು. ಕೃಷಿ ಪ್ರಧಾನವಾದ ಸಮಾಜ ಜೀವನದಲ್ಲಿ ತಲೆತಲಾಂತರ ದಿಂದ ನಡೆದು ಬಂದಿದ್ದ ಸ್ಥಿರತೆ ಪಟ್ಟಣಗಳಲ್ಲಿ ಸಡಲಿಸಿತು. ಸುಶಿಕ್ಷಿತ ಬಿಳಿಯುಂಗಿಯವರ ಸಮಾಜಕ್ಕಂತೂ ಇದರ ಜಳ ಮೊದಲಿಗೆ ತಾಕಿತು. ನಮ್ಮಲ್ಲಿಗಿಂತ ಮಹಾರಾಷ್ಟ್ರದಲ್ಲಿ ಈ ಬದಲಾವಣೆಗಳು ಬೇಗ ಕಾಣಿಸಿ ಕೊಂಡವು. ಅಲ್ಲದೆ ಅದರೊಡನೆ ಹೊಸ ಪದ್ಧತಿಯ ಸ್ತ್ರೀ ಶಿಕ್ಷಣಕ್ಕೂ ಆರಂಭವಾಯಿತು. ಸಾಮಾನ್ಯವಾದ ಕೌಮಾರದ ಆಶೆ ಆಕಾಂಕ್ಷೆ ಭಾವನೆ ಗಳೊಡನೆ ತನ್ನನ್ನು ತಾನೇ ಇನ್ನೂ ಸರಿಯಾಗಿ ಸಿರುಕಿಸಿ ನೋಡಿಕೊಳ್ಳುವ ಪ್ರವೃತ್ತಿಗೆ ಈ ಶಿಕ್ಷಣದಿಂದ ಮತ್ತಿಷ್ಟು ಪುಟಕೊಟ್ಟಂತಾಯಿತು.

ಹೊಸ ರೀತಿಯ ಸಾಮಾಜಿಕ ಉತ್ಪಾದನೆಯ ವ್ಯವಸ್ಥೆಗನುರೂಪವಾಗಿ ಭೂಮಿಯಲ್ಲಿ ದುಡಿದು ತಿನ್ನುವ, ಅಥವಾ ಭೂಮಿಯ ಮೇಲೆಯೇ ಅವಲಂಬಿ ಸಿರುವ ಒಟ್ಟು ಕುಟುಂಬವಿಲ್ಲದಂತಾಗಿ, ಒಂಟಿ ಕುಟುಂಬಗಳ ಬೆಳವಣಿಗೆ ಯಾದಂತೆಲ್ಲ, ಮದುವೆಯ ವಯಸ್ಸು ಮುಂದೆ ಬೀಳುತ್ತ ನಡೆಯಿತು. ಜನ ಜೀವನದಲ್ಲಿ ಕೃಷಿಪ್ರಧಾನ ಜೀವನದ ಒಂದು ಸ್ಥಿರತೆ ಇಲ್ಲದಾಯಿತು. ಇದ್ದ ಭೂಮಿಯಲ್ಲಿಯೇ ದುಡಿದೋ ದುಡಿಯದೆಯೋ ತಿಂದಿರುವದೇ ಉಪಜೀವಿ ಕೆಯ ನಿಶ್ಚಿತ ಸಾಧನವಾಗಿರುವಾಗ, ವಯಸ್ಸಿಗೆ ಬಂದ ಮಗನ ಮದುವೆ ಮಾಡಿ ಬಿಡುವದು ಸ್ವಾಭಾವಿಕವಾಗಿದ್ದಿತು. ಆದರೆ ಕಳೆದರ್ಧ ಶತಮಾನದಲ್ಲಿ ಉಂಟಾಗುತ್ತಿದ್ದ ಬದಲಾವಣೆಗಳು ನಮ್ಮಲ್ಲಿಯ ಮಧ್ಯಮವರ್ಗದವರ ಜೀವನದ ರೀತಿಯನ್ನಂತೂ ನಿಶ್ಚಯವಾಗಿ ಬದಲಿಸಿದವು. ಅದರಿಂದಾಗ ಉದ್ಭೂತವಾದ ಅನೇಕ ಪ್ರಶ್ನೆಗಳಲ್ಲಿ ಪ್ರೌಢಕುಮಾರಿಕೆಯ ಪ್ರಶ್ನೆಯೂ ಒಂದು ಮಹತ್ವದ ಅಂಶ. ಸ್ವತಂತ್ರವಾಗಿ ದುಡಿದು, ಗಳಿಸಿ, ಮನೆಹೂಡುವ ಗಂಡುಮಕ್ಕಳ ವಯಸ್ಸು ಈ ವರ್ಗದಲ್ಲಿ ಮುಂದೆ ಬಿದ್ದಂತೆಲ್ಲ, ಕುಮಾರಿಕೆ ಯರು ಪ್ರೌಢರಾಗಿ ಮನೆಯಲ್ಲಿರಬೇಕಾಯಿತಷ್ಟೇ ಅಲ್ಲದೆ, ಶಿಕ್ಷಣ ಪಡೆದು, ಪುರುಷರಂತೆ ಅಲ್ಲಲ್ಲಿ ನವಕರಿ ದೊರಕಿಸಿ, ಬೆಳೆದು ನಿಂತ ತಮ್ಮ ತಂದೆ ತಾಯಿಯರ ಸಂಸಾರಕ್ಕೆ ಆಧಾರ ಕೊಡುವ ಪ್ರಸಂಗವೂ ಅನೇಕ ಕುಮಾರಿಕೆಯರಿಗೆ ಉಂಟಾದ್ದರಿಂದ ಅಪರಿಹಾರ್ಯವಾಗಿ ಮದುವೆ ಮುಂದೆ ಬಿದ್ದಿತು. ಹೀಗೆ ಸ್ವಾಭಾವಿಕವಾದ ಪುರುಷನ ಸಹವಾಸದ ಸುಖ ಯೌವನ

ದಲ್ಲಿ ದೊರೆಯದೆ ಹೋದ, ಅನೇಕ ಕೋಪ ತಾಪಗಳಿಂದ ಬೆಂದ, ಅನೇಕ ಸಲ ನಿಷ್ಕಾರಣವಾದ ಅವಹೇಲನೆಗೂ ತುತ್ತಾದ ಕುಮಾರಿಕೆಯರು ಬಿಸುಸುಯ್ವ ನಿಟ್ಟುಸಿರುಗಳ ಚಿತ್ರಣವೇ ಅವರ 'ಮೊಗ್ಗೆಗಳ ನಿಟ್ಟುಸಿರು' ಎಂಬ ಪುಸ್ತಕದ ವಸ್ತುವಾಗಿದೆ. ತಾವು ಸ್ವಂತ ಕಂಡರಿತ, ಇಂತಹ ಅನೇಕ ತಪ್ತ ಅಲರುಗಳ ಮೂಕ ವೇದನೆಗಳ ಹೃದಯ ಕೊರೆವ ಚಿತ್ರಗಳನ್ನು ಹೃದಯ ಕರಗುವಂತೆ ವಿಭಾವರೀಬಾಯಿಯವರು ಚಿತ್ರಿಸಿದ್ದಾರೆ.

ಮನುಷ್ಯ ಜೀವನದಲ್ಲಿ ಕಾಮದ ಸ್ಥಾನವೇನು ಎಂಬ ಸಮಸ್ಯೆ ಇಂದು ನಿನ್ನೆಯದಲ್ಲ; ಅದರ ವಾಙ್ಮಯೀನ ಚಿತ್ರಣವೂ ಅಷ್ಟೇ ಪುರಾತನವಾದುದಾಗಿದೆ. ಆದರೆ ಅದರಿಂದ ಉದ್ಭೂತವಾಗುವ ಸಮಸ್ಯೆಗಳನ್ನು ಜನ ಸಾಮಾನ್ಯರ ದೃಷ್ಟಿಯಿಂದ, ಎಲ್ಲ ಪೂರ್ವಗ್ರಹ, ಎರವಲು ನೀತಿಯ ಕಲ್ಪನೆಗಳನ್ನು ಬದಿಗಿಟ್ಟು, ಶಾಸ್ತ್ರೀಯವಾಗಿ, ಲೈಂಗಿಕ ಪ್ರವೃತ್ತಿಯ ಎಲ್ಲ ತರದ ಅಭಿವ್ಯಕ್ತಿಯ ತರಹೆಗಳನ್ನು, ಅದರೆಲ್ಲ ರೂಪು-ರಂಗುಗಳನ್ನು, ಪ್ರಕೃತಿ-ವಿಕೃತಿಗಳನ್ನು ಕೂಲಂಕಷವಾಗಿ ಚರ್ಚಿಸಲು ಮೊದಲಾದುದು ಕಳೆದ ಒಂದು ಶತಮಾನದಲ್ಲಿಯೇ. ಮಾನಸಶಾಸ್ತ್ರದ ಅಭ್ಯಾಸದಲ್ಲಿ ವಿಶೇಷವಾಗಿ ಸುಪ್ತ ಮನದ ನಮ್ಮ ಜ್ಞಾನದಲ್ಲಿ ಮಹಾಕ್ರಾಂತಿಯನ್ನುಂಟುಮಾಡಿದ ಜರ್ಮನ್ ಮಾನಸಶಾಸ್ತ್ರಜ್ಞನಾದ ಸಿಂಗ್ಮನ್ ಫ್ರಾಯಿಡ್ (Syngman Freud)ನ ಹೆಸರು ಕೇಳದವರಿಲ್ಲ. ಅವನ Psycho-analysis—'ಮನೋವಿಶ್ಲೇಷಣ'ದ ತತ್ವ ಮನುಷ್ಯನ ಮೂಲಭೂತವಾದ ಕಾಮಭಾವನೆಗೆ ಅತ್ಯಂತಿಕ ಮಹತ್ವವನ್ನು ತಂದೊದಗಿಸಿತು. ಮೂಲಭೂತ ಕಾಮ ಪ್ರವೃತ್ತಿಯೇ ಜೀವನದ ಚೈತನ್ಯದ ಮೂಲಸ್ವರೂಪವೆಂದೂ, ಅದೇ ಮಾನವನ ಎಲ್ಲ ಅವಸ್ಥೆಗಳಲ್ಲಿ, ಅವನೆಲ್ಲ ಕೃತಿಗಳಲ್ಲಿ ಮಾರ್ಪಟ್ಟು ರೂಪ ಪಡೆಯುತ್ತದೆಯೆಂಬುದೇ ಅವನ ಮಹತ್ವದ ಸಿದ್ಧಾಂತ. ಅವನ ಎಲ್ಲ ಸಿದ್ಧಾಂತಗಳ ಸರಿಯಾದ ಅರ್ಥವೇನು ಎಂಬ ಬಗ್ಗೆ ಮತಭೇದವಿದ್ದಂತೆಯೇ ಅವನ ತಾತ್ವಿಕಭೂಮಿಕೆಯ ಸತ್ಯತೆಯ ವಿಷಯವಾಗಿಯೂ ಮತಭೇದವಿಲ್ಲ. ಅದೇನೇ ಇದ್ದರೂ ಅವನ ಸಿದ್ಧಾಂತಗಳು ಉಳಿದೆಲ್ಲ ಸಾಮಾಜಿಕ ಪ್ರಶ್ನೆಗಳ ಅಭ್ಯಾಸದ ಮೇಲೂ ಅಲ್ಲದೆ ಆಧುನಿಕ ವಾಙ್ಮಯದ ಮೇಲೂ ಬಹಳ ಗಾಢವಾದ ಪರಿಣಾಮವನ್ನುಂಟುಮಾಡಿವೆ.

ಫ್ರಾಯ್ಡ್‌ನ ಮನಃಶಾಸ್ತ್ರವೇ ಆಗಲಿ, ಡಾರ್ವಿನ್ನನ ಪ್ರಾಣಿಶಾಸ್ತ್ರವೇ ಆಗಲಿ ಮನುಷ್ಯನ ಜೀವನದ ವಿಷಯಕವಾದ ತತ್ವಲೋಕಕ್ಕೆ ಒಂದು ಮಹತ್ವದ ಪ್ರಮೇಯವನ್ನೊದಗಿಸಿಕೊಟ್ಟವು: ನಮ್ಮ ಬುವಿಯ ಬಾಳಿನ ಒಳಿತು-ಕೆಡಕುಗಳು, ನಮ್ಮ ಬಾಳಿನ ಏರಿಳಿತಗಳು ಇಲ್ಲಿಯದೇ ಒಂದು ನಿಯಮಕ್ಕೆ ಒಳಪಟ್ಟವೆಯೇ ಹೊರತು, ನಮ್ಮೆಲ್ಲ ಆಗು-ಹೋಗುಗಳನ್ನು ಹೊರಗಿನಿಂದ ಗೊಂಬೆಯಾಟವಾಡಿಸುವ ಶಕ್ತಿಯೊಂದು ಬೇರೆಯಾಗಿಯೇ ಇಲ್ಲ. ಅಂದಿಗೆ ಧರ್ಮ, ಅರ್ಥ, ಕಾಮ, ಮೋಕ್ಷಗಳ ಕಲ್ಪನೆಗಳೂ ಬೇರೆಯಾದವು. ಮುಖ್ಯವಾಗಿ ಮೋಕ್ಷದ ಕಲ್ಪನೆ ಬದಲಿಸಿತು. ಒಂದು ಅವ್ಯಕ್ತವಾದ ಪರಮ ಆತ್ಮನಲ್ಲಿ ನಮ್ಮೆಲ್ಲರ ಸಹಸ್ರಾರು ಆತ್ಮಗಳು ವಿಲಿನಗೊಳ್ಳುವ ಸಾಯುಜ್ಯದ ಬದಲು, ಇಲ್ಲಿಯ ನಮ್ಮ ಬಾಳನ್ನೇ ಇನ್ನಿಷ್ಟು ಆರ್ತತೆಯಿಂದ ನಂಬಿರುವ, ಸಕಲ ಮಾನವ ಜಾತಿಯ ಸಹಕಾರ, ಪ್ರೇಮಗಳ ಅಸ್ತಿವಾರದ ಮೇಲೆ ಕಟ್ಟಲ್ಪಟ್ಟ ನಿರೀಶ್ವರ ಸಂಸ್ಕೃತಿಯ, ನವಮಾನವೀಯತೆಯ ಆದರ್ಶವೊಂದು ನಮ್ಮ ಜೀವನದ ಧ್ರುವವೆಂಬ ತಿಳುವಳಿಕೆ ಬೆಳೆದು ಬಂದಿತು. ಈ ತತ್ವ ಪ್ರಣಾಲಿಗೆ ಅನುಕೂಲವಾದ ಅಂಶಗಳು ಎಲ್ಲ ಕಾಲದ ವಿಚಾರವಂತರಲ್ಲಿ ಕಂಡುಬಂದರೂ, ಯೂರೋಪಿನಲ್ಲಿ ಹೊಸ-ತಿಳಿವಿನ ಬೆಳಕು (Renaissance) ಮೂಡಿದ ಕಾಲದಿಂದ ಅದಕ್ಕೊಂದು ಕಳೆಕಟ್ಟಿ, ಒಂದು ನಿರ್ದಿಷ್ಟವಾದ ಸ್ವರೂಪ ಬರತೊಡಗಿತು. ಐಹಿಕ ಸುಸಂಸ್ಕೃತತೆ (Materialist Culturism) ಎಂದು ನಿರ್ದೇಶಿಸಬಹುದಾದ ಈ ವಿಚಾರ ಸರಣಿಯು ಧಾರ್ಮಿಕ ಅಂಧಶ್ರದ್ಧಾವಾದವನ್ನು (Religious Obscurantism) ಸಂಪೂರ್ಣವಾಗಿ ನಿರಾಕರಿಸಿ, ಕೇವಲ ಮಾನವೀಯವಾದ ಆದರ್ಶವೊಂದನ್ನು ಗುರಿಯಾಗಿಟ್ಟುಕೊಂಡು, ಆ ಆದರ್ಶವನ್ನು ಕ್ರಮೇಣ ಹೆಚ್ಚುಹೆಚ್ಚಾಗಿ ಆವಿಷ್ಕರಿಸಲು ನಡೆಸಿದ ಪ್ರಯತ್ನಗಳ ಫಲವಾಗಿಯೇ ಆಧುನಿಕ ವಿಜ್ಞಾನವೂ ಮತ್ತು ಅದರ ನಿಜವಾದ ತಿರುಳನ್ನೇ ಪ್ರತಿಫಲಿಸುವ ಸಮಾಜಶಾಸ್ತ್ರಗಳೂ ನಿರ್ಮಿತವಾದವು. ಕಳೆದೆರಡು ಶತಮಾನಗಳಲ್ಲಿ ನಡೆಸಿದ ಸಾಮಾಜಿಕ, ಆರ್ಥಿಕ, ರಾಜಕೀಯ ಪ್ರಯೋಗಗಳು ಈ ನವೀನ ದರ್ಶನವನ್ನು ಸತ್ಯಸೃಷ್ಟಿಗಿಳಿಸಲು ಹೆಣಗಿದವು. ಈ ಅಮೃತಮಂಥನದ ಮಹಾ ಕೋಲಾಹಲದಲ್ಲಿ ಹಲಾಹಲವೂ ಎದ್ದಿದೆ. ಒಂದು ಅಮೂರ್ತವಾದ,

ಕಲ್ಪನಾಮಯವಾದ ಮಾನವನ ಏಳಿಗೆಗೆಂದೇ ಮಾನವನ ಮೂಲಭೂತ ಸ್ವಾತಂತ್ರ್ಯವನ್ನೇ ಹರಣಗೊಳಿಸಿ, ಅವನ ವ್ಯಕ್ತಿತ್ವವನ್ನು ಕಃಪದಾರ್ಥ ವನ್ನಾಗಿಸಿ, ಕೇವಲ ಯಾಂತ್ರಿಕ ಪ್ರಗತಿಯ ಗುಡಿ ಕಟ್ಟಲೆಳಸುವ ಪ್ರಯತ್ನ ಗಳು ಬಹಳ ದೊಡ್ಡ ಪ್ರಮಾಣದಿಂದ ನಡೆದಿದ್ದು, ಮತ್ತೊಂದು ತರದ ಐಹಿಕ ಅಂಧಶ್ರದ್ಧಾವಾದವೊಂದು ತಲೆಯೆತ್ತಿದೆ. ಅಲ್ಲದೆ ಪದಾರ್ಥವಿಜ್ಞಾನ, ಪ್ರಾಣಿ ಶಾಸ್ತ್ರ, ಮನಃಶಾಸ್ತ್ರದ ಇತ್ತೀಚಿನ ಕೆಲವು ಬಿಡಿಸಲಾರದ ಸಮಸ್ಯೆಗಳು ಕಳೆದ ಮೂರು-ನಾಲ್ಕುನೂರು ವರ್ಷಗಳ ಹೊಸ ತಿಳುವಳಿಕೆಯ ತಳಪಾಯ ಭದ್ರವಾಗಿಲ್ಲವೆಂಬ ಕೇವಲ ಭೌತಿಕವಾದ ತತ್ವಜ್ಞಾನದ ಅಪೂರ್ಣತೆಯೇ ಅದರ ಕಾರಣವೆಂಬ ಮಾತನ್ನು ಸಿದ್ಧಗೊಳಿಸುತ್ತಿದೆಯೆಂದು ಸಾರುವವರೂ ಇದ್ದಾರೆ. ಹೀಗೆ ಮೂಲ ಅಜ್ಞಾನದಿಂದ ಮಾನವನ ಬಿಡುಗಡೆಗೆಂದು ನಡೆದ ಅವ್ಯಾಹತ ಸಾಹಸ ಪ್ರಯತ್ನಗಳು ಈ ಎಲ್ಲ ಪ್ರಶ್ನೆಗಳಿಗೆ ಉತ್ತರ ಕೊಡಬೇಕಾಗಿದೆ. ಆದರೆ ಯಾವದೇ ತರದ ಧಾರ್ಮಿಕ ಕಲ್ಪನೆಯ, ಮೂಲ ಸಂಕಲ್ಪವಾದದ (Teleology) ಪುನರಾವೃತ್ತಿಯು ನಮ್ಮ ಸಮಸ್ಯೆಗಳನ್ನು ಬಿಡಿಸಲಾರದೆಂದೂ, ವಿಜ್ಞಾನದ ದಾರಿಯೇ ಸತ್ಯದರ್ಶಿಯೆಂದೂ, ಅದೇ ನಮ್ಮ ಸಮಸ್ಯೆಗಳಿಗೆ ಸಮಾಧಾನಕರವಾದ ಉತ್ತರ ಕೊಡಬಲ್ಲದೆಂದೂ ಮಾತ್ರ ಮನುಷ್ಯನೇ ಇಂದಿನವರೆಗಿನ ಎಲ್ಲ ತತ್ವಜ್ಞಾನಗಳನ್ನು, ನಮ್ಮ ಬಾಳುವೆಯ ಆಗುಹೋಗುಗಳನ್ನು ರೂಪಿಸಿದವನಾದುದರಿಂದ ಅವನು ತನ್ನ ಕ್ರಿಯಾತ್ಮಕ ಶಕ್ತಿಯಲ್ಲಿ, ಅನುಭವದ ಪಾಠಗಳನ್ನು ಕಲಿತು ತಪ್ಪು ಗಳನ್ನು ತಿದ್ದಿಕೊಂಡು ತಿಳಿದು ನಡೆಯಬಲ್ಲ ತನ್ನ ಸಂಸ್ಕಾರಕ್ಷಮ ಸಮಂಜತೆ ಯಲ್ಲಿ ವಿಶ್ವಾಸವಿಟ್ಟು, ಹೊಸ ಜಗವನ್ನು ನಿರ್ಮಿಸಲು ಹೆಣಗುವದರಲ್ಲಿಯೇ ಸಕಲ ಪುರುಷಾರ್ಥಗಳೂ ಅಡಗಿವೆಯೆಂದು ಅನೇಕ ವಿಚಾರವಂತರು ಪ್ರತಿಪಾದಿಸಹತ್ತಿದ್ದಾರೆ. ಈ ಮೂಲಗಾಮಿಯಾದ ವಿಚಾರಗಳು ಈಗಾಗಲೇ ಹೊಸ ಅರ್ಥಶಾಸ್ತ್ರ, ರಾಜಕೀಯ ಶಾಸ್ತ್ರ, ಹೊಸ ಸಮಾಜ ಸಂಘಟನಾ ಶಾಸ್ತ್ರಗಳಿಗೆ ರೂಪು ಕೊಡಹತ್ತಿವೆಯಲ್ಲದೆ, ಅಲ್ಲಲ್ಲಿ ಆ ತರದ ನವಜೀವನ ಕಟ್ಟುವ ಪ್ರಯತ್ನಕ್ಕೂ ಆರಂಭವಾಗಿದೆ. ಆದರೆ ಈ ರೀತಿ ಕೆಲವು ಗುರುತು ಹಾಕಿಕೊಂಡು ಮುನ್ನಡೆದಿರುವ ಈ ನವೀನ ಮಾನವತೆಯು, ಮಾನವನ ವ್ಯಕ್ತಿತ್ವದ ಅನನ್ಯತೆಯನ್ನೂ, ಅವನ ಮನದ ಅಂತಃಸತ್ವದ ಬೆಳವಣಿಗೆಯ

ಅಮರ್ಯಾದಿತ್ವವನ್ನೂ ಅಲ್ಲಗಳೆಯುವದಿಲ್ಲ. ವಿಚಾರಸ್ವಾತಂತ್ರ್ಯ, ಸಕಲರ ಸಾಮೂಹಿಕ ಹಿತಕ್ಕೆ ಕಣ್ಣೆದುರಿನಲ್ಲಿಯೇ ಭಂಗತಾರದ ವೈಯಕ್ತಿಕ ಅಥವಾ ಸಾಂಘಿಕ ಆಚಾರ ಸ್ವಾತಂತ್ರ್ಯ ಇವುಗಳನ್ನು ಅದು ಮನ್ನಿಸುತ್ತದೆ. ಮಾನವನ ಮನದ ಅಪರಿಮಿತ ಆಳವನ್ನೂ, ಅವನ ಸಾತ್ವಿಕ ಸತ್ವ ಕುದುರಿ ಅನಂತ ವಾಗಿ ವಿರಸಿಸಬಲ್ಲದೆಂಬ ಮಾತನ್ನೂ ಒಪ್ಪಿರುವಾಗಲೇ ನಮಗೆ ಕೆಲವೊಂದು ಪ್ರಮೇಯಗಳು ಇಂದು ಬಗೆಹರಿಯದಿದ್ದಾಗ್ಯೂ, ಯಾವುದೊಂದು ಅಂಥ ಶ್ರದ್ಧೆಯಾಗಲಿ, ಗೂಢವಾದವಾಗಲಿ, ಜ್ಞಾನದ ತಿಳಿಬೆಳಕನ್ನು ಕೊಡಲಾರ ದೆಂಬ ಮನೋವೃತ್ತಿ ಈ ಹೊಸತನದ ಒಂದು ಅತ್ಯಂತ ಮಹತ್ವದ ಅಂಗ ವಾಗಿ ಬಂದಿದೆ. ಮಾನವನ ಈ ವರೆಗಿನ ಐತಿಹಾಸಿಕ ಬೆಳವಣಿಗೆ ಈ ಒಂದು ಮಾತನ್ನೂ ಖಚಿತವಾಗಿ ಸಾರುತ್ತದೆಂದು ಅದು ನಂಬಿರುತ್ತದೆ. ಮಾನವ ಜೀವಿತದ ಸಾರ್ಥಕತೆಯು, ಇತಿಕರ್ತವ್ಯತೆಯು, ಸಕಲ ಪುರುಷಾರ್ಥಗಳ ಸಾರವನ್ನು ಅದು ಹೆಚ್ಚುಕಡಿಮೆ ಬುದ್ಧಿಗೆ ವೇದ್ಯವಾಗಬಹುದಾದ ರೀತಿಯಲ್ಲಿ ಕಾಣಲೆಳಸುತ್ತದೆ. ಈ ತಿಳಿವಿನ ತತ್ವಪ್ರಪಂಚಕ್ಕೆ ಇದೇ ಧೃವ. ಆದರೆ ಈ ಧೃವ ಒಂದು ವಿಚಾರಸರಣಿಯು ದಾರಿಗೆ ಬೊಟ್ಟು ಮಾಡಿ ತೋರಿಸುತ್ತ ದೆಯೇ ಹೊರತು, ಅದೊಂದು ಅವಿಚಲವೂ, ಅನಾದಿಯೂ, ಪರಾತ್ಪರವೂ ಆದ ಧ್ಯೇಯ ಬಿಂದುವಾಗಿಲ್ಲ. ಅದೊಂದು ಗತಿಮಾನ ಧೃವವಾಗಿದೆ. ಅತಿ ರೇಕದ ಯಾಂತ್ರಿಕ ಜಡವಾದದಂತೆ ಅದು ಏಕಮುಖವಾದ ಹಟವಾದಕ್ಕೆ ಆಸ್ಪದ ಕೊಡುವದಿಲ್ಲ. ಸೃಷ್ಟಿಯ ವೈಶಾಲ್ಯ, ಸಮಗ್ರತೆ ಮತ್ತು ಸವ್ಯಕ್ತತ್ವ ವನ್ನೇ ಆದು ತನ್ನ ಧ್ಯೇಯವಾಗಿಟ್ಟುಕೊಂಡಿದೆಯಾದರೂ ನಮ್ಮ ಜೀವನವು ಅಪೌರುಷೇಯವೂ, ಅಧಿದೈವಿಕವೂ, ಆದ ಮೂಲ ಸಂಕಲ್ಪವೊಂದರ ಪೂರ್ವನಿರ್ಮಿತ (pre-determined) ವಿಕಾಸವೆಂಬ ಅಥವಾ ಅದರ ಇಚ್ಛಾಮಾತ್ರವಾದ ಗೊಂಬೆಯಾಟದ ಕೇವಲ ಪಡಿನೆಳಲು ಮಾತ್ರ ಅದು ಆಗಿದೆಯೆಂಬ ಮಾತನ್ನು ಅದು ಒಪ್ಪುವದಿಲ್ಲ.

ಈ ರೀತಿ ಮುಪ್ಪುರಿಗೊಂಡು ಮುನ್ನಡೆದಿರುವ ವಿಚಾರ ಪ್ರವಾಹಗಳು ಎಲ್ಲ ವಿಚಾರವಂತರ ಸೊತ್ತಾಗುತ್ತ ನಡೆದಿವೆ. ಸಮಾಜಶಾಸ್ತ್ರ, ರಾಜಕೀಯ ಶಾಸ್ತ್ರ, ಅರ್ಥಶಾಸ್ತ್ರಗಳಿಗೆ ಅವು ಹೊಸರೂಪಕೊಟ್ಟಂತೆಲ್ಲ, ಈ ಕಲ್ಪನೆಗಳು ಸಮಾಜಜೀವನದಲ್ಲಿ ನೆಲೆಗೊಳುವಂತೆ ಸಾಮಾಜಿಕ ಸಂಸ್ಥೆಗಳಿಗೆ ರೂಪ ಕೊಡುವ ಕೆಲಸವಾಗಿದೆ. ಇದೆಲ್ಲದರ ಪಡಿನೆಳಲು ಸಾಹಿತ್ಯದಲ್ಲಿ ಮೂಡಲಿಲ್ಲ.

ಭೂತಾಟಿಕೆ, ಕಣ್ಣುಕಟ್ಟು, ದೈವವಾದ ಮತ್ತು ಇನ್ನಿತರ ಪ್ರಾಚೀನ ಸಮಾಜಗಳ ಬಣ್ಣ ಬಣ್ಣದ ಅದ್ಭುತ ನಂಬಿಕೆಗಳನ್ನುಳಿದು. ಹೊಸ ತಿಳಿವಿನ ಬೆಳಕಿನಿಂದ ಪ್ರೇರಣೆ ಪಡೆದು ಮನುಷ್ಯ ತನ್ನವೇ ಬುದ್ಧಿ ಸತ್ವಗಳನ್ನು ಪಟ್ಟುಗಟ್ಟಿ ಮಾನನೀಸಹಕಾರ ಸಮಂಜಸತೆಗಳನ್ನು ನಂಬಿದಂತೆಲ್ಲ, ಸಾಹಿತ್ಯದಲ್ಲಿಯೂ ಮನೋವ್ಯಾಪಾರಗಳ ಚಿತ್ರಣವೇ ಪ್ರಾಧಾನ್ಯ ಪಡೆದಿದೆಯಲ್ಲದೆ, ಅದಕ್ಕನುರೂಪವಾದ ಕಾದಂಬರಿ, ಸಣ್ಣಕತೆಗಳೇ ಮೊದಲಾದ ವಾಙ್ಮಯ ಪ್ರಕಾರಗಳು ಬೆಳೆದು ಬಂದಿರುವದು ಕಂಡು ಬರುತ್ತದೆ. ಮೇಲೊಮ್ಮೆ ಹೇಳಿದಂತೆ ಮಾನವ ಜೀವನದ ಚಿತ್ರಣವೇ ಎಲ್ಲ ಕಾಲಗಳ ವಾಙ್ಮಯದ ಕಾರ್ಯವಾಗಿದ್ದರೂ, ಹೊಸ ಜಗದ ಹೊಸ ಅರ್ಥೋತ್ಪಾದನೆಯ ಪದ್ಧತಿಯಿಂದಾಗಿ ಬಳಕೆಯಲ್ಲಿ ಬಂದ ಆವಾಧವ್ಯವಾದ, ತೊಡಕು ತೊಡಕಾದ ಸಮಾಜರಚನೆ ಮತ್ತು ಅದರಿಂದುದ್ಭೂತವಾದ ನಾನಾಪ್ರಕಾರದ ಮನುಷ್ಯ ಮನುಷ್ಯರ ನಡುವೆ ಬೆಳೆದು ಬಂದಿರುವ ಸಂಬಂಧದ ಪರಿಗಳು, ಹೊಸ ಹೊಸ ಸಮಸ್ಯೆಗಳನ್ನು ನಿರ್ಮಿಸಿ ನವ ಮಾನವನಿಗೆ ಯಕ್ಷಪ್ರಶ್ನೆಗಳನ್ನೊಡ್ಡಿದವು. ಈ ಪ್ರಶ್ನೆಗಳಿಗೆ ಉತ್ತರಕೊಡಲು ನವಮಾನವನು ಮಾಡಿದ ಪ್ರಾಮಾಣಿಕ ನವಮಾನವನ ಅಂತಸ್ಥ ಪ್ರತಿಭೆಗೆ, ಅವನು ಇಲ್ಲಿಯು ವರೆಗೆ ಸಾಹಸಕ್ಕೆ ಸಾಕ್ಷಿಯಾಗಿವೆ. ಎಲ್ಲ ಸಮಸ್ಯೆಗಳೂ ಬಿಡದಿದ್ದರಿಲ್ಲ. ಅವನು ಇಲ್ಲಿಯುವರೆಗೆ ಸಾಧಿಸಿರುವ ಕಾರ್ಯಭಾಗವೇ ಸ್ತುತ್ಯವೂ, ಅವನ ಶಕ್ತಿಸಾಹಸಗಳಿಗೆ ಒಪ್ಪುವಂತಹದೂ ಆಗಿದೆ. ಇದನ್ನು ಒರೆಯುತ್ತಿದ್ದಂತೆಯೇ ಇಂದಿನ ‘ಟಾಯಿಮ್ಸ್’ ಪತ್ರದಲ್ಲಿ ಇಂದಿನ ಯುಗದ ಹಿರಿತತ್ವಜ್ಞಾನಿಗಳಲ್ಲೊಬ್ಬರೆಂದು ಗಣಿಸಲ್ಪಡುವ ಬರ್ಟ್ರೆಂಡ ರಸೆಲ್ಲರ, “ನಮ್ಮ ಇಂದಿನ ಭೂಮಿಕೆ (Philosophy of the times—a Personal creed) ಎಂಬ ಸ್ಫುಟ ಲೇಖವೊಂದು ಪ್ರಕಟವಾಗಿದ್ದು, ಅವರು ಇದೇ ಮಾತನ್ನು ಈ ರೀತಿ ಸುಂದರವಾಗಿ ನಿರೂಪಿಸಿದ್ದಾರೆ—

The western nations have discovered a way of life exempt from certain evils that have beset mankind ever since human beings existed ...They have found out how to combine order with a very high

degree of liberty and with a *progressive culture*, which is one of the glories of our age.

ಹೆಚ್ಚು ಕಡಿಮೆ ಇದೇ ವಿಚಾರ—ರಸಜ್ಞರೆಲ್ಲರು ಹೇಳಿದ ಒಂದು Progressive culture—ಒಂದು ಸಾಂಸ್ಕೃತಿಕ ಮುನ್ನಡೆ—ನವೀನ ವಾಙ್ಮಯವನ್ನು ಪ್ರವೇಶಿಸಿದೆ, ಆಧಿದೈವಿಕವಿಲ್ಲದ ನೀತಿ ಮತ್ತೆಯೊಂದು (Secular Ethics) ಅದರ ಚುಕ್ಕಾಣಿಯಾಗಿದೆ.

ಈ ಎಲ್ಲ ವಿಚಾರಗಳು ಇಷ್ಟು ಸ್ಪಷ್ಟವಾದ ರೀತಿಯಲ್ಲಿ ಎಲ್ಲ ನವ ಸಾಹಿತ್ಯ ಕೃತಿಗಳನ್ನು ಪ್ರೇರಿಸಿವೆಯೆಂದಾಗಲೀ ಅಥವಾ ಎಲ್ಲ ಸಾಹಿತ್ಯ ಕೃತಿಗಳೂ ಈ ಹೊಸದಾದ ಸರ್ವಾಂಶಗಳನ್ನು ಸ್ವೀಕರಿಸಿವೆಯೆಂದಾಗಲೀ ನಮ್ಮ ಅಭಿಪ್ರಾಯವಲ್ಲ. ಅನೇಕರು ಹೊಸ ಶ್ರದ್ಧೆಯನ್ನು ಕಾಣದೆ ಹೋಗಿದ್ದಾರೆ. ಅಷ್ಟೇಕೆ ವಾಙ್ಮಯದಲ್ಲಿ ಸರಿಯಾದ ಚಿತ್ರಣವು ವಿರಳವೆಂದೇ ಹೇಳಬೇಕು. ಆದರೆ ನಮ್ಮ ಸಮಸ್ಯೆಗಳನ್ನು ಚಿತ್ರಿಸುವ ಹಳೆಯ ಶ್ರದ್ಧೆಯನ್ನು ತಿಳಿದೋ ತಿಳಿಯದೆಯೋ ಬಿಟ್ಟುಕೊಟ್ಟವರೆಷ್ಟೋ ಜನ. ಅದರಿಂದ ಪರಂಪರಾನುಗತಿಕ ಶ್ರದ್ಧೆಯಿಂದ ವ್ಯಕ್ತಿತ್ವಕ್ಕೂ, ವಿಚಾರಗಳಿಗೂ ಒದಗುತ್ತಿದ್ದ ಸ್ಥೈರ್ಯ, ಸುಸಂಗತಿಗಳು ಮಾತ್ರ ಇಲ್ಲವಾಗಿ, ಅಪರಿಮಿತವಾಗಿ ತನ್ನೊಡನೆ ತಾನು ಕಾದುವ ನೆಲೆಗಾಣದವರ ಬುದ್ಧಿ ಮನಸ್ಸುಗಳ ಬನ್ನಬಡಿಸುವ ಅಂಡಲಿವಿಕೆಯ ಚಿತ್ರಣಕ್ಕೆ ಮೊದಲಾಯಿತು. ವಿಭಾವರೀ ಶಿರೂರಕರ ಅವರ ಮೊದಲ ಮೂರು ಪುಸ್ತಕಗಳು ಈ ಜಾತಿಗೆ ಸೇರಿದುವೆಂದು ಹೇಳಬಹುದು. ಅಲ್ಲಲ್ಲಿ ಹೊಸಶ್ರದ್ಧೆಯ ಉರುಗೋಲು ದೊರೆತಂತೆನಿಸಿದರೂ, ದಿಕ್ಕುಗಾಣದಂತಾದ ದೋಣಿಯ— ಪೂರ್ವ ಸಂಸ್ಕಾರ ಮತ್ತು ಅದನ್ನು ಅಲ್ಲಗಳೆದು ಒಳಗಿನಿಂದ ಬರುವ ಬಲವತ್ತರವಾದ ಎಳೆತದ ಪರಸ್ಪರ ವಿರುದ್ಧವಾದ ಪ್ರವಾಹಗಳ ಮೇಲಿನ ಹೊಯ್ದಾಟದ ಚಿತ್ರವೇ, ವಿಶೇಷವಾಗಿ ಈ ಪುಸ್ತಕಗಳಲ್ಲಿ ಕಂಡು ಬರುತ್ತದೆ. 'ಕಳ್ಯಾಂಚೆ ನಿಶ್ವಾಸ'ದ ಕೊರಗುವ ಆದರೆ ಬಾಳಬೇಕೆಂಬ ಮಹಾ ದಾಶೆಯಿಂದ, ಮಹಾ ಸಮಾಜದ ವಿರೋಧವನ್ನೆಳಸುವ, ಬಂಧನ ಬಿಡಿಸಲಾಗದ ಕುಮಾರಿಕೆಯರ, "ಹಿಂದೋಳ್ಯಾವರ" ನಾಚಿಕೆ—"ಇಲ್ಲ, ಇಲ್ಲ, ವಿರಾಗ, ನಿನ್ನದೇನೂ ತಪ್ಪಿಲ್ಲ, ನನ್ನದೂ ಇಲ್ಲ ಯಾರ ತಪ್ಪೂ ಇಲ್ಲ; ಆದರೂ —ಆದರೂ" ಎಂದು ಆ "ಆದರೂ" ದ ಒಗಟವನ್ನು ಒಡೆಯಲಾರದೆ ಗಾಸಿ

ಗೊಂಡ—ಅಚಲೆ, ವೈಶಾಖನ ರಾಜಕೀಯ ಆದರ್ಶವಾದಕ್ಕೆ, ಅವನ ಸಾಹಸ ಪೂರ್ಣವಾದ ವ್ಯಕ್ತಿತ್ವಕ್ಕೆ ಮನಸೋತು, ಆದರೂ ಅವನ ಪ್ರಖರ ವಾದ ಹೊಡೆದಾಟದ ಜೀವನದಲ್ಲಿ ಸಹಭಾಗಿಯಾಗಬಲ್ಲನೇ ನಾನು ಎಂದು ಹಿಂದೇಟು ಹೊಡೆಯುವ, ದೂರದಿಂದ ತಿರುತಿರುಗಿ ಪ್ರೀತಿ—ಆದರ ತುಂಬಿದ ಕಣ್ಣುಗಳಿಂದ ಅವನನ್ನೇ ನೋಡುತ್ತ, ತಾನು ಬೇಡಿಬಯಸಿದ ಜೀವನದ ಸಂಗಾತಿಯನ್ನು ತಾನೇ ಬಿಟ್ಟುಗೊಟ್ಟ ಹಿಂದಕ್ಕೆ ನಡೆದ ಮಕ್ಕ ಳಾದ ಅನುರಾಧೆ ("ವಿರಲೇಲೆ ಸ್ವಪ್ನ"ದ ನಾಯಿಕೆ) ಎಲ್ಲರಲ್ಲಿ ಒಂದು ಸಾಧರ್ಮ್ಯವನ್ನು ಕಲ್ಪಿಸಬಹುದು. ಅಥವಾ ಇಂತಹ ಚಿತ್ರಣಕ್ಕೆ ಸ್ಫೂರ್ತಿ ಕೊಡುವ ಮನೋಭೂಮಿಕೆಯಾದರೂ ಒಂದೇ ತೆರನಾದುದೆಂದು ಹೇಳ ಬಹುದು. ಪ್ರತಿಭಾಶಾಲಿಯಾದ ಮಹಾರಾಷ್ಟ್ರೀಯ ಸ್ತ್ರೀಯೊಬ್ಬಳ ಮನದ ಬೆಳವಣಿಗೆಯನ್ನು ಈ ಮೂರು ಪುಸ್ತಕಗಳಲ್ಲಿ ಕಾಣಬಹುದು. "ಕಳ್ಯಾಂಚೆ ನಿಶ್ವಾಸ"ದ ಪ್ರೌಢ ಕುಮಾರಿಕೆಯೇ ಮುಂದೆ ಬೆಳೆದು ಸ್ತ್ರೀಯಾಗಿ ಹೊಸ ಹೊಸ ಸಮಸ್ಯೆಗಳನ್ನೆದುರಿಸಿದಾಗ ಅವುಗಳ ವಿಷಯದ ಅವಳ ಪ್ರತಿ ಕ್ರಿಯೆಯ ಒಂದು ವಿಶಿಷ್ಟ ಪ್ರಕಾರವನ್ನು ಇಲ್ಲಿ ಕಾಣಬಹುದು. ಈ ಸ್ತ್ರೀ ಯಂತೆ ವಿಚಾರ ಮಾಡುವ ಇತರ ನೂರಾರು ಸಾವಿರಾರು ಸ್ತ್ರೀ-ಪುರುಷರು ಮಹಾರಾಷ್ಟ್ರದ ಸುಶಿಕ್ಷಿತರಲ್ಲಿದ್ದಾರೆ, ೧೫-೧೬ ವರ್ಷಗಳ ಹಿಂದೆ ಮೊದಲಿಗೆ ಈ ಪುಸ್ತಕ ಪ್ರಕಟವಾದಾಗಲಂತೂ ಒಂದು ಕೋಲಾಹಲವೇ ಎದ್ದು ಹೋಯಿತು. ಅವರ ಗುಪ್ತನಾಮದ ಕತೆಯೂ ಅದಕ್ಕೊಂದು ವಿಶೇಷ ಕಾರಣವಾಯಿತು. ಯಾಕಂದರೆ, ಇಷ್ಟು ಸ್ಪಷ್ಟವಾದ ಶಬ್ದಗಳಲ್ಲಿ ಸ್ತ್ರೀಯೊ ಬ್ಬಳು ಮನಬಿಚ್ಚಿ ತನ್ನ ಲೈಂಗಿಕ ಜೀವನದ ಸಮಸ್ಯೆಗಳನ್ನು ಚರ್ಚಿಸತೊಡ ಗಿದೊಡನೆ, ಸುಧಾರಕರು, ಹೊಸ ವಿಚಾರಗಳನ್ನೊಪ್ಪುವವರು, ವಿಶೇಷವಾದ ಮಹಾರಾಷ್ಟ್ರದ ಸುಶಿಕ್ಷಿತ ಸ್ತ್ರೀಸಮಾಜವು ಅವಳನ್ನು ಮರಾಠೀ ವಾಙ್ಮಯ ದಲ್ಲಿ ನವಯುಗ ಪ್ರವರ್ತಕಳೆಂಬ ಆದರೋತ್ಸಾಹಗಳಿಂದ ಸ್ವಾಗತಿಸಿದುದು, ಆದರೆ ಅದರೊಡನೆಯೆ ಸನಾತನಿಗಳು ತಮ್ಮ ಜಡೆಯನ್ನೆ ಅಪ್ಪಳಿಸಿ, ಅವ ಳನ್ನು ಸ್ವೈರಿಣಿಯೆಂದು ಜರೆದು, ಅವಳ ಪುಸ್ತಕಗಳೆಂದರೆ ನೀತಿಗೆ, ಸಮಾಜ ಸ್ವಾಸ್ಥ್ಯಕ್ಕೆ ಕೊಡಲಿಯ ಪೆಟ್ಟುಗಳೆಂದು ಪ್ರತಿಪಾದಿಸಿ, ಬಹಿಷ್ಕಾರ ಹಾಕಿದ ರೆಂದರೆ ನಮ್ಮಲ್ಲಿಯಂತೂ ಅನೇಕರಿಗೆ ಆಶ್ಚರ್ಯವಾಗುವ ಕಾರಣವಿಲ್ಲ.

ಪ್ರಸ್ತುತ ಕಾದಂಬರಿಯನ್ನು ಭಾಷಾಂತರಿಸಿದನಂತರ ನಾನು ನನ್ನ ಹಸ್ತಲಿಖಿತವನ್ನು ಕೆಲವು ಮಿತ್ರರಿಗೆ ಓದಿ ತೋರಿಸುವ ಸಾಹಸ ಮಾಡಿದೆ. ಅದರಲ್ಲಿ ಚಿಕ್ಕವನಿದ್ದಾಗಿನಿಂದ ನನ್ನಲ್ಲಿ ಆಸ್ಥೆ ವಹಿಸಿದ ನಮ್ಮ ಕಡೆಯ ಹಿರಿಯರಿಗೆ ಈ ವಿಷಯವನ್ನು ತಿಳಿಸಿದಾಗ ಸ್ವಾಭಾವಿಕವಾದ ನನ್ನ ಮೇಲಿನ ಪ್ರೇಮದಿಂದ ಅವರು, " ಅಹುದೋ, ನೋಡೋಣ. ಯಾವ ಕಾದಂಬರಿ ? " ಎಂದರು. ನಾನು ಇದ್ದುದನ್ನು ಹೇಳಿದೆ. ಮರಾಠಿಯೆಂದಾಗಲೇ ಅವರು ಸ್ವಲ್ಪ ಅಸಮಾಧಾನಿಸಿದರು. ಕಾದಂಬರಿ ಕೇವಲ ಮೂಲ ಮರಾಠಿಯಾಗಿ ತ್ರಂಬುದಕ್ಕಲ್ಲ. ನಾನು ಅವರಿಗೆ ಅಲ್ಪಮಟ್ಟಿಗೆ ಕಥಾವಸ್ತುವಿನ ಪರಿಚಯ ಮಾಡಿಕೊಟ್ಟಿದ್ದೆ. " ಈ ಮರಾಠೀ ಜನ ಪಾಶ್ಚಾತ್ಯ ವಿಚಾರಗಳ ಸಂಪರ್ಕ ದಿಂದ ಕೆಟ್ಟುಹೋಗಿದ್ದಾರೆ ; ನಮ್ಮಷ್ಟು ನೀತಿ-ಸಂಸ್ಕೃತಿಗಳ ಅಭಿಮಾನ ಅವರಲ್ಲಿಲ್ಲ " ಎಂಬ ಭಾವ ಅದರಲ್ಲಿತ್ತು. ಕೊನೆಗೆ ಮುಂದೇನಿದೆ ಎಂದರು, ಕತೆಯನ್ನೆಲ್ಲ ವಿವರಿಸಿದೆ. ಅಚಲೆಯ ಮನದ ಹೊಯ್ದಾಟವನ್ನಷ್ಟೇ ಚಿತ್ರಿಸಿದ್ದಾದರೆ ಅವರೊಪ್ಪಬಹುದಾಗಿತ್ತೋ ಏನೋ. ಆದರೆ ಪರಿತ್ಯಕ್ತೆ ಯೊಬ್ಬಳು ಪರಪುರುಷನೊಬ್ಬನೊಡನೆ ಇದ್ದುಬಿಡುವಳೆಂದು ಪ್ರತಿಪಾದಿಸುವ ಕಲ್ಪನೆಯೇ ಅವರಿಗೆ ಸಹನವಾಗಲಿಲ್ಲ. ನಮ್ಮ ವಾಚಕವರ್ಗವೆಲ್ಲ ಇದೇ ಅಭಿಪ್ರಾಯದವರೆಂದಲ್ಲ. ಆದರೆ ಹೆಚ್ಚುಕಡಿಮೆ ಈ ಮಾತು ಬರದೆ ಇರದೆಂದೆನ್ನಿಸುತ್ತದೆ. ಶಿವರಾಮ ಕಾರಂತರ ಮೇಲೆ, ಗೋಕಾಕರ ಮೇಲೆ ಅಶ್ಲೀಲತೆಯ ಆರೋಪ ಬಂದುದು ನನಗೆ ನೆನಪಿದೆ. ಒಬ್ಬ ಮಹಾಶಯರಂತೂ Lawrenceನ ' Lady Chatterley's Lover ' ವನ್ನೂ ಎಳೆದು ತಂದಿದ್ದರು ' Lady Chatterley's Lover 'ದ ಕತೆ ಹೀಗಿದೆ :

ಮದುವೆಯಾದ ಕೆಲವು ದಿನಗಳಲ್ಲಿಯೇ ಯುದ್ಧಭೂಮಿಗೆ ತೆರಳಿದ ಮೂರು ವರ್ಷಗಳ ನಂತರ ಯುದ್ಧದಲ್ಲಿ ಪೆಟ್ಟು ತಿಂದು ಕೆಳಗಿನ ಅರ್ಧ ಭಾಗವೆಲ್ಲ ಬಧಿರವಾಗಿ Lord Chatterley ಹಿಂದಿರುಗುತ್ತಾನೆ ಯಂತ್ರದ ಗೊಂಬೆಯಾದ ಅವನೊಡನೆ ಆಮರಣ ಕೂಡಿರಬೇಕಾಗಿ ಬಂದ ತರುಣಿಯಾದ Lady Chatterley ಬೇರೊಬ್ಬನೆಡೆಗೆ ಎಳೆಯಲ್ಪಡುತ್ತಾಳೆ. ಆ ಎರಡನೆ ಯವನು Chatterley ಮನೆತನದ ಅಡವಿಯ (Wooded Forest) ವ್ಯವಸ್ಥೆ ನೋಡುವವ. ಇವನೊಬ್ಬ ವಿಚಿತ್ರ ಪ್ರಾಣಿ. ಸೈನ್ಯದಲ್ಲಿ ಕೆಲಸ

ಕ್ಕಿದ್ದಾಗ ಜಗತ್ತಿನ ಅನೇಕ ಭಾಗಗಳಲ್ಲಿ ಪ್ರವಾಸ ಮಾಡಿ ಅನೇಕ ತರಹ ಅನುಭವ ಪಡೆದು, ಜಗದ ಜನರ ಕೀಳ್ತನ, ಮೂರ್ಖತನ, ದಬ್ಬಾಳಿಕೆ ಎಲ್ಲವುಗಳಿಗೆ ಬೇಸತ್ತು ಇಲ್ಲಿ ಶಾಂತವಾಗಿ ಅಡವಿಯ ವ್ಯವಸ್ಥೆ ನೋಡುವ ಕೆಲಸ ಸಿಕ್ಕಾಗ ಅಡವಿಯಲ್ಲಿಯೇ ಮನೆ ಕಟ್ಟಿಕೊಂಡು ಆ ಒಂಟಿ ಜೀವನದಲ್ಲಿ ಸುಖಸಮಾಧಾನಗಳನ್ನು ಕಾಣುವವ. ತನ್ನ ಒಡೆಯನ ಹೆಂಡತಿ ತನ್ನೊಡನೆ ಬೇಟೆ ಬೆಳಸುವ ಮನಸ್ಸು ತೋರಿದಾಗ ಗಾಬರಿಗೊಳ್ಳುವ; ಕೇವಲ ಒಡೆಯನ ಹೆಂಡತಿಯೆಂದಲ್ಲ. ಆದರೆ ಈ ಸುಳ್ಳು ಪ್ರೇಮ, ಗತಿಗೆಡಿಸುವ ಕಾಮುಕತೆಯ ವಿಷಯದ ಅನುಭವಪೂರ್ಣವಾದ ಉದಾಸೀನತೆಯಿಂದ. ಕೊನೆಗೆ ಅವಳನ್ನು ಅವನು ಸಮೀಪದಲ್ಲಿ ಬರಗೊಟ್ಟಾಗಲೂ, ಅವನು ಉದಾಸೀನನಾಗಿಯೇ ಇರುತ್ತಾನೆ. ಈ "ಅಂಡಲೆಯುವ"ದೆಂದರೆ (Philandering) ತನಗಾಗದೆಂದು ಅವನು ಅವಳಿಗೆ ಬರೆದ ಕೊನೆಯ ಪತ್ರದಲ್ಲಿ ಹೇಳುತ್ತಾನೆ. ಅವರೀರ್ವರ ನಡುವಿನ ಈ ಕೆಳಗಿನ ಸಂಭಾಷಣೆಯನ್ನು ನೋಡಬಹುದು.

ಅವನು ತೀರ ವಿಚಾರಮಗ್ನನಾದುದನ್ನು ನೋಡಿ ಅವಳಿಗೆ ಹೆದರಿಕೆಯಾಯಿತು. ನಿಷ್ಕಾರಣವಾಗಿ ಅವನು ಸಾಶಂಕನಾಗುವುದನ್ನು ಕಂಡು ಅವಳಿಗೆ ಅಸಮಾಧಾನವೆನ್ನಿಸಿತು. ಯಾಕೆ? ಯಾಕೆ, ಈ ಸಂಶಯ? ತನ್ನ ಪ್ರೇಮ ಸುಳ್ಳಾದುದೆಂದೆನಿಸಿತೆ ಅವನಿಗೆ?

"ಆದರೆ ನಿನಗೆಂದೂ ನಿನ್ನನ್ನೊಲಿದು ಬಂದ ಸ್ತ್ರೀಯರ ನೆಚ್ಚಿಗೆಯೆನಿಸಲೇ ಇಲ್ಲವಲ್ಲವೆ? ಈಗಲೂ ಕೂಡ ನನ್ನಲ್ಲಿ ನಿನಗೆ ವಿಶ್ವಾಸವಿಲ್ಲ," ಅವಳೆಂದಳು.

"ಸ್ತ್ರೀಯನ್ನು ನಂಬಿರುವದೆಂದರೇನೆಂಬುದೇ ನನಗೆ ಗೊತ್ತಿಲ್ಲ"

"ಹಾಂ. ಅದೇ ನಾನು ಹೇಳಿದುದು!"

ಅವಳು ಅವನ ಹತ್ತಿರವೇ ಮುದುಡಿ ಕುಳಿತಿದ್ದಳು. ಆದರೆ ಅವನ ಮನಸ್ಸು ಅಲ್ಲಿರಲೇ ಇಲ್ಲ ಅವನೇನೋ ವಿಚಾರ ಮಾಡುತ್ತಲಿದ್ದ. ಅವನಿಗೆ ಅವಳೆಂದುದರ ಪರಿವೆಯೇ ಇದ್ದಂತೆ ತೋರಲಿಲ್ಲ. ಅವನ ಮನಸ್ಸು ಇನ್ನೂ ಓಡಿ, ಓಡಿ ದೂರವಾಗುತ್ತಿತ್ತು.

" ಹಾಗಾದರೆ ನಿನ್ನ ಅನ್ನೋಣವಾದರೂ ಏನು ? ನಿನಗೆ ಯಾವ ತರದ ಸಂಬಂಧದಲ್ಲಿ ವಿಶ್ವಾಸವುಂಟು ? "

" ನನಗೇನೂ ಗೊತ್ತಿಲ್ಲ."

" ನೀವೆಲ್ಲರೂ ಹಾಗೇ, ಗಂಡಸರು " ಅವಳೆಂದಳು.

ಅವರಿಬ್ಬರೂ ಕೆಲಹೊತ್ತು ಮೌನವಾಗಿದ್ದರು. ನಂತರ ಒಮ್ಮೆಲೆ ಎಚ್ಚತ್ತು ಅವನು ನುಡಿದ.

" ನನಗೆ ಒಂದು ಮಾತಿನಲ್ಲಿ ವಿಶ್ವಾಸವಿದೆ. ಹೃದಯದ ನಿಜವಾದ ಸ್ನಿಗ್ಧತೆಯಲ್ಲಿ, ಅಂಥ ನಡತೆಯಲ್ಲಿ ನನಗೆ ವಿಶ್ವಾಸವಿದೆ. ಪ್ರೇಮ ಮನಸ್ಸು ತುಂಬಿ ಬರಬೇಕು. ಅಂದರೇ ಅದು ಪ್ರೇಮ. ಅಂತಹ ತುಂಬಿದ ಹೃದಯವನ್ನು ಮಾತ್ರ ನಾನು ಪ್ರೀತಿಸಬಲ್ಲೆ; ಸ್ತ್ರೀ-ಪುರುಷರು ಈ ಸತ್ಯವನ್ನು ಅರಿತು ಅದರಂತೆ ನಡೆದಾಗ, ಕಪಟವನ್ನುಳಿದು ನಡೆದಾಗ, ಕೃತ್ರಿಮತೆ ದೂರವಾಗಿ ಜೀವನಕ್ಕೆ ಸಾರ್ಥಕತೆಯೊದಗೀತು ಅಂದಿಗೇ ಎಲ್ಲ ಸಮಸ್ಯೆಗಳೂ ಬಗೆಹರಿವದುಂಟು. ಇಲ್ಲವಾದರೆ ಇದ್ದೇ ಇದೆಯಲ್ಲ, ಯಾವದೊಂದು ಕಟ್ಟಿಗೆ ಸಿಕ್ಕಿಬಿದ್ದು ಪ್ರೇಮವಿಲ್ಲದೆಯೇ ಕೂಡಿ ಬದುಕುವದು. ಅದೇ ಜೀವನ್ಮರಣ."

ಇದೆಲ್ಲ ಚಿತ್ರಣದ ಭಾಗವನ್ನು ಗಣನೆಗೆ ತಂದುಕೊಳ್ಳದೆ ಕತೆಯ ಬಾಹ್ಯರೇಷೆಗಳನ್ನಷ್ಟೇ ಕಣ್ಣೆದುರಿಗಿರಿಸಿ ಸಾಂಪ್ರದಾಯಿಕವೋ, ದುರಾಗ್ರಹಪೂರ್ಣವೋ ಆದ ಕಲ್ಪನೆಗಳ ಚೌಕಟ್ಟಿನಲ್ಲಿಟ್ಟು ನೋಡಿ, ಅಭಿಪ್ರಾಯ ವ್ಯಕ್ತಮಾಡುವವರಿಗೆ ಏನೂ ಹೇಳಲು ಬಾರದು. ತಲೆತಲಾಂತರದಿಂದ ನಡೆದು ಬಂದ ವಿಧಿನಿಷೇಧಗಳು ಉಲ್ಲಂಘಿಸಲ್ಪಟ್ಟಲ್ಲಿ ಕೆಂಡ ಕಾರುವ ತಂಡ ಪ್ರಮುಖರ ಕಣ್ಣುಗಳ ಪ್ರಖರತೆ ಹೊಸದಲ್ಲ.

ಆದರೆ ವಿಭಾವರೀಬಾಯಿಯವರ ಕಾದಂಬರಿಗಳಲ್ಲಿ ಕಂಡುಬರುವ ಮನೋವೃತ್ತಿಯ ವಿಷಯವಾದ ಇನ್ನೊಂದು ಮಹತ್ವಪೂರ್ಣವಾದ ಟೀಕೆಯಿದೆ. ಅದೇ ಈ ದೀರ್ಘವಾದ ಸಮಾಲೋಚನೆಗೆ ಮೂಲಕಾರಣವಾಯಿತೆಂದು ಹೇಳಬಹುದು. ಅದೆಂದರೆ ಅವರ ಪುಸ್ತಕಗಳಲ್ಲಿ ಮಿತಿಮೀರಿ ತೂಗುವ ಮನದ ಉಯ್ಯಾಲೆಯ ಏರಿಳಿತಗಳ ತಲೆತಿರುಗಿಸುವ ಜೀಕುಗಳು ; ಒಂದು ತರದ ನೆಲೆಯಿ-ಲ್ಲದ ಉದ್ವಿಗ್ನತೆ, ತೊಡಕು ತೊಡಕಾಗಿ

ಹೋದ ಮನದ ಎಳೆಗಳು ನಿಂತಲ್ಲಿ ನಿಂತಿರದೆ, ಕುಳಿತಲ್ಲಿ ಕುಳಿತಿರದೆ, ಒಂದೇ ಸವನೆ ಕುಣಿವ ಪೋರಿಯನ್ನು ಹಿಡಿದು ತಂದು, ಕೆದರಿದ ತಲೆಯನ್ನು ಕಷ್ಟ ಪಟ್ಟು ಬಾಚಿ ಸರಿಪಡಿಸಿ, "ಇನ್ನು ಓರಣವಾಗಿಟ್ಟುಕೊಳ್ಳಬೇಕು, ಹಾಂ" ಎಂದೆಷ್ಟೇ ತಿಳಿಹೇಳಿದರೂ ಮರುದಿನ ಅದೇ ಕೆದರಿದ ತಲೆಯನ್ನು ಸರಿ ಪಡಿಸುವ ಕೆಲಸವಿದ್ದೇ ಇದೆ. ಒಮ್ಮೊಮ್ಮೆ ದಿನವೆಲ್ಲ ಕುಳಿತು ಅದರ ಎಳೆ ಎಳೆಗಳನ್ನು ತೊಡಕು ಬಿಡಿಸಿ, ಜೋಡಿಸಿ, ಎಣ್ಣೆಹಚ್ಚಿ ನೀವಿ, ನೀವಿ, ಸುಂದರವಾದ ಮುಡಿಗಟ್ಟಿದರೂ, ಮರುದಿನ ಆ ನಮೂನೆಯು ಮುಡಿಯುವಳ ಮನಸ್ಸಿಗೆ ಬರುವದೇ ಇಲ್ಲ. ತನ್ನ ಮುಖದ ಮಾಟಕ್ಕೆ, ತನ್ನ ಒಲವಿನ ನೋಟಕ್ಕೆ ಒಪ್ಪುವ ನೀತಿಯೊಂದನ್ನು ಹುಡುಕುವ ಕೆಲಸ ಅವಳಿಗೆ ಮುಗಿಯದ ಕೆಲಸವಾಗುತ್ತದೆ. ಮೇಲೆ ಹೇಳಿದ "ವಿಭಾವರಿಯ ಟೀಕಾ ಕಾರರು" ಎಂಬ ಪುಸ್ತಕದ ಸಂಪಾದಕರು ಈ ಎಲ್ಲ ಪ್ರಶ್ನೆಗಳ ವಿವೇಚನೆ ಯನ್ನು ಅಧಿಕಾರಯುತವಾಗಿ ಮಾಡಬಲ್ಲ, ಒಬ್ಬ ಮಹಾರಾಷ್ಟ್ರದ ಹಿರಿ ಲೇಖಕರ ಲೇಖನವೊಂದನ್ನು ಅದರಲ್ಲಿ ಹಾಕದೆ ಆ ಪುಸ್ತಕ ಪೂರ್ಣವಾಗ ದೆಂದು ಮನದಂದು ಮಹಾರಾಷ್ಟ್ರದ ಪ್ರಥಿತಯಶ ವಿಚಾರವಂತರೆಂದೆನ್ನಿಸಿ ಕೊಂಡ ಪ್ರೊಫೆಸರ ತ್ರ್ಯಂ.ಶಂ. ಶೇಜವಲಕರರನ್ನು ಕೇಳಿಕೊಳ್ಳಲಾಗಿ ಅವರು ಈ ಟೀಕಾತ್ಮಕ ಲೇಖನ ಸಂಕಲನಕ್ಕೆ ಮುನ್ನುಡಿಯೆಂದೆನ್ನಿಸಬಹುದಾದ ಒಂದು ಸಂಸ್ಮರಣೀಯವಾದ ಪ್ರದೀರ್ಘ ಲೇಖನವೊಂದನ್ನು ಬರೆದು ಅದರಲ್ಲಿ ತಮ್ಮ ಅಭಿಪ್ರಾಯವನ್ನು ವ್ಯಕ್ತಮಾಡಿದ್ದಾರೆ.

ಸುಮಾರು ೫೦ ವರ್ಷಗಳಿಂದೀಚೆಗೆ ಮಹಾರಾಷ್ಟ್ರದ ಸಾರಸ್ವತ, ಸಾಂಸ್ಕೃತಿಕ ಮತ್ತು ರಾಜಕೀಯ ಸಾಮಾಜಿಕ ಕ್ಷೇತ್ರಗಳಲ್ಲಿ ನಡೆದ ಆಗು ಹೋಗುಗಳನ್ನು ಸಮಾಲೋಚಿಸುತ್ತ ಅವರು ವಿಭಾವರೀ ಶಿರೂರಕರವರು ಪ್ರತಿನಿಧಿಸುವ ಸಮಾಜವನ್ನೂ, ವಿಚಾರ ಸರಣಿಯನ್ನೂ ಮಹಾರಾಷ್ಟ್ರಕ್ಕೂ ಹತ್ತಿದ ಕೊಳೆರೋಗವೆಂದು ಪ್ರತಿಪಾದಿಸಿದ್ದಾರೆ. ಆದರೆ ಒಂದು ಮಾತನ್ನು ಇಲ್ಲಿ ಸ್ಪಷ್ಟಗೊಳಿಸುವದೊಳ್ಳೆಯದು. ಪ್ರೊ. ಶೇಜವಲಕರರು ತಮ್ಮ ಪ್ರದೀರ್ಘ ವಾದ ಮೀಮಾಂಸೆಯ ಆರಂಭದಲ್ಲಿಯೇ ತಮಗೆ ವಿಭಾವರಿಯವರ ಲೇಖ ನದ ಸಾಹಿತ್ಯಕ ಯೋಗ್ಯತೆಯನ್ನು ಕುರಿತು ಹೇಳಬೇಕಾದುದೇನೂ ಇಲ್ಲ ವೆಂದೂ, ತಮ್ಮ ವಿಚಾರಗಳು ಅವರ ಪುಸ್ತಕಗಳಲ್ಲಿ ಪ್ರತಿಫಲಿತವಾದ

ಸಾಮಾಜಿಕ ದೃಷ್ಟಿಕೋನಕ್ಕೆ ಮಾತ್ರ ಸಂಬಂಧಿಸಿದದಾಗಿದೆಯೆಂದು ಸ್ಪಷ್ಟ ಗೊಳಿಸಿದ್ದಾರೆ. ಅವರ ವಾದದ ಮುಖ್ಯಾಂಶಗಳು ಕೆಳಗಿನಂತಿವೆ. (ಇದನ್ನು ನಾನು ಬರೆಯುತ್ತಿರುವಾಗ ಪ್ರೊ. ಶೇಜವಲಕರರ ಲೇಖನ ನನ್ನಲ್ಲಿ ಇಲ್ಲ. ಆದರೆ ಅವರ ಹೇಳಿಕೆಯನ್ನು ಆದಷ್ಟು ಮಟ್ಟಿಗೆ ಅವರ ಮಾತಿನಲ್ಲಿ ಸಾರಾಂಶ ರೂಪವಾಗಿ ಕ್ರೋಡೀಕರಿಸಿದ್ದೇನೆ.

" ಕಳೆದ ಕೆಲವು ದಿನಗಳಲ್ಲಿ ಮೂವರು ಬೆಳಕಿಗೆ ಬಿದ್ದ (Adolescent) —ಶೇಜವಲಕರರವರೆ ಇಲ್ಲಿ 'ವಾಢಾಳೂ' ಎಂಬ ನಾವೀನ್ಯ ಪೂರ್ಣವಾದ ಪದವನ್ನುಪಯೋಗಿಸಿದ್ದಾರೆ.) ಮಹಾರಾಷ್ಟ್ರ ಕನ್ನಿಕೆಯರು ಸಹಜಗತಿಯಿಂದ ನನ್ನ ದೃಷ್ಟಿಪಥದೆದುರು ಬಂದರು. ಈ ಮೂವರು ಕಳೆದ ೨೫-೩೦ ವರ್ಷ ಗಳ ಮಹಾರಾಷ್ಟ್ರದ ಸಾಂಸ್ಕೃತಿಕ ಜೀವನ ಮೂರು ಪ್ರವಾಹಗಳನ್ನು ಪ್ರತಿ ನಿಧಿಸುತ್ತಾರೆಂದು ಸಾಮಾನ್ಯವಾಗಿ ಹೇಳಬಹುದು.

ಇವರಲ್ಲಿ ಒಬ್ಬಳ ಶಿಕ್ಷಣ ಮುಂಬಯಿಯಲ್ಲಿ ಆಯಿತು. ಅಲ್ಲಿ ಅವಳು ಮುಂಬಯಿಯ ಶ್ರೀಮಂತಿಕೆಗೆ ಒಲಿದುಹೋಗಿಬಿಡಬಹುದೆಂದೆನ್ನಿಸಬಹು ದಾಗಿತ್ತು. ಆದರೆ ಅವಳು ಗುಜರಾಥೀ ಧ್ಯೇಯವಾದದ ಸಂಪರ್ಕಗೊಂಡು ಅದೇ ಪ್ರಭಾವಿಯಾದ ಧ್ಯೇಯವಾದದೊಡನೆ ತೇಲಿ ಮುನ್ನಡೆದು, ಮುಂದೆ ತನ್ನ ನಂಬಿಕೆಗೆ ಸಾಕಾರತೆ ಕೊಡಲು ಮಹಾತ್ಮರ ಆಶ್ರಮವನ್ನೇ ಸೇರಿ, ಆ ಕಡುತರವಾದ ವ್ರತಸ್ಥ ಆಯುಷ್ಯಕ್ಕೆ ತನ್ನ ಜೀವನವನ್ನೇ ಮೀಸಲಾಗಿಟ್ಟು ಸಾರ್ಥಕತೆಯ ದಾರಿಯನ್ನು ಕ್ರಮಿಸಲಾರಂಭಿಸಿದಳು. ಅವಳ ಹೆಸರು ಪ್ರೇಮಾ ಕಂಟಕ 'ಕಾಮ ಆಣಿ ಕಾಮಿನೀ' ಎಂಬ ಅವಳ ಕಾದಂಬರಿ ಪ್ರಸಿದ್ಧವಾಗಿದೆ. ಮೊನ್ನೆಯೇ ಬಂದ ಅವಳ 'ಭ್ರಾಂತ ಜೀವನ'ವೆಂಬ ಕೃತಿಯೂ ಅವಳ ಧ್ಯೇಯದಿಂದ ಪವಿತ್ರವಾದ ದೃಷ್ಟಿಯನ್ನೇ ಇನ್ನಿಷ್ಟು ಸ್ಪಷ್ಟವಾಗಿಸಿದೆ. ಇನ್ನೊಬ್ಬಳು ಮೂಲತಃ ಶ್ರೀಮಂತಳು. ಆದರೆ ಮುಡಿದು ದುಡಿದು ತಿನ್ನುವ ಕಾರ್ಮಿಕರ ಜೀವನ ಸಂಗ್ರಾಮದ ಸಾಮೂಹಿಕ ಯತ್ನದ ಕರೆಗೆ ಓಗೊಟ್ಟು, ತನ್ನ ಶ್ರೀಮಂತಿಕೆಯನ್ನು ಬಿಸುಟು ನಡೆದಳು. ತನ್ನ ಧ್ಯೇಯವನ್ನನುಸರಿಸಿ ನಡೆಯುವ ಒಂದು ವಿಶಿಷ್ಟ ಜೀವನ ಸರಣಿ ಯಿಂದ ಮಹಾರಾಷ್ಟ್ರಕ್ಕೆ ಅವಳೂ ಪರಿಚಿತಳಾಗಿದ್ದಾಳೆ. ಅವಳೇ ಮಹಾ ರಾಷ್ಟ್ರದ ಹಳೆಯ ಕಮ್ಯುನಿಸ್ಟ್ ಕಾರ್ಯಕರ್ತರಲ್ಲಿ ಗಣಿಸಲ್ಪಡುವ ಮೀನಾಕ್ಷಿ

ಕರಾಡಕರ. ಮೂರನೆಯವಳು ಪುಣೆಯವಳು. ಸ್ವಾಭಾವಿಕವಾಗಿ ಮರಾಠರ ಕೆಚ್ಚು ಇವಳಲ್ಲಿ ಕಾಣಬಹುದಾಗಿತ್ತೆಂದು ಯಾರೂ ಅಪೇಕ್ಷೆ ಮಾಡಬಹುದಾಗಿತ್ತು. ಆದರೆ ಇವಳೊ ? ಕೇವಲ ತನ್ನ ವೈಯುಕ್ತಿಕವಾದ ಆಶೆ ಇಚ್ಛೆಗಳನ್ನೇ ದೇವರೆಂದು ಭಾವಿಸಿ, ಅವುಗಳ ನಿರಂಕುಶವಾದ ಪ್ರದರ್ಶನ, ಪೂರ್ತತೆಗಳಲ್ಲಿಯೇ ವ್ಯಕ್ತಿತ್ತ್ವದ ಸಾರ್ಥಕತೆಯನ್ನು ಕಾಣಲು ಹವಣಿಸಿದಳು. ಅವಳು ಬಾಳಿನ ಪ್ರಶ್ನೆಗಳು ಪೀಡಿಸಿದ್ದು ಇದೊಂದು ರೀತಿಯಲ್ಲಿ ಮಾತ್ರ. ಅದಕ್ಕಿಂತ ಯಾವ ಹೆಚ್ಚಿನ ಸತ್ಯವೂ, ಪ್ರಶ್ನೆಯೂ ಅವಳಿಗೆ ಎದುರಾದಂತೆ ತೋರುವುದಿಲ್ಲ. ಆದ್ದರಿಂದಲೇ ವಿಕೃತಿ ಪಡೆದ ನಿಷ್ಕರ್ಮಕವಾದ ಮನದ ಚೀತ್ಕಾರವೇ ಇವಳೆಲ್ಲ ಲೇಖನದಲ್ಲಿಯೂ ಕೇಳಬರುತ್ತದೆ. ಇವಳೇ ನಮ್ಮ ಬಾಳುತಾಯಿ ಖರೆ—ಮಾಲತಿಬಾಯಿ ಬೇಡೇಕರ, ವಿಭಾವರೀ ಶಿರೂರಕರ.

ಇಂತಹ ಕೇವಲ ಸ್ವಕಲ್ಪಿತ ಸಮಸ್ಯೆಗಳ ತೊಡಕಿನಲ್ಲಿಯೇ ಒದ್ದಾಡುವ Petty Bowrgeois ಎಂದು ಮಾರ್ಕ್ಸಿಸ್ಟ ಸಂಪ್ರದಾಯಿಗಳು ನಿರ್ದೇಶಿಸಬಹುದಾದ ಸ್ವಭಾವ ಚಿತ್ರಗಳನ್ನೇ ಮಾಡುವ ಈ ಸ್ತ್ರೀಯನ್ನು ನವಯುಗ ಪ್ರವರ್ತಕಳ ಪಟ್ಟಿಕ್ಕೆ ಕುಳ್ಳಿರಿಸಿ ಅವಳ ಗುಣಗಾನದಲ್ಲಿ ನಾನು ಮುಂದೆ ತಾನು ಮುಂದೆಯೆಂದೆನ್ನುವ ಮಹಾರಾಷ್ಟ್ರದ ಪ್ರಥಿತಯಶರಾದ ವಿಮರ್ಶಕರನ್ನು ವಿಭಾವರೀ ಶಿರೂರಕರರ ಲೇಖನಕ್ಕೆ ಮನಸೋತು ಮುಕ್ತಕಂಠದಿಂದ ತಮ್ಮ ಮೆಚ್ಚಿಕೆಯನ್ನು ವ್ಯಕ್ತ ಪಡಿಸಿದ ಅನೇಕ ಪ್ರಥಮ ದರ್ಜೆಯ ಮಹಾರಾಷ್ಟ್ರದ ಲೇಖಕರನ್ನು ಪ್ರೊಫೆಸರ ಶೇಜವಲಕರರು ಹೀಗೆಳೆದು ನುಡಿದಿದ್ದಾರೆ. ಮೊದಲೇ ಹೇಳಿದಂತೆ ವಿಭಾವರಿಯವರ ಲೇಖನದ ವಿಷಯವಾಗಿ ಪ್ರಸಿದ್ಧವಾದ ವಿಮರ್ಶೆಗಳ ಸಂಕಲನಾತ್ಮಕ ಗ್ರಂಥಕ್ಕೆ ಮುನ್ನುಡಿರೂಪವಾಗಿ ಬರೆದ ಈ ಲೇಖನದಲ್ಲಿ ವಿಭಾವರಿಯವರ ಪುಸ್ತಕಗಳನ್ನು ಸ್ತುತಿಸಿದ ಇತರ ಲೇಖಕರನ್ನು ಕುರಿತು, " ಈ ಸ್ತ್ರೀಯ ಹಿಂದೋಡುವ ಕುರಿ ಮುಂದೆ "—(' ಲೊಂಢಾ ' ಎಂಬ ತಿರಸ್ಕಾರ ಸೂಚಕ ಶಬ್ದವನ್ನು ಶ್ರೀ ಶೇಜವಲಕರರು ಉಪಯೋಗಿಸಿದ್ದಾರೆ) ಎಂಬ ಶಬ್ದಗಳಿಂದ ಸಂಬೋಧಿಸಿದ್ದಾರೆ. ಕು. ಕಂಟಿಕ ಅವರೇ ಆಗಲಿ, ಮಿಾನಾಕ್ಷಿ ಕರಾಡಕರರೇ ಆಗಲಿ ಒಂದಿಲ್ಲೊಂದು ಸಾರ್ಥಕತೆಯನ್ನು ಕಂಡುಕೊಂಡರು. ಆದರೆ

ವಿಭಾವರಿಯೊ? ತನ್ನ ಸ್ವೈರತೆಯ ನಗ್ನ ಪ್ರದರ್ಶನ ಮಾಡುತ್ತ, ಕೇವಲ ವೈಯಕ್ತಿಕ ಆಕಾಂಕ್ಷೆಗಳ ದಿಗ್ವಿಜಯಕ್ಕೆಂದು ನಡೆದಿರುವ ನಿರರ್ಥಕವಾದ ನಿರಂಕುಶವಾದ ಆತ್ಮ ಸಂಮೋಹನೆಯ ಪ್ರತಿಷ್ಠಾಪನೆ! ಆದರಿಂದ ಯಾರಿಗೇನು ಸುಖವಾದೀತು? ಯಾರ ಕಲ್ಯಾಣ ಸಾಧಿಸೀತು?

ಶ್ರೀ ಶೇಜವಲಕರರು ಈ ರೀತಿ ಪರೀಕ್ಷಣ ನಡೆಸಿದುದನ್ನು ನೋಡಿ ನಮ್ಮಲ್ಲಿಯ ಮಡಿವಂತರೂ ಕೂಡ ಬೆರಳು ಕಚ್ಚಬಹುದು. ಅವರು ಈ ದಾರುಣವಾದ ಮಾತುಗಳನ್ನು ಹೇಳುತ್ತಿರುವಾಗ ಅದಕ್ಕೆ ಅಲ್ಲಿಯ ವರೆಗಿನ ಮೀಮಾಂಸೆಯ ಪಾರ್ಶ್ವಭೂಮಿಯಾವುದೆಂದು ನಾವು ಹೇಳದೆ ಹೋದರೆ ಈ ಪುಸ್ತಕವನ್ನೋದಿದ ನಮ್ಮಲ್ಲಿಯ ಸಹಾನುಭೂತಿಪರ ವಿಚಾರವಂತರು ಪ್ರೊಫೆಸರ ಶೇಜವಲಕರರಿಗೆ ವ್ಯಕ್ತಿಯ ನಿಜವಾದ ಸುಖಕ್ಕಿಂತ, ಅನೇಕ ಬಂಧನಗಳ ತೊಡಕಿಗೆ ಸಿಲುಕಿ ಒದ್ದಾಡುವ ಅವನ ಅಸಹಾಯತೆಯ ಪರಿಣಾಮಕಾರಕವಾದ ಚಿತ್ರಣಕ್ಕಿಂತ, ಕೇವಲ ಕಾಲ್ಪನಿಕವಾದ ಸಕಲರ ಸುಖಕ್ಕೆಂದು, ಗಣವೇಷಧರಿಸಿ, ಎದೆಯುಬ್ಬಿಸಿ ಮುನ್ನಡೆವ 'ಜನತೆಯ ಸೈನ್ಯ'ದ ಶಿಪಾಯಿಯ ಮೌಢ್ಯಪೂರ್ಣವಾದ, ತನ್ನದಾಗಲಿ, ಪರರದಾಗಲಿ ಯಾವದರ ಹಂಗು ಇಲ್ಲದೆ ಹುಚ್ಚೆದ್ದ ತೊತ್ತಳದುಳಿತದ ಚಿತ್ರಣವೇ ಹೆಚ್ಚು ಪ್ರಿಯವಾಗಿದ್ದಂತೆ ತೋರುತ್ತದೆ ಎಂದೆನ್ನಬಹುದು. ಅಥವಾ ವಾಸ್ತವಿಕತೆಗೆ ಅರದಾಳವಿಕ್ಕಿ ಕಂಡದುನ್ನೆಲ್ಲ ನೋಡಿ ಅಳುವ, ಮೊದಲಿನಿಂದ ಕೊನೆಯವರೆಗೂ ಉಪದೇಶಾಮೃತದಿಂದ ಮಕ್ಕಳಿಗೆ ಹೇಳುವ ನೀತಿ ಕತೆಗಳಿಂದ ತುಂಬಿದ 'ಆದರ್ಶವಾದೀ' ಲೇಖನವೂ ಅವರಿಗೆ ಆದೀತೆನ್ನಬಹುದು. ಆದ್ದರಿಂದ ಅವರ ವಾದದ ಸಂದರ್ಭವನ್ನು ಇಲ್ಲಿ ಸ್ಪಷ್ಟಗೊಳಿಸುವುದು ಒಳಿತು. ಪ್ರೊ. ಶೇಜವಲಕರರು ಮಹಾರಾಷ್ಟ್ರದ ರಾಜಕಾರಣದಲ್ಲಿ ಲೋಕಮಾನ್ಯರ ನಂತರ ಅವರ ಅನುಯಾಯಿಗಳೆಂದು ಹೇಳಿಕೊಳ್ಳುವ ಒಂದು ಪಂಗಡದವರು ಯಾವ ಘಾತಕವಾದ ಪ್ರವೃತ್ತಿಗಳಿಗೆಡೆಮಾಡಿಕೊಟ್ಟರೆಂಬುದನ್ನು ವಿವೇಚಿಸುತ್ತ, ಮುನ್ನಡೆದಿದ್ದ ಜನ ಸಾಮಾನ್ಯರ ಸುಖದುಃಖಗಳಲ್ಲಿ ಸಹಭಾಗಿಗಳಾಗದೆ, ಪ್ರಗತಿ ವಿರೋಧಿಗಳಾಗಿ, ತಾವೊಂದು ಘನ ಸಂಸ್ಕೃತಿಯನ್ನು ಸಂರಕ್ಷಿಸುತ್ತಿದ್ದೇವೆಂಬ ಒಣ ಹೆಮ್ಮೆಯಿಂದ ಸ್ವಾರ್ಥದಾಟವನ್ನು ಹೂಡಿದ ಪಂಗಡವನ್ನು ಟೀಕಿಸುತ್ತ, ಅವರ ಅಹಂಮನ್ಯತೆಯ ಅತಿವ್ಯಕ್ತಿವಾದವೇ ಅದಕ್ಕೆ

ಮೂಲಕಾರಣವೆಂದೂ, ವಿಭಾವರೀಬಾಯಿಯವರ ಲೇಖನದ ವ್ಯಕ್ತಿಲ್ಲಿ ವಾದವೇ ಕಂಡು ಬರುತ್ತಿದ್ದುದರಿಂದ ಅವೆರಡೂ ಒಂದೇ ಪ್ರವೃತ್ತಿಯ ದ್ಯೋತಕಗಳೆಂಬ ಸುಲಭವಾದ ಸಮೀಕರಣವನ್ನು ಪ್ರತಿಪಾದಿಸಿದ್ದಾರೆ. ಈ ವ್ಯಕ್ತಿ ಕೊಡಬಲ್ಲ ಮಾತೇ ಅಷ್ಟು. ತನ್ನ ಬಂಗಲೆ, ತನ್ನ ರೇಡಿಯೋ, ತನ್ನ ಪ್ಲಾಟ್, ತನ್ನ ಕಾರು, ಮತ್ತೆ ತನ್ನ ಭಾವನೆ ಮತ್ತು ತನ್ನ ಸುಖ ಎಂಬ ಸರಪಳಿಯಲ್ಲಿ ಸರ್ವಸ್ವವೂ ಅಡಕವಾದ 'ಸದಾಶಿವಪೇಟೆ'ಯ ಸ್ವಾರ್ಥಾಂಧತೆಯನ್ನು ಜರೆದು ಅವರು ಹೇಳುತ್ತಾರೆ. "ಆದ್ದರಿಂದಲೇ 'ವೀರಲೇಲೆ ಸ್ವಪ್ನ'ಕ್ಕೆಯೇ ವಿಭಾವರಿಯ ಪ್ರತಿಭೆ ತನ್ನ ಅಂತಿಮ ಸೀಮೆಯನ್ನು ಮುಟ್ಟಿತೆಂಬಂತೆ ಕಾಣುತ್ತದೆ. ಅಲ್ಲಿಗೆ ಹರಿಗಡಿದ ಅವಳ ಲೇಖನದ ಝರಿ ಮುಂದೆ ದಾರಿಗಾಣದಾಗಿದೆ."

ಮೊನ್ನೆ ನಾನು ಪುಣೆಯಲ್ಲಿ ಲೇಖಕಿಯರೊಡನೆ ಮಾತನಾಡುತ್ತಿದ್ದಾಗ ಪ್ರೊ. ಶೇಜವಲಕರರ ಮಾತು ಬಂದಿತು. ಆಗ ಆ ಮಿಂಚುಗಣ್ಣಿನ ವಿದುಷಿಯೊಂದಳು, "ಅಹುದು. ನಾನು ಅವರ ಲೇಖನ ನೋಡಿದೆ. ಆದರೆ ಅದಕ್ಕೆ ಉತ್ತರವೆಂದೋ ಎಂಬಂತೆ ಅದೇ ಹೊತ್ತಿಗೆ ನನ್ನ "ಬಳೀ" ಕಾದಂಬರಿ ಪ್ರಸಿದ್ಧವಾಯಿತು." ಈ ಅವರ ಹೊಸ ಕಾದಂಬರಿ Criminal Tribes—ಜಾತಿಗಳ್ಳರೆಂದು ಹೆಸರಿರಿಸಿ, ಇಲ್ಲಿಯವರೆಗೂ ಮುಳ್ಳು ತಂತಿಯ ಬಂಧನದಲ್ಲಿ ಇಟ್ಟಿದ್ದ ಬೇಡರು, ಚಿಗರಿ ಬೇಟೆಗಾರರೇ ಮುಂತಾದ ಹಿಂದುಳಿದ ವರ್ಗದವರ ಜೀವನ ಚಿತ್ರಣವಾಗಿದೆ. ಈ ಪುಸ್ತಕವನ್ನು ಹಿಂದೀ ಕಮ್ಯುನಿಸ್ಟ ಪಕ್ಷದ ಮಹಾರಾಷ್ಟ್ರ ಶಾಖೆಯವರು ತಯಾರಿಸಿದ ತಮ್ಮ ಉತ್ತಮ ಪುಸ್ತಕಗಳ ಪಟ್ಟಿಯಲ್ಲಿ ಹಾಕಿದ್ದಾರೆಂದು ಅವರು ನನಗೆ ಹೇಳಿದರು. ಅದಕ್ಕೆ ಪ್ರೊ. ಶೇಜವಲಕರರೇನು ಹೇಳುವರೋ ಗೊತ್ತಿಲ್ಲ.

ಯೂರೋಪಿನಲ್ಲಿ ಪ್ರಕಟವಾಗುತ್ತಲಿರುವ ಅತಿವ್ಯಕ್ತಿವಾದೀ ಕತೆ ಕಾದಂಬರಿಗಳ ವಿಷಯದಲ್ಲಿ ಮಾರ್ಕ್ಸಿಸ್ಟ ವಿಮರ್ಶಕರ ಅಭಿಪ್ರಾಯಕ್ಕೂ ಪ್ರೊ. ಶೇಜವಲಕರರ ಅಭಿಪ್ರಾಯಕ್ಕೂ ಒಂದು ಅಪೂರ್ವವಾದ ಸಾದೃಶ್ಯವಿದೆ. ಅವರೆನ್ನುವ ಮಾತಿನಲ್ಲಿ ಕೆಲವಂಶದಲ್ಲಿ ಸತ್ಯತೆಯೂ ಇಲ್ಲದಿಲ್ಲ. ಆದರೆ ವಿಭಾವರೀ ಶಿರೂರಕರರ ಬರವಣಿಗೆಯಲ್ಲಿ ಪ್ರತಿಫಲಿತವಾಗುವ ವ್ಯಕ್ತಿವಾದಕ್ಕೂ, ಅತ್ಯಾಧುನಿಕ ನಿರಾಶಾವಾದಕ್ಕೂ ಬಹಳ ಅಂತರವಿದೆ.

ನವ ಸಾಮಾಜಿಕ ಸಂಬಂಧಗಳಿಂದ ಉದ್ಭೂತವಾದ ಮನೋವಿಕೃತಿಯ ಅಭ್ಯಾಸ ಹೊಸ ಸಮಾಜ ಶಾಸ್ತ್ರದ (Sociology) ಒಂದು ಅತ್ಯಂತ ಮುಖ್ಯ ಅಂಶವಾಗಿದೆ. ಈ ವಿಕೃತಿ ಕೇವಲ ಲೈಂಗಿಕ ಕಾರಣಗಳಿಂದ ಉದ್ಭೂತವಾದುದಷ್ಟೇ ಅಲ್ಲ ಹಳೆಯ ಸಮಾಜದ ಎಲ್ಲ ಕಟ್ಟಳೆಗಳನ್ನು ದೈವಾಯತ್ತವೆಂದು ಮನ್ನಿಸಿ ಜೀವನ ಸಾಗುತ್ತಿದ್ದಾಗ, ಅಂದಿನ ದಿನದ ದಾರಿದ್ರ್ಯ ಮತ್ತು ದೇಹದಂಡನೆಗಳನ್ನು ಎದುರಿಸುವ ಮತ್ತು ಆ ಒಂದು ಕಟ್ಟು ನಿಟ್ಟಿಗೆ ಅನುಕೂಲವಾಗುವಂತೆ ತಮ್ಮ ಸ್ವಂತದ ಭಾವನಾ ಬುದ್ಧಿಗಳನ್ನು, ಸಂವೇದನೆಗಳನ್ನು ಅಳವಡಿಸಿಕೊಳ್ಳುವದೇ ಸಮಸ್ಯೆಯಾಗಿದ್ದಾಗ, ವಿಕೃತಿಗಳುಂಟಾಗಬಹುದಾಗಿದ್ದರೂ. ಅವು ಇಷ್ಟು ತೊಡಕು ತೊಡಕಾದ ರೀತಿಯಲ್ಲಿ, ಇಷ್ಟು ತೀವ್ರತೆಯಿಂದ ವ್ಯಕ್ತವಾಗುತ್ತಿರಲಿಲ್ಲ Coming of Age in Samoa—"ಸಾಮೋಆ ನಡುಗಡ್ಡೆಗಳಲ್ಲಿ ಷೋಡಶ ವರ್ಷ"—ಎಂದ ತಮ್ಮ ಪ್ರಯಾಸಪೂರ್ವಕವಾಗಿ ತಯಾರಿಸಿದ ಗ್ರಂಥದಿಂದ ಆಧುನಿಕ ಸಮಾಜ—ಶಾಸ್ತ್ರಕ್ಕೂ ಬಹು ಮಹತ್ವದ ಕೊಡುಗೆಯನ್ನು ಕೊಟ್ಟವರೆಂದು ಹೆಸರಾಂತ Mrs. Margaret Mead ಎಂಬ ವಿದುಷಿಯೊನ್ನೆ ತಮ್ಮ Male and Female—('ಹೆಣ್ಣು ಗಂಡು')—A Study of Sexes in the changing world ('ಬದಲುಗೊಳ್ಳುವ ಲೈಂಗಿಕ ಸಮಸ್ಯೆಗಳನ್ನು ಕುರಿತು') ಎಂಬ ತಮ್ಮ ಉದ್ಗ್ರಂಥವನ್ನು ಪ್ರಕಟಿಸಿ, ತಮ್ಮ ಅನುಭವ ಮತ್ತು ಅಭ್ಯಾಸ ಪೂರ್ಣವಾದ ದೃಷ್ಟಿಯಿಂದ ಈ ಎಲ್ಲ ತೊಡಕಿನ ಪ್ರಶ್ನೆಗಳನ್ನು ಸಮಾಲೋಚಿಸಿ, ಕೆಲವೊಂದು ಮಹತ್ವದ ಮಾತುಗಳನ್ನು ಹೇಳಿದ್ದಾರೆ. ಪ್ಯಾಸಿಫಿಕ್ ಮಹಾ ಸಾಗರದಲ್ಲಿದ್ದ 'ಸಾಮೋಆ' ಎಂಬ ನಡುಗಡ್ಡೆಗಳಲ್ಲಿ ಸಾವಿರಾರು ವರ್ಷಗಳಿಂದ ನಡೆದು ಬಂದಿದ್ದ, ಸಾಮಾಜಿಕ ರೂಢಿ, ಸಂಪ್ರದಾಯಗಳನ್ನನುಸರಿಸಿಯೇ ಇನ್ನೂ ತಮ್ಮ ಜೀವನ ಸಾಗಿಸುವ, ತೀರ ಹಳೆಯ ಜನಾಂಗಗಳೊಡನೆ ಅನೇಕ ದಿವಸವಿದ್ದು, ಅವರ ಲೈಂಗಿಕ ಸಾಮಾಜಿಕ ಸಂಬಂಧಗಳ, ನಡುವಳಿಕೆಗಳ ಕುರಿತು ಅವರು ತಮ್ಮ ಹಿಂದಿನ ಪುಸ್ತಕ ಪ್ರಸಿದ್ಧಿಸಿದರು. ಅವರು ಆಧುನಿಕ ಸುಧಾರಿಸಿದ ಸಮಾಜಗಳಾದ ಪಾಶ್ಚಾತ್ಯರ ಜೀವನ ಕ್ರಮದ ವಿಷಯವನ್ನು ವಿವರಿಸುತ್ತ ಹೇಳಿದ ಮಾತುಗಳಲ್ಲಿ ತಮ್ಮ ಅಭಿಪ್ರಾಯವನ್ನು ಈ ರೀತಿ ವ್ಯಕ್ತಗೊಳಿಸಿದ್ದಾರೆ.

ಹಳೆಯ ಸಮಾಜಗಳಲ್ಲಿ ಸಾಮಾಜಿಕ ಸಂಬಂಧಗಳ ಒಂದು ಸ್ಥಿರತೆ ಇದ್ದಿತೇನೋ ನಿಜ. ಆದರಿಂದ ಇಂದಿನಂತಹ ತೊಡಕಿನ ಸಮಸ್ಯೆಗಳು ಹೆಚ್ಚಾಗಿ ಆಗ ಕಂಡು ಬರಲಿಲ್ಲವೆಂಬುದೂ ನಿಜ. ಆದರೆ ಆಗ ಒಂದು ತರದ ಸ್ಥಿರತೆ, ಮನದ ಸ್ವಾಭಾವಿಕವಾದ ಸಂಯಮ ಅದರಿಂದಾಗಿ ಕೆಲವೊಂದು ಸುಖ—ಸಮಾಧಾನಗಳು ನೆಲೆಸಲು ಸಹಾಯಕವಾಗಿದ್ದರೂ, ಆ ಸಮಾಜ ಗಳಲ್ಲಿ ಶೇಕ್ಸಪೀಯರ್ ಕೀಟ್ಸರಂತಹ ಕವಿಪುಂಗವರಾಗಲಿ, ನ್ಯೂಟನ್ ಮೆರಿ ಕ್ಯೂರಿಯಂತಹ ಶಾಸ್ತ್ರಜ್ಞರಾಗಲಿ, ಫ್ರಾಯ್ಡ್, ಡಾರ್ವಿನ್ನರಾಗಲಿ ಜನ್ಮಿಸು ವದು ಸಾಧ್ಯವೇ ಇಲ್ಲ. ಇಂತಹ ಸಂಸ್ಕೃತಿಯ ಪರಮೋಚ್ಚ ಕಳಸಗಳನ್ನು ನಾವೆಂದಿಗೂ ಅಲ್ಲಿ ಕಾಣಲಾರೆವು. ಮನದ ಹೊಯ್ದಾಟಗಳ ವೇದನೆಗಳಿ ಲ್ಲದ್ದೆ ಸಂಸ್ಕೃತಿಯ ಜನನವಾಗಲಾರದು. ಈ ನಮ್ಮ ತೊಡಕಿನ ಪ್ರಶ್ನೆಗಳು ನಮ್ಮನ್ನು ನಿರಾಶರನ್ನಾಗಿ ಮಾಡುವ ಕಾರಣವಿಲ್ಲ. ಆಧುನಿಕ ಪಾಶ್ಚಾತ್ಯ ಸಮಾಜಗಳು-ಅಮೇರಿಕೆ ಮೊದಲುಗೊಂಡು-ಹೀನಾಯದ(Decadence) (ದಾರಿ ಹಿಡಿದೆವೆಯೆಂದಾಗಲಿ, ಭ್ರಷ್ಟವಾಗಿ ಅಗತಿಕವಾಗಿವೆ (Depraved) ಎಂದಾಗಲಿ ಹೇಳಲು ಬಾರದು.

ಮಿಸೆಸ್ ಮಾರ್ಗಾರೆಟ್ ಮಿಡರ ಹೊಸ ಪುಸ್ತಕದ ವಿವೇಚನೆಯ ಪಾಂಡಿತ್ಯಪೂರ್ಣ ಪ್ರತಿಭೆಯ ಆಳ, ವಿಸ್ತಾರ ಎತ್ತರಗಳು 'ಮನುಷ್ಯ ವಿಜ್ಞಾನ' (Science of Man)ವನ್ನೇ ತಮ್ಮ ವಿಷಯವನ್ನಾಗಿಸಿವೆ ಯೆಂದು ಸೂಕ್ಷ್ಮದರ್ಶಿಗಳಾದ ಸಮಾಲೋಚಕರು ಅಭಿಪ್ರಾಯ ವ್ಯಕ್ತಮಾಡಿ ದ್ದಾರೆ. ಹೋದ ವರ್ಷದ The world Review ಎಂಬ ಬ್ರಿಟಿಶ್ ಮಾಸಿಕದ ಸಂಚಿಕೆಯೊಂದರಲ್ಲಿ ಈ ವಿಷಯವಾಗಿ ಪ್ರಸಿದ್ಧವಾದ, The Price of culture ಎಂಬ ವಿಚಾರಪರಿಪ್ಲುತವಾದ ಲೇಖನದೆಡೆಗೆ ಇಲ್ಲಿ ಸೂಜ್ಞರಾದ ವಾಚಕರ ದೃಷ್ಟಿಯನ್ನೆಳೆಯದೆ ಇರಲಾರೆ. ಈ ದೃಷ್ಟಿಯಿಂದ ವಿಭಾವರೀಬಾಯಿಯವರ ಬರವಣಿಗೆಯನ್ನವಲೋಕಿಸಿ ಅಭಿಪ್ರಾಯ ಕೊಡುವ ಕೆಲಸವು ಇನ್ನೂ ಆಗಬೇಕಾಗಿದೆ.

ನವವಿಚಾರ ಪ್ರವರ್ತಕರ ತವರಾದ ಸೋವಿಯೆಟ್ ಯೂನಿಯನ್ನಿ ನಲ್ಲಿಯೇ ಕುಟುಂಬವನ್ನು ಮತ್ತೆ ಮೊದಲಿನಂತೆ ಪ್ರಸ್ಥಾಪಿಸುವ ಪ್ರಯತ್ನ ಗಳು ನಡೆದಿವೆ; ಅದು ಈ ಆಧುನಿಕ ಸಮಾಜಶಾಸ್ತ್ರಕ್ಕೆ ಪಾಠ ಕಲಿಸದೆ

ಹೋದರೆ ಇನ್ನಾವದು ಕಲಿಸಬೇಕು ಎಂಬ ಇನ್ನೊಂದು ಯುಕ್ತಿವಾದವೂ ಆಗಾಗ ಕೇಳಬರುತ್ತದೆ. ಆಧುನಿಕ ಪಾಶ್ಚಾತ್ಯ ಸಮಾಜಶಾಸ್ತ್ರವು ಸೋವಿಯೆಟ್ ರಾಷ್ಟ್ರದಲ್ಲಿ ತಲೆಯೆತ್ತಿರುವ 'ಹೊಸ ಅನಾಗರಿಕತೆಯು' (Neo-babarianism) ವಿಶ್ಲೇಷಣವನ್ನೂ ಎಷ್ಟು ಪರಿಣಾಮಕಾರಿಯಾಗಿ ಮಾಡುತ್ತಿದೆಯೆಂಬುದು ಇನ್ನೂ ನಮ್ಮಲ್ಲಿ ಅನೇಕರಗೆ ಪರಿಚಯವಾಗಿಲ್ಲ. ದಿನ ದಿನಕ್ಕೆ ಬದಲಿಸುವ ಕಲೆ ಮತ್ತು ಸಂಸ್ಕೃತಿಯ ಸೂತ್ರವಾಕ್ಯಗಳು, ಅಲ್ಲಿ ನಿರಂಕುಶ ಅಧಿಕಾರವನ್ನು ತಮ್ಮ ಕಪಿಮುಷ್ಟಿಯಲ್ಲಿರಿಸಬಯಸುವ, ಬಲಾಢ್ಯವಾದ ರಾಜಕೀಯ ಪಕ್ಷವೊಂದರ ಇಚ್ಛೆಯಂತೆ ಹೇಗೆ ಬದಲಿಸುತ್ತವೆ, ಸಾಹಿತ್ಯದಲ್ಲಷ್ಟೇ ಅಲ್ಲದೆ ಸಂಗೀತ, ಚಿತ್ರಕಲೆ ಮುಂತಾದ ಮನುಷ್ಯನ ಮನದ ಮೇಲೆ ಪರಿಣಾಮ ಮಾಡಬಲ್ಲ ಅನೇಕ ಕಲೆ ಮತ್ತು ಸಂಸ್ಕೃತಿಯ ಕ್ಷೇತ್ರಗಳಲ್ಲೂ ಹೊಸ ಚಳುವಳಿಗಳು ವರಿಷ್ಠರ ಆಜ್ಞೆಗನುಸಾರವಾಗಿ ಹೇಗೆ ಹುಟ್ಟಿಯಳಿಯುವವು ಎಂಬ ವಿಶ್ಲೇಷಣವನ್ನೂ ಮಾಡುತ್ತಿದೆ. ಆದ್ದರಿಂದ ಸೋವಿಯಟ್ ಯೂನಿಯನ್ನಿನಲ್ಲಿಯ ಸಂಪ್ರದಾಯಗಳ ಪುನರಾವೃತ್ತಿಯು (Revisionism) ಏನನ್ನೂ ಸಿದ್ಧಮಾಡಲಾರದು.

ಮಾರ್ಕ್ಸಿಸ್ಟರ ಅಭಿಪ್ರಾಯಕ್ಕೂ ಶೇಜವಲಕರರ ಅಭಿಪ್ರಾಯಕ್ಕೂ ಇರುವ ಸಾಮ್ಯದ ಕುರಿತು ಈ ಮೊದಲೊಮ್ಮೆ ಹೇಳಿದೆ.'History repeats itself' ಎಂಬಿವೇ ಮುಂತಾದ ಇಂಟರಮೀಡಿಯೇಟ ಪರೀಕ್ಷೆಗೆ ನಿಬಂಧ ಬರೆಯಲು ಉಪಯೋಗ ಬೀಳಬಹುದಾದ ಸುಲಭ ದೂರಾನ್ವಯದ ವಿಚಾರಗಳು ಮುಂದೆ ಕೆಲಸಕ್ಕೆ ಬರಲಾರವು. ಹೊಸ ತಿಳಿವು ಹತಪ್ರಭವಾಗಿಲ್ಲ. ಆದರೆ ಅದರ ಆವಿಷ್ಕಾರ ಜೀವನದ ಎಲ್ಲ ಕ್ಷೇತ್ರಗಳಲ್ಲಿ ಸರಿಯಾಗಿ ಇನ್ನೂ ಆಗಬೇಕಾಗಿರುವಾಗ ಮುಕ್ತಾತ್ಮಗಳು ಕೆಲವೊಮ್ಮೆ ಸಂಶಯದ ಮಡುವಿಗೆ ಸಿಲುಕಿದುದು ಕಂಡುಬಂದಲ್ಲಿ, ಅಂಧಃಕಾರ ಕವಿದಂತೆನಿಸಿದಲ್ಲಿ, ಅದರಿಂದ ಈ ನವಸೂರ್ಯನ ಬೆಳಗಿನ ಕುರಿತು ಯಾವ ಶಂಕೆಯನ್ನೂ ಪಡಬೇಕಾಗಿಲ್ಲ. ಇಲ್ಲಿ ರಸೆಲ್ಲರ ಒಂದು ಮಾತು ನೆನಪಾಗುತ್ತದೆ—"ಮೂಢನಿಗೆ ಯಾವಾಗಲೂ ತುಂಬ ಆತ್ಮವಿಶ್ವಾಸ; ಜಾಣನಿಗೆ ಮಾತ್ರ ಸಾಶಂಕತೆಯ ಉಪದ್ರವ ಬಹಳ."

ವಿಭಾವರಿಯವರ ಸಾಶಂಕತೆ ಅಸಮಾಧಾನ ಎಂತಹದು, ಯಾವ ಜಾತಿಗೆ ಸೇರಿದುದು ಎಂಬುದನ್ನು ಇನ್ನೂ ಸರಿಯಾಗಿ ತಿಳಿದುನೋಡಿ,

ಪೂರ್ವಗ್ರಹಗಳನ್ನು ತ್ಯಜಿಸಿ, ಸುಲಭ ಸಮಾಧಾನಕರಣಗಳನ್ನುಳಿದು ತೂಗಿ ನೋಡುವ ಕೆಲಸ ನಡೆಯಲಿ.

ಈ ಲೇಖನದಲ್ಲಿ ಪ್ರಾರಂಭದಲ್ಲಿ ಹೇಳಿದ ಹೊಸದೃಷ್ಟಿ ಇನ್ನೂ ಕೆಲವು ವಿಚಾರವಂತರ ಸೊತ್ತಾಗಿ ಮಾತ್ರ ಇದೆ. ಅದು ಸಾಮಾಜಿಕ ನಡೆನುಡಿಗಳಲ್ಲಿ ಸೇರಿ, ಹೊಸ ಬೆಳಕು ದೋರಿ, ಹೊಸ ಜೀವನದ ಹೊಸ ಆಶೆಗಳನ್ನು ಕುದುರಿಸಿದಂತೆಲ್ಲ ಅಂತಹ ಸಾಹಿತ್ಯವೂ ಬಂದೀತು. ಅಂತಹ ಆತ್ಮವಿಶ್ವಾಸವೂ ಸಾಹಿತ್ಯ ಕೃತಿಗಳಲ್ಲಿ ಕಂಡೀತು. ಕಳೆದ ಕೆಲವು ವರ್ಷಗಳ ಇತಿಹಾಸವನ್ನು ನೋಡಿದ ವಿಚಾರವಂತರಾದೂ ಕೇವಲ ಒಂದು ಅಸ್ಪಷ್ಟವಾದ ಆಶಾವಾದವನ್ನು ನಂಬಿಕೊಂಡಿರಲಾರರು. ನಮ್ಮ ಜೀವನ ಹೊಸದೊಂದು ಶ್ರದ್ಧೆಯನ್ನು ಕಂಡುಕೊಳ್ಳಬೇಕಾದರೆ, ಕೇವಲ ಮೃಗಜಲದಂತಿದ್ದ ಆದರ್ಶ ನಂಬಿಕೆಗಳು ಕೆಲಸಕ್ಕೆ ಬಾರದವೆಂಬ ಮಾತು ಸ್ಪಷ್ಟವಾಗಿದೆ. ಆದರೆ ಈ ಹೊಸ ಶ್ರದ್ಧೆ ಜೀವನಕ್ಕೆ ರೂಪುಗೊಡದ ಹೊರತು, ಆದರ ವ್ಯಾವಹಾರಿಕತೆಯ ಪ್ರಾತ್ಯಕ್ಷಿಕ ಆತ್ಮವಿಶ್ವಾಸವನ್ನುಂಟುಮಾಡದ ಹೊರತು, ಒಡೆದ ಕನ್ನಡಿಯ ಚೂರುಗಳಲ್ಲಿ ತನ್ನ ವಿಕೃತ ಮುಖದ ನೂರಾರು ಪ್ರತಿಬಿಂಬಗಳನ್ನು ಕಂಡು ವಿಕಟಹಾಸ್ಯ ಮಾಡುವ ಉನ್ಮಾದದ ಚಿತ್ರಣ ಪ್ರಾಮಾಣಿಕರಾದ ಲೇಖಕರನೇಕರ ಬರವಣಿಗೆಯಲ್ಲಿ ಕಾಣದಿರದು. ಈ ನವ ಸಮಾಜ ಕಟ್ಟುವ ಕಾರ್ಯದಲ್ಲಿ ಟೊಂಕ ಬಗ್ಗಿಸಿ ಮಣ್ಣಿನ ಬುಟ್ಟಿಗಳನ್ನು ಸಾಹಿತಿಯು ಹೊತ್ತು ಕೊಡಬೇಕಾಗಿದೆ. ಆಗಲೇ ಅವನ ಜೀವನಕ್ಕೊಂದು ಸುಸೂತ್ರತೆ ಬಂದೀತು. ಅಲ್ಲಿಯವರೆಗೆ ತನ್ನ ಸುತ್ತಲಿನ ಸುಳ್ಳುತನ, ಡಂಭಾಚಾರ, ಅಧಿಕಾರಲಾಲಸೆಗಳೆಡೆಗೆ ಬೆನ್ನು ತಿರುಗಿಸಿ 'ಔದಾರ್ಯದ ಉರುಳಲ್ಲಿ' ಸಿಲುಕಿ ಬವಣೆಬಟ್ಟ ರಾಧಾಕೃಷ್ಣನು ತಿರುಗಿ ತನ್ನ ಮನೆಯನ್ನು ಸೇರಿ ಶಾಂತಿಯನ್ನು ಪಡೆವದಷ್ಟೇ ಆದೀತು. ಇದೇ ಮಾತನ್ನು ಮುಂಬಯಿಯ ಮೊನ್ನಿನ ಸಾಹಿತ್ಯ ಸಮ್ಮೇಲನದ ಸಾಹಿತ್ಯಗೋಷ್ಠಿಯ ಅಧ್ಯಕ್ಷರು ತಮ್ಮ ಭಾಷಣದಲ್ಲಿ ಸ್ಪಷ್ಟವಾದ ಶಬ್ದಗಳಲ್ಲಿ ಮಂಡಿಸಿದ್ದಾರೆ :

"ಚಕ್ರವರ್ತಿಗಳ ಛಾಯಾನುಜೀವಿಯಾಗಿ, ನಾಯಕರ ಮನೆ ಮುಂದಿನ ನಾಯಿಯಾಗಿ, ಸಿರಿವಂತರ ಕಾವಣಿಗೆಳೆದುರು ಕೈಯೊಡ್ಡಿ ಬಾಳಿದ ಸಾಹಿತಿಯು ನಿರ್ಭೀತನಾಗಿ ಸರ್ವತಂತ್ರನಾಗಿ ಜನತೆಯ ಪ್ರತಿನಿಧಿಯಾಗುವ

ಕಾಲ ಬಂದಿದೆ. ಮನುಕುಲದ ಅಭ್ಯುದಯಕ್ಕಾಗಿ ಸಂತತ ಶ್ರಮಿಸುವ ಸ್ವಯಂಸೇವಕನಾಗುವ ಕಾಲ ಬಂದಿದೆ. ಸಾಹಿತಿಯು ಮನುಕುಲದ ಈ ಮಹಾಪ್ರಗತಿಪಥವನ್ನರಿತು ಅದರಲ್ಲಿ ಅನನ್ಯ ಶ್ರದ್ಧೆಯನ್ನು ತಾಳಬೇಕಾಗಿದೆ. ಪ್ರತಿಗಾಮಿ ಶಕ್ತಿಗಳನ್ನು ಕೆಚ್ಚೆದೆಯಿಂದ ಎದುರಿಸಬೇಕಾಗಿದೆ"

ಈ ಎಲ್ಲ ಸಮಸ್ಯೆಗಳನ್ನು ನಮ್ಮ ವಿಚಾರವಂತರು ಕೂಲಂಕಷವಾಗಿ ಚರ್ಚಿಸಿ ಬೆಳಕುದೋರಲಿ. ನಮ್ಮ ನೆರೆಯವರೇ ಆದ ಮರಾಠಿಗರೊಡನೆ ಕಳೆದ ಕಾಲವೆಲ್ಲಕ್ಕೂ ನಾನು ಋಣಿಯಾಗಿದ್ದೇನೆ. ಅವರಲ್ಲಿಯ ಇಂದಿನ ಸಾಮಾಜಿಕ, ಸಾಹಿತ್ಯಿಕ ಕ್ಷೇತ್ರಗಳಲ್ಲಿ ನಡೆದ ವಿಚಾರ ಮಂಥನ ಅವರ ನಿರ್ಭಯ ಸತ್ವಕ್ಕೆ, ಪ್ರಾಮಾಣಿಕ ಕೆಚ್ಚಿಗೆ ಸಾಕ್ಷಿಯಾಗಿರುವಂತೆ, ಫಲಪ್ರದವೂ ಆಹುದೆಂದು ನನಗೆ ತೋರುತ್ತದೆ. ಈ ಪುಸ್ತಕ ಅವರ ಈ ಸಾಹಸಪೂರ್ಣವಾದ ಜೀವನದ ವಿಷಯವಾಗಿ ನಮ್ಮವರಲ್ಲಿ ಹೆಚ್ಚಿನ ಕುತೂಹಲ ಆಸ್ಥೆಗಳನ್ನುಂಟುಮಾಡಲು ಸಹಾಯಕವಾದಲ್ಲಿ ಸಾರ್ಥಕತೆಯ ಸುಖವೊಂದು ನನ್ನದಾದೀತೆಂದು ಭಾವಿಸಿದ್ದೇನೆ.

ಸಾಂಗಲಿ, ಜುಲೈ ೧೯೫೧. ಡಿ. ಎಸ್. ಕುಲಕರ್ಣಿ

*

# ವಂದನೆ

ಸುಮಾರು ಏಳೆಂಟು ವರುಷಗಳ ಹಿಂದೆ ನಾನು ಕಾಲೇಜಿನಲ್ಲಿದ್ದಾಗ, ಇಲ್ಲಿ ಮರಾಠೀ ಭಾಷೆಯ ಸಂಪರ್ಕ ಬಂದು ಆತುರತೆಯಿಂದ ಓದಿದ ಮೊದಲಿನ ಪುಸ್ತಕಗಳಲ್ಲಿಯೇ ಪ್ರಸ್ತುತ ಕಾದಂಬರಿಯೂ ಒಂದಾಗಿದ್ದಿತು. ಮುಂದೆ ಆಗಾಗ ಮಹಾರಾಷ್ಟ್ರದಲ್ಲಿ ಸುತ್ತಲು ನಡೆಯುತ್ತಿದ್ದ ಹೊಸ ಹೊಸ ವೈಚಾರಿಕ ಚಳುವಳಿಗಳನ್ನು ಕುರಿತು ಓದಿದಂತೆಲ್ಲ ನನಗೆ ಈ ಜನ ಮತ್ತೆ ಅವರ ಭಾಷೆ-ಸಾಹಿತ್ಯ ಇವುಗಳ ವಿಷಯಕ್ಕೆ ಉಂಟಾಗಿದ್ದ ಪ್ರೇಮಾದರಗಳು ಹೆಚ್ಚುತ್ತ ನಡೆದವು. ಇದೆಲ್ಲದರ ಪರಿಚಯ ನಮ್ಮ ಜನರಿಗಾಗಬೇಕು ಎಂಬ ವಿಚಾರ ಮತ್ತೆ ಮತ್ತೆ ಬರುತ್ತಿತ್ತು. ಆದರೆ ಆ ಕೆಲಸ ನನಗಾದೀತೇ? ಅದರ ವಿಸ್ತಾರದ ರೂಪರೇಖೆಗಳನ್ನಾದರೂ ಗುರುತಿಸಿ, ಅದರ ಇತ್ತೀಚಿನ ಬೆಳವಣಿಗೆಯ ವಿವಿಧವಾದ ಅಭಿವ್ಯಕ್ತಿಯ ಮುಖ್ಯಾಂಶಗಳನ್ನಾದರೂ ಗುರುತುಹಾಕಿ, ಅದರ ಪೂರ್ವಾಪರಗಳ ಮಾಲಿಕೆಯಲ್ಲಿ ಹೆಣೆದು ನೋಡಬಲ್ಲ ವಿಚಕ್ಷಣತೆ ನನ್ನಲ್ಲಿದ್ದೀತೇ?—ಎಂಬ ಪ್ರಶ್ನೆ ಯಾವಾಗಲೂ ಇದ್ದಿತು. ಆದರೂ ಈ ಕಾದಂಬರಿಯನ್ನು ಅನುವಾದಿಸಬೇಕೆಂಬ ವಿಚಾರ ಮಾತ್ರ ನನ್ನನ್ನು ಈ ಮೊದಲೇ ಗ್ರಾಸಿಸಿದ್ದಿತು. ಕೊನೆಗೊಮ್ಮೆ ಅದನ್ನು ಮಾಡಿ ಮುಗಿಸಿದೆ. ಅದರೊಡನೆ ದೀರ್ಘವಾದ ಪರಿಚಯಾತ್ಮಕ ಲೇಖನವೊಂದನ್ನು ಬರೆದು ಮುಗಿಸಿದೆ. ತಿಳಿದವರು ತೂಗಿ ನೋಡಿ ಪರಾಂಬರಿಸಬೇಕು. ಭಾಷೆ–ಸಂಸ್ಕೃತಿಗಳ ಹದವಾದ ಬೆಳವಣಿಗೆಯನ್ನೇ ಬಯಸುವ ಸೂಜ್ಞರು ಈ ಅನುವಾದದ ಕುರಿತಾದ ತಮ್ಮ ಅಭಿಪ್ರಾಯವನ್ನು ತಿಳಿಸಿ ನನ್ನನ್ನು ಉಪಕೃತನನ್ನಾಗಿಸಬೇಕು.

ನನ್ನ ಈ ಚಿಕ್ಕ ಸಾಹಸಕ್ಕೆ ಸರಿಯಾದ ರೂಪ ಕೊಟ್ಟು ಪುಸ್ತಕ ರೂಪದಲ್ಲಿ ಅದನ್ನು ವಾಚಕರ ಕೈಯಲ್ಲಿರಿಸಲು ನೆರವಾದ ನನ್ನ ಅನೇಕ ಹಿರಿಯರನ್ನು ಮಿತ್ರರನ್ನು ನಾನು ಇಲ್ಲಿ ನೆನೆಯದಿರಲಾರೆ.

ಮೊದಲಿಗೆ ತಮ್ಮ ಪುಸ್ತಕವನ್ನು ಅನುವಾದಿಸಿ ಪ್ರಸಿದ್ಧಿಸಲು ಅನುಮತಿಯನ್ನಿತ್ತುದಕ್ಕಾಗಿ ಮೂಲಲೇಖಕಿಯರಾದ ಸೌ. ಮಾಲತೀಬಾಯಿ ಬೇಡೇಕರ ಅವರಿಗೆ ನನ್ನ ವಂದನೆಗಳು. ಅನೇಕ ವ್ಯಾವಹಾರಿಕ ಅಡ್ಡಿ

ಆತಂಕಗಳಿದ್ದರೂ ಅವರು ನನ್ನ ಬಿನ್ನಹಕ್ಕೆ ಮನ್ನಣೆಯಿತ್ತರು. ಅದರಂತೆಯೇ ಈ ಪುಸ್ತಕವನ್ನು ಪ್ರಸಿದ್ಧಿಸಲೊಪ್ಪಿ, ಆ ಕೆಲಸವನ್ನು ನೆರವೇರಿಸಿದ ಉಷಾ ಪ್ರೆಸ್ಸಿನ ಒಡೆಯರಾದ ಶ್ರೀ ಆರ್. ಎಸ್. ಹಬ್ಬು ಅವರಿಗೂ ನಾನು ವಂದನೆಗಳನ್ನರ್ಪಿಸುತ್ತೇನೆ.

ಪುಸ್ತಕದ ಭಾಷಾಂತರ ನಾನು ಮಾಡಿ ಮುಗಿಸಿ ಇಂದಿಗೆ ನಾಲ್ಕು ವರ್ಷಗಳಾದವು. ಅದನ್ನು ಪ್ರಸಿದ್ಧಿಸುವದರ ದಾರಿಯಲ್ಲಿ ಬಂದ ಅಡೆ-ತಡೆಗಳು ಒಂದಲ್ಲ ಎರಡಲ್ಲ, ಲೇಖಕಿಯರ ಗುಪ್ತನಾಮದಿಂದಾಗಿ ಅವರನ್ನು ಸಮೀಪಿಸುವದೇ ಕಠಿಣವಾಗಿತ್ತು. ಆ ಕೆಲಸದಲ್ಲಿ ನನಗೆ ನನ್ನ ಮಿತ್ರರಾದ ಪ್ರೊ. ಯಾರ್ದಿ, ಅವರ ಮಿತ್ರರೂ ಮಹಾರಾಷ್ಟ್ರದ ನುರಿತ ಲೇಖಕರೂ ಆದ ಮುಂಬಯಿಯ ಪ್ರೊ. ವಿ. ಎಚ್. ಕುಲಕರ್ಣಿ, ನಂತರ ನನ್ನ ಗುರುಗಳಾದ ಪ್ರೊ. ಜಿ. ಎಸ್. ದೀಕ್ಷಿತ, ಪುಣೆಯ ಇಂಟರನ್ಯಾಶನಲ್ ಪುಸ್ತಕಾಲಯದ ಒಡೆಯರಾದ ಶ್ರೀ ದೀಕ್ಷಿತ ಮತ್ತು ಅವರ ಪ್ರಸಿದ್ಧ ಲೇಖಕ ಪತ್ನಿ ಸೌ. ಮುಕ್ತಾಬಾಯಿ ದೀಕ್ಷಿತ ಹೀಗೆ ಅನೇಕ ಸಹೃದಯರ ಕೈಗಳ ಮಾಲೆಯನ್ನೇ ಕಟ್ಟಿ ಲೇಖಿಕೆಯರನ್ನು ಮುಟ್ಟಿ, ವ್ಯವಹಾರದ ಚಕ್ರವ್ಯೂಹದೊಳಗಿಂದ ಹಾಯ್ದು ಪುಸ್ತಕ ಪ್ರಸಿದ್ಧವಾಗುವವರೆಗೂ ಎಂದರೆ—! ಎಂದರೇನೆಂಬುದನ್ನು ಮುಂದೆ ವಿಚಾರ ಮಾಡುವ ಪ್ರಸಂಗವೇ ನನಗೆ ಬರಲಿಲ್ಲ. ಯಾಕೆಂದರೆ ನನ್ನ ಗುರುಗಳಾದ ಪ್ರೊ. ಮುಗಳಿಯವರೇ ಅದನ್ನೆಲ್ಲ ಮಾಡಿ ಮುಗಿಸಿದರು. ನಂತರ ತೂಕಡಿಸುತ್ತಿದ್ದ ನನ್ನನ್ನೆಬ್ಬಿಸಿ "ಮಮ" ಎನ್ನು ಅಂದರು. ಎಂದೆ. ಅವರಲ್ಲದಿದ್ದರೆ ನನ್ನ ಹಸ್ತಲಿಖಿತ ಹುಳತಿನ್ನುತ್ತ ಬಿದ್ದಿರಬಹುದಾಗಿತ್ತಷ್ಟೆ. ಅವರೇ ಈ ಕೃತಿಗೆ God father. ನನಗೆ ಕಾಲೇಜಿನಲ್ಲಿ ಸಂಬಂಧ ಬಂದಾಗಿನಿಂದ ನನ್ನಲ್ಲಿ ಆಸ್ಥೆ ತೋರಿಸಿ ಅನೇಕ ವಿಧದಲ್ಲಿ ಸಹಾಯ ನೀಡಿದ ಅವರಿಗೂ, ನನ್ನ ಗುರುಗಳಾದ ಪ್ರೊ. ದೀಕ್ಷಿತ ಅವರಿಗೂ ಉಳಿದೆಲ್ಲ ಹಿರಿಯರಿಗೂ ಮಿತ್ರರಿಗೂ ನಾನು ಚಿರಋಣಿ.

ಈ ಪುಸ್ತಕಕ್ಕೆ ತಮ್ಮ ಹರಕೆಯನ್ನು ಸಲ್ಲಿಸಿ ಸಾಗಲಿ ಎಂದು ಮುನ್ನಡೆಸಿದ ನಮ್ಮೆಲ್ಲರಿಗೂ ಹಿರಿಯರಾದ ಬೇಂದ್ರೆಯವರಿಗೆ ನನ್ನ ಭಕ್ತಿಪೂರ್ವಕ ಅಭಿವಂದನೆ.

ಕೊನೆಯದಾಗಿ ನನ್ನ ಹಿರಿಯ ಸರಿಯದ ಮಿತ್ರರೂ, ಇಲ್ಲಿಯ ವಿಲಿಂಗ್ಡನ್ ಕಾಲೇಜಿನಲ್ಲಿ ಇಂಗ್ಲೀಷ್ ಸಾಹಿತ್ಯದ ಅಧ್ಯಾಪಕರೂ ಆದ ಶ್ರೀ ಮ. ದ. ಹಾತಕಣಗಲೇಕರ ಅವರ ಬಹು ಮಹತ್ವದ ಉಪಕಾರವನ್ನು ನೆನೆಸದಿರಲಾರೆ. ಅವರೊಡನೆ ಒಂದೆಡೆಗೆ ಕಳೆದ ಮೂರು ವರ್ಷಗಳಲ್ಲಿ, ನನಗೆ ಅವರು ಮರಾಠಿಯಿಂದ ಓದಿ ತೋರಿಸಿದ ವಿಷಯಗಳು ಅಷ್ಟಿಷ್ಟಲ್ಲ ಅವರೊಡನೆ ಆದ ಸಹವಾಸ, ಸಹವಾಚನ, ಚರ್ಚೆಗಳಿಂದ ನನಗೆ ಆಧುನಿಕ ಮರಾಠೀ ಸಾಹಿತ್ಯದ ಬಹುಮುಖತೆಯ ಪರಿಚಯ ಸ್ವಲ್ಪವಾದರೂ ಆಯಿತಲ್ಲದೆ, ಅದರಿಂದ ವಿಭಾವರೀ ಶಿರೂರಕರರ, ಮರಾಠೀ ವಿಮರ್ಶಕರ ಕುರಿತು ಬರೆದ ನನ್ನ ದೀರ್ಘವಾದ ಲೇಖನಕ್ಕೆ ಅಪ್ರತ್ಯಕ್ಷವಾಗಿ ಆದ ಸಹಾಯ ಅಷ್ಟಿಷ್ಟಲ್ಲ. ಅವರಿಗೆ ನನ್ನ ಹಾರ್ದಿಕ ವಂದನೆಗಳು.

**ಡಿ. ಎಸ್. ಕುಲಕರ್ಣಿ**

*

# ನಮ್ಮ ಮಾತು

‘ಜೋಕಾಲಿಯ ಮೇಲೆ’ ಕಾದಂಬರಿಯೊಡನೆ ನಮ್ಮ ಐದನೆಯ ವರುಷ ಮುಗಿಯುತ್ತದೆ. ನಮ್ಮ ಹೊಸ ವರುಷ ಇದೇ ಅಕ್ಟೋಬರ್‌ದಿಂದ ಶ್ರೀ ವಿ. ಎಂ. ಇನಾಂದಾರರ ‘ಸ್ವರ್ಗದ ಬಾಗಿಲು’ ಕಾದಂಬರಿಯೊಡನೆ ಪ್ರಾರಂಭವಾಗುತ್ತದೆ.

‘ಜೋಕಾಲಿಯ ಮೇಲೆ’ ಕಾದಂಬರಿಯು ಮಹಾರಾಷ್ಟ್ರದಲ್ಲಿ ಹೆಸರಾದ ಲೇಖಕಿಯರಾದ ಶ್ರೀಮತಿ ಮಾಲತಿಬಾಯಿ ಬೇಡೇಕರ್ ಅವರ ಒಂದು ಸುಪ್ರಸಿದ್ಧ ಕಾದಂಬರಿಯ ಅನುವಾದ. ಇವರ ಲೇಖನನಾಮ ವಿಭಾವರೀ ಶಿರೂರಕರ.

ಇದನ್ನು ಅನುವಾದಿಸಿದವರು ಶ್ರೀ ಡಿ. ಎಸ್. ಕುಲಕರ್ಣಿಯವರು. ಇವರು ವಿಲಿಂಗ್ಡನ್ ಕಾಲೇಜಿನಲ್ಲಿ ಅರ್ಥಶಾಸ್ತ್ರವನ್ನೋದಿ ಬಿ.ಎ. ಆನರ್ಸ್ ಪಾಸಾಗಿದ್ದಾರೆ, ಎಂ ಎ. ಪರೀಕ್ಷೆಗೆ ವ್ಯಾಸಂಗ ಮಾಡುತ್ತಿದ್ದಾರೆ. ಪ್ರಗತಿಪರವಾದ ಆಧುನಿಕ ವಿಚಾರಪ್ರಣಾಲಿಗಳನ್ನು ಚೆನ್ನಾಗಿ ತಿಳಿದುಕೊಂಡಿದ್ದಾರೆ. ಭಾಷಣ ಮತ್ತು ಲೇಖನದಲ್ಲಿ ಚತುರರು, ಅನ್ಯಭಾಷೆಗಳಲ್ಲಿ ಉತ್ತಮೋತ್ತಮ ಕೃತಿಗಳನ್ನು ಕನ್ನಡಿಸಬೇಕೆಂದು ಅವರಿಗೆ ಹವ್ಯಾಸವಿವೆ. ಸ್ವಂತವಾಗಿ ಸಣ್ಣಕತೆಗಳನ್ನೂ ಬರೆದಿದ್ದಾರೆ. ಇವರು ಸಾಂಗಲಿಯ ಒಂದು ಪ್ರೌಢಶಾಲೆಯಲ್ಲಿ ಅಧ್ಯಾಪಕರು. ಈ ಕಾದಂಬರಿಯ ವಿಷಯವಾಗಿ ಮತ್ತು ಲೇಖಕಿಯರ ವಿಷಯವಾಗಿಯೂ ಶ್ರೀ ಕುಲಕರ್ಣಿಯವರು ಒಂದು ದೀರ್ಘ ಲೇಖನವನ್ನು ಈ ಕಾದಂಬರಿಯ ಪ್ರಾರಂಭದಲ್ಲಿ ಕೊಟ್ಟಿರುವದರಿಂದ ನಾವು ಅದರ ಬಗ್ಗೆ ಯಾವ ವಿಷಯವನ್ನೂ ಬರೆಯುವದು ಅನವಶ್ಯಕ.

ಈ ಕಾದಂಬರಿಯನ್ನು ನಮ್ಮ ಮಾಲೆಯಲ್ಲಿ ಪ್ರಕಟಿಸಲು ಸಹಾಯ ಮಾಡಿದ ಶ್ರೀ ರಂ. ಶ್ರೀ. ಮುಗಳಿ, ಸಾಂಗಲಿ ಅವರಿಗೆ ನಮ್ಮ ವಂದನೆಗಳು. ಇವರೇ ಶ್ರೀಮತಿ ಮಾಲತಿಬಾಯಿ ಬೇಡೇಕರ್ ಮತ್ತು ಶ್ರೀ ಡಿ. ಎಸ್. ಕುಲಕರ್ಣಿಯವರಿಗೆ ನಮ್ಮ ಮಾಲೆಯ ಪರಿಚಯ ಮಾಡಿಕೊಟ್ಟು ಈ ಅವಕಾಶವನ್ನು ಕಲ್ಪಿಸಿಕೊಟ್ಟರು. ಶ್ರೀ ಮುಗಳಿಯವರ ಮಾತಿಗೆ ಒಪಿ

ಕೊಂಡು ಶ್ರೀಮತಿ ಮಾಲತಿಬಾಯಿ ಜೇಡೇಕರ್ ಮತ್ತು ಶ್ರೀ ಡಿ. ಎಸ್. ಕುಲಕರ್ಣಿಯವರು ನಮ್ಮ ಮಾಲೆಗೆ ಈ ಕಾದಂಬರಿಯನ್ನು ಪ್ರಕಟಿಸಲು ಅವಕಾಶ ಕೊಟ್ಟಿದ್ದಕ್ಕೆ ನಮ್ಮ ವಂದನೆಗಳು.

ಈಗ ಐದು ವರುಷದಲ್ಲಿ ನಮಗೆ ನಮ್ಮ ಬರಹಗಾರರು ಮತ್ತು ಗ್ರಾಹಕರು ತುಂಬಾ ಸಹಕಾರ ಕೊಡುತ್ತಿದ್ದಾರೆ. ಅವರಿಗೆ ಎಂದಿನಂತೆ ನಮ್ಮ ವಂದನೆಗಳು.

ಇತಿ,

ಪ್ರಕಾಶಕರು

# ಜೋಕಾಲಿಯ ಮೇಲೆ

೧

ಚಿಕ್ಕ ಶಾಮುನನ್ನು ಮಾಣಿಕಳ ಕೈಗೆ ಕೊಟ್ಟು ಅಚಲೆ ಮನೆಗೆ ನಡೆದಳು. "ಇದೇನ್, ಈಗಾಗಲೆ ಹೊರಟೆಯೇನು?"

"ಹೂಂ. ಇನ್ನು ಹೊರಡತೇನೆ. ಬಾಬಾ ಮನೆಗೆ ಬಂದಿರಬಹುದು ಆಗಲೆ."

"ಅವನೆ? ಅವನೆಲ್ಲಿ ಇಷ್ಟು ಬೇಗ ಮನೆಗೆ ಬಂದುದುಂಟು? ಸಂಜೆಯೊಳಗಾಗಿ ಇನ್ನವನು ಮನೆಗೆ ತಿರುಗಿದರೆ ನನ್ನನ್ನು ಕೇಳು!" ಮಾಣಿಕ ಳೆಂದಳು. ಆ ಮಾತಿಗೆ ಮಾಣಿಕ ಮತ್ತು ಅಚಲಾ ಈರ್ವರೂ ನಕ್ಕರು. ಆದರೆ ಮಾಣಿಕಳದಕ್ಕಿಂತ ಅಚಲೆಯ ನಗೆ ಒಂದು ರೀತಿ ನಿಸ್ತೇಜವಾಗಿತ್ತು. ಅವಳು ಒಡನೆ,

"ಇಲ್ಲ. ಅವನು ಬೇಗನೆ ಬರಬಹುದು. ಈ ದಿನ ನನ್ನನ್ನು ಡಾಕ್ಟರರ ಕಡೆಗೆ ಕಣ್ಣು ತಪಾಸಿಸಲು ಕರೆದುಕೊಂಡು ಹೋಗುವವನಿದ್ದಾನೆ ಅವನು" ಎಂದಳು.

"ತಾಯೀ[1], ನಾನು ನಿನಗೆ ಹೇಳ್ತೀನೆ ಕೇಳು—ಅವನು ಈವೊತ್ತು ಬೇಗ ಬರಲಾರ. ಇನ್ನದು ಅವನ ಲಕ್ಷ್ಯದಲ್ಲಿ ಕೂಡ ಉಳಿದಿರಲಿಕ್ಕಿಲ್ಲ, ಆ ಮಾತು."

"ಮಾಣಿಕ, ನಮ್ಮ ಬಾಬಾನದು ತಂಗಿಯ ಮೇಲೆ ಎಷ್ಟು ಮಮತೆ ಎಂಬುದು ನಿನಗೆ ಗೊತ್ತಿಲ್ಲ. ಇಂಥವನೊಬ್ಬ ಅಣ್ಣ ದೊರೆಯಬೇಕಾದರೂ ಭಾಗ್ಯದ ಮಾತು."

"ಅಹಾ! ಅವನು ಕೇವಲ ನಿನಗೊಬ್ಬಳಿಗೇ ಅಣ್ಣ; ನನಗೇನೂ ಅಲ್ಲವೇ ಅಲ್ಲವೆಂದು ತೋರುತ್ತದೆ!"

---

1 ಮಹಾರಾಷ್ಟ್ರದಲ್ಲಿ ಹೆಣ್ಣುಮಕ್ಕಳ ವಿಷಯದಲ್ಲಿ ಪ್ರೇಮಾದರಗಳನ್ನು ವ್ಯಕ್ತ ಪಡಿಸುವ ಕರೆಯ ಒಂದು ಪ್ರಕಾರ; 'ಅಕ್ಕ' ಎಂದಂತೆ.

"ಹೌದು. ಅವನು ನನ್ನಂತೆ ನಿನಗೂ ಅಣ್ಣನಹುದು. ಅಲ್ಲವೆಂದವರಾರು? ಆದರೆ ನೀನು ನಿನ್ನ ಸಂಸಾರದಲ್ಲಿ ತೀರ ಬೆರೆತುಹೋಗಿರುವದರಿಂದ ನಿನಗದು ಕಂಡುಬರಲಾರದು—"

"ಮತ್ತೆ ಅವನ ಸಂಸಾರದೊಳಗೆ ಅವನಿಗೂ ತಂಗಿಯರು ಕಾಣದಾಗಬಹುದಲ್ಲ!" ಮಾಣಿಕ ನಗುತ್ತ ಉತ್ತರಿಸಿದಳು.

"ಹೂಂ. ಆದರೆ ಅದಕ್ಕಿನ್ನೂ ಕೆಲವು ಕಾಲವಿದೆ." ತನ್ನ ಅಣ್ಣ ತನ್ನನ್ನು ದುರ್ಲಕ್ಷಿಸುತ್ತಿದ್ದಾನೆಂಬುದರ ಅರಿವಾಗುವದು ಕೂಡ ಅಚಲೆಗೆ ಸಹನವಾಗುತ್ತಿರಲಿಲ್ಲ. ಅವಳು,

"ಶಾಮೂ, ನಾನಿನ್ನು ಹೋಗಲೇ ಹಾಗಾದರೆ? 'ಬೂ' ಹೋಗತೀನಿ, ಅಣ್ಣಂ?" ಎಂದಳು

"ಬೂ—" ಶಾಮು ಒಂಟಿ ಕಾಲಮೇಲೆ ಸಿದ್ಧನಾಗಿದ್ದ. ಅವನು ಕೂಡಲೆ ಲುಟು ಲುಟು ಓಡುತ್ತ ಗೂಟದ ಹತ್ತಿರ ಹೋಗಿ ಅದರ ಕೆಳಗೆ ಮುಂಗಾಲುಗಳ ಮೇಲೆ ನಿಂತು, ಮೇಲೆ ಕೈ ಮಾಡಿ 'ಪ್ರೊಪ್ಪೀ' ಎನ್ನುತ್ತ ಮೇಲೆ ಟೊಪ್ಪಿಗೆಯ ಕಡೆಗೊಮ್ಮೆ, ಅಚಲೆಯ ಕಡೆಗೊಮ್ಮೆ ಬೇಡಿಕೆಯ ನೋಟದಿಂದ ನೋಡಲಾರಂಭಿಸಿದ.

"ತಲೆಯ ಮೇಲೆ ಟೊಪ್ಪಿಗೆ—ಕೆಳಗಿನದು ಬರೇ ಕುಂಬಳಕಾಯಿ" ಅಚಲೆ ನಗುತ್ತ ನುಡಿದಳು. ಆದರೆ ಶಾಮುನಿಗೋ—ತಡೆಯಲಾರದ ಅವಸರ.

ಅವಳ ಹತ್ತಿರ ಓಡುತ್ತ ಹೋಗಿ ಅವನೆಂದ,

"ಅಬಚೀ, ಬೂ"

"ಇನ್ನ ನಾಳೆ ಹೋಗೋಣ, ಅಣ್ಣಂ, ಅಪ್ಪಾ."

ಛೆ, ಅವನಿಗೇತರ ನಂಬಿಕೆ. ಅವನು ಅವಳನ್ನು ಬಿಡಲೇ ಒಲ್ಲ. ಅಬಚಿ, ಮಾಮಾ, ತಂದೆ, ತಾಯಿ ಮನೆಯೊಳಗಿಂದ ಯಾರಾದರೂ 'ಬೂ' ಹೊರಟರೆಂದರೆ ತೀರಿತು, ಅವರ ಸಂಗಡ ಸಲಿಗೆಯ ಮಾತನಾಡಿ ಅಥವಾ ಕೆಲವೇಳೆ ಹಟ ಹಿಡಿದು, ಅತ್ತು ಕರೆದು, ತನ್ನ ಹಕ್ಕನ್ನು ಪ್ರಸ್ಥಾಪಿಸುವದು —ಇದವನ ದಿನದ ಮಾತಾಗಿತ್ತು. ಬಾಬಾ ಅಥವಾ ಮಾಮಾ ಇವರಲ್ಲಿ ಯಾರಾದರೂ ಟೊಪ್ಪಿಗೆ ಹಾಕಿಕೊಂಡ ಕೂಡಲೆ, ಅಥವಾ ಅವನ ತಾಯಿ,

ಅಬಚಿಯವರಾರಾದರೂ ಸೀರೆಯ ಸೆರಗನ್ನು ಸರಿಪಡಿಸಿಕೊಂಡು ನಿಂತ ಕೂಡಲೆ ‘ ಬೂ ’ ಎಂಬುದಾಗಿ ಅವನಿಗೆ ನಿಶ್ಚಿತವೆನ್ನಿಸುತ್ತಿತ್ತು. ಆದ್ದರಿಂದ ಶಾಮುನ ಕಣ್ಣು ತಪ್ಪಿಸಿ ಹೋಗುವದೆಂದರೆ, ಹೋಗೋಣವೆಂದುಕೊಂಡ ಮೇಲೆ ನಿಜವಾಗಿಯೂ ಕಾಲು ಗಂಟೆಯಾದರೂ ಹತ್ತುತ್ತಿತ್ತು. ಅದರಲ್ಲಿಯೂ ಶಾಮುನಿಗೆ ಅಬಚಿಯ ಎಳೆತ ವಿಶೇಷ.

“ ಕುಂದಾ ಯಾರವಳು ? ”—“ ತಾಯಿಯವಳು ” ಮತ್ತೆ “ ಶಾಮು ನ್ಯಾರವನು ? ”—“ ಅಬಚಿಯವ ” ಹೀಗೆ ಅನೇಕ ಸಲ ಅವನು ತನ್ನ ಮತ್ತು ಅಬಚಿಯ ಅನ್ಯೋನ್ಯತೆಗೆ ಅವಳ ಹತ್ತಿರ ಬಾಯಿಮಾತಿನ ಸಹಿ ಹಾಕುತ್ತಿದ್ದ. ಕುಂದೆಯ ಜನ್ಮವಾದಂದಿನಿಂದ ಮಾಣಿಕಳಿಗೆ ಅವಳ ಪರಿಚರ್ಯೆಯಲ್ಲಿಯೇ ಬಹಳ ವೇಳೆ ಕಳೆಯಬೇಕಾಗುತ್ತಿತ್ತು. ಇತ್ತ ಅಚಲೆಗೂ ಶಾಮುನನ್ನು ಆಡಿಸುತ್ತ ಕೂಡ್ರುವದಕ್ಕೆ ಬೇಕಾದಷ್ಟು ವೇಳೆ ಇತ್ತು. ಅವನನ್ನು ಅಲಿಂದಿಲ್ಲಿಗೆ ಸುತ್ತಿಸುವದು, ತೂರಾಡುವದು, ಚಿಕ್ಕ ಹುಡುಗೆಯಾಗಿ ಅವನೊಡನೆ ಆಟವಾಡುವದು—ಹೀಗಾಗಿ ಶಾಮುನ ಕಿಡಿಗೇಡಿತನಕ್ಕೆ ಅಚಲೆಯ ಸಹವಾಸದಲ್ಲಿ ಬೇಕಾದಷ್ಟು ಅವಕಾಶವಿರುತ್ತಿತ್ತು. ಈ ಎರಡೂ ಹುಡುಗರನ್ನು ಸಾಕುವದರಲ್ಲಿ ಸಾಕುಬೇಕಾಗಿ ಹೋಗಿದ್ದ ಮಾಣಿಕಳಿಗೂ ಆದರಿಂದ ಒಂದು ತರಹದ ಅನುಕೂಲವೇ ಇದ್ದಿತು. ಶಾಮು ಒಂದೊಂದು ದಿನ ಇಡೀ ದಿವಸವೆಲ್ಲ ಅಬಚಿಯ ಹತ್ತಿರವೇ ಇದ್ದುಬಿಡುತ್ತಿದ್ದ. ಆದರೆ ರಾತ್ರಿಯಲ್ಲಿ ಮಾತ್ರ ತಾಯಿಯ ಹತ್ತಿರ ಅವಳ ಮುಖದೆದುರು ಅಥವಾ ಅವಳ ಬೆನ್ನ ಹಿಂದೆ ಮಲಗಿಕೊಂಡು ಕುಂದೆಯನ್ನು ಅತ್ತ ಕಡೆಗೆ ಸರಿಸಿ, ತಾಯಿ ತನ್ನ ಕಡೆಗೇ ಮುಖ ಮಾಡಿಕೊಂಡು ಮಲಗಬೇಕೆಂದು ಮಾಣಿಕಳ ಹತ್ತಿರ ಹಟ ಹಿಡಿಯುತ್ತಿದ್ದ. ತನ್ನ ತಾಯಿಯ ಮೈಮೇಲೆ ತನ್ನ ಪುಟ್ಟ ಕೈಯನ್ನಿರಿಸಿ “ ಇನ್ನು ನನಗೊಬ್ಬನಿಗೇ ಅವ್ವ. ಕುಂದಾನಿಗಲ್ಲ ” ಎನ್ನುವ ಸಮಾಧಾನಾದ ಸುಖಸ್ವಪ್ನದಲ್ಲಿ ತೇಲುತ್ತ ಆ ಮಗು ನಿದ್ರೆಹೋಗುತ್ತಿತ್ತು.

ಮಾಣಿಕಳೆಂದಳು, “ ಹೋಗು, ಬೇಕಾದರೆ ಕರೆದುಕೊಂಡು ಹೋಗಿ ಬಿಡು, ಅವನನ್ನು. ಸಂಜೆಗೆ ತಿರುಗಿ ಕರೆತರಲು ಅವರೇ ಬರಬಹುದು.”

ಅಚಲೆಗೆ ನಡುವೆಯೇ ಒಮ್ಮೆಂದೊಮ್ಮೆ ಏನೋ ನೆನಪಾಯಿತು. “ ಅಲ್ಲ, ಮಾಣಿಕ. ಆ ಗುಲಾಬಿ ಹೂವನ್ನೇ ಮರೆತುಬಿಟ್ಟದ್ದೆ ನೋಡು.

ಹೌದು, ನೀನೇನಾದರೂ ಹೋಗಿದ್ದೆಯೇನು ತೋಟದಲ್ಲಿ? ಮೊನ್ನೆಯೇ ನಾನು ಅಲ್ಲಿ ಮೂರು ಮೊಗ್ಗೆಗಳನ್ನು ನೋಡಿದ್ದೆ. ಈಗ ಅರಳಿರಬಹುದು, ಅಲ್ಲವೆ?" ಅಚಲೆ ಆತುರದಿಂದ ತೋಟದ ಕಡೆಗೆ ನಡೆದಳು.

"ಅಯ್ಯ, ಎಲ್ಲಿಯ ಗುಲಾಬಿ ಹೂ, ಏನು ಸುದ್ದಿ? ಈಗೇನೂ ಅಂತಹ ಹುರುಪೇ ಉಳಿದಿಲ್ಲ. ಈ ಹುಡುಗರನ್ನು ಹಿಡಿಯುವದರಲ್ಲಿ ಮುಖ ಮೇಲೆತ್ತಲಾಗುವದಿಲ್ಲ."

"ಹೌದೇನೋ, ಶಾಮೂ? ಅವ್ವನ ಜೀವಾ ತಿಂತೀಯಂತೆ, ಹೌದೇ?" ಶಾಮು ಸೊಟ್ಟ ಮೋರೆ ಮಾಡಿ ಅಳಲಾರಂಭಿಸಿದ. "ಅಬಚೀ, ನಾ ಬೂ."

"ಹೋಗೋ, ಮುಂಡೇಗಂಡಾ, ನಿಮ್ಮ ಅಬಚಿಗೆ ಮತ್ತೊಂದೇನೂ ಕೆಲಸವೇ ಇಲ್ಲ ಕಾಣಿಸುತ್ತದೆ" ಹೀಗೆಂದು ಹುಸಿ ಮುನಿಸನ್ನು ತೋರಿಸುತ್ತ ಅವನನ್ನೆತ್ತಿ ಬಗಲಲ್ಲಿರಿಸಿ ಮುದ್ದಿಕ್ಕುತ್ತ ಅಚಲೆ ತೋಟದ ಕಡೆಗೆ ನಡೆದಳು.

"ಇನ್ನ, ನಾವು ತೋಟದ ಕಡೆಗೆ ಹೋಗೋಣು" ಅಚಲೆ ಸಂಗಡ ಕರೆದುಕೊಂಡು ನಡೆದಿದ್ದರಿಂದ ಉಲ್ಲಸಿತನಾಗಿದ್ದ ಶಾಮು ಅವಳನ್ನೇ ಅನುಕರಿಸಿ, ತನ್ನ ಎಳೆಯ ಸ್ವರದಲ್ಲಿ ಮರುನುಡಿದ—"ಹೋಗುನ್ನೂ" ತನ್ನಂತೆಯೇ ಅವನು ಕೊನೆಗೆ ಸ್ವರವೆಳೆಯುತ್ತಿದ್ದುದನ್ನು ನೋಡಿ ಅಚಲೆಗೆ ನಗೆ ಬಂತು. ಅವಳೆಂದಳು, "ಮತ್ತ ಗುಲಾಬಿ ಹೂ ಹರಿಯೋಣು."

"ಹಯ್ಯೋಣು."

"ಆಮೇಲೆ ಅವನ್ನ ನಮ್ಮ ಶಾಮುನ 'ಪ್ರೊಪ್ಪಿ'ಯೊಳಗ ಹಾಕೋಣ"

"ಹಾಕುನ್ನೂ" ಗಿಳಿ ಮರಿಯಂತೆ ಶಾಮು ತೊದಲುತ್ತ ಮರುನುಡಿಯುತ್ತಲಿದ್ದ.

"ಇಲ್ನೋಡು, ಎಷ್ಟು ಚಂದದ" ಗುಲಾಬಿ ಹೂಗಳ ಕಡೆಗೆ ಪ್ರಸನ್ನತೆಯಿಂದ ನೋಡುತ್ತ ಅಚಲೆಯೆಂದಳು. ಹೂಗಳ ಕಣ್ಣು ಕೋರೈಸುವ ಬಣ್ಣವನ್ನು ಕಂಡು ಶಾಮು ಕೆಳಗಿಳಿಯಲು ಧಡಪಡಿಸಲಾರಂಭಿಸಿದ.

"ನನ್ನ."

"ನನ್ನ, ಏನು 'ನನ್ನ'? ಅದಕ್ಕೆ ಕೈಹಚ್ಚುವ ಹಾಗಿಲ್ಲ, ಹಂ. ಅದಕ್ಕ ಮುಳ್ಳವನಪ್ಪಾ, ಖೋಡಿ, ಚುಚ್ಚತಾವ" ಮುಳ್ಳು ಚುಚ್ಚಿದವರಂತೆ

ನಟಿಸಿ ಗುಲಾಬಿ ಹೂಗಳ ಹತ್ತಿರ ಕೈಯನ್ನು ಒಯ್ದು, ಸರ್‍ರನೆ ಹಿಂತೆಗೆದು ಕೊಳ್ಳುತ್ತ ' ಸ್, ಹಾ ' ಎಂದಳು.

" ಉಹೂಂ, ನನ್ನ."

" ಉಹೂಂ, ಉಹೂಂ, ಉಹೂಂ. ಅದನ್ನೋಡಿದಿಯೇನು, ಗಿಳಿ? " ಶಾಮನಿಗೆ ಹೂಗಳ ಮರವೆಯಾಗಬೇಕೆಂದು ಬೇರೆ ಕಡೆಗೆ ಅವನನ್ನು ತಿರುಗಿಸಿ ಅಚಲೆಯೆಂದಳು. ಅವಳು ಹೂಗಳ ಕಡೆಗೆ ಬೆನ್ನು ಮಾಡಿ ನಿಂತಿದ್ದಳಾದರೂ, ಶಾಮು ಅವಳ ಮಗ್ಗುಲಲ್ಲಿ ಕುಳಿತಲ್ಲಿಂದಲೆ ಮಣಿದು ಹೂಗಳ ಕಡೆಗೇ ಹೊರಳಿ ನೋಡುತ್ತಲಿದ್ದ.

" ನನ್ನ, ಊ, ಊ."

" ಹೇಗಿದ್ದೀಯಂದೀ ನೀನು " ಅಚಲೆ ಅವನಿಗೊಂದು ಗೊರಟಿಗೆಯ ಹೂವನ್ನು ಕಿತ್ತುಕೊಟ್ಟಳು. ಕೂಡಲೆ ಅವನು ಅದನ್ನು ಹರಿದು ಪಕಳೆ ಪಕಳೆಯನ್ನಾಗಿ ಮಾಡಿ ಕೃತಕೃತ್ಯನಾದ. ಮತ್ತೆ ತನ್ನ ಪುಟ್ಟ ಕೈಯನ್ನು ಚಾಚಿ ಗುಲಾಬೀ ಹೂವನ್ನು ತೋರಿಸುತ್ತ " ಊ " ಎಂದು ಪ್ರಾರಂಭ ಮಾಡಿದ.

" ಶಾಮೂ, ಆ ಹೂವನ್ನು ಹರಿಹೋಗಿವೆಯಹುದಲ್ಲೋ? ಇನ್ನೇನು ಹೂವು ಗೀವು ಇಲ್ಲ, ನಡೆ "

ಶಾಮುನ ಆತ್ಮಪ್ರತಿಷ್ಠೆಗೆ ಅದೆಂತಹ ವಜ್ರಘಾತ! ಈ ಭೂಮಿಯ ಗಾಳಿಯನ್ನು ಉಸಿರಾಡಿಸಹತ್ತಿ ಎರಡೇ ವರ್ಷಗಳಾಗಿದ್ದರೂ ಶಾಮು ತನ್ನ ಮನೆಯ ಅಧಿರಾಜನಾಗಿದ್ದ. ತಂದೆತಾಯಿಯರಷ್ಟೇ ಅಲ್ಲದೆ, ಮನೆಗೆ ಬಂದು ಹೋಗುವವರೂ ಅವನ ಇಚ್ಛಾಶಕ್ತಿಯ ಮಹಾತ್ಮ್ಯವನ್ನು ಬಲ್ಲವರಾಗಿದ್ದರು. ತನಗೆ ಬೇಕೆನಿಸಿದ ಪ್ರತಿಯೊಂದು ವಾತನ್ನು ತನ್ನಿಷ್ಟದಂತೆ ಮಾಡಹಚ್ಚುವ ಅವನ ರೀತಿ ದುರ್ದಮ್ಯವಾದುದಾಗಿತ್ತು. ವ್ಯರ್ಥವಾಗಿ ಶಬ್ದಗಳನ್ನು ವ್ಯಯಿಸದೆ ಎರಡೆರಡೇ ಅಕ್ಷರಗಳ ಶಬ್ದಗಳಲ್ಲಿ ಏನೆಲ್ಲ ಅರ್ಥವನ್ನು ತುಂಬಿ ತುಂಬಿ ತನ್ನ ತೊದಲು ಮಾತಿನಲ್ಲಿ ಪ್ರಲಪಿಸಹತ್ತಿದನೆಂದರೆ ಅವನ ಮಧುರ ವಾಣಿಗೆ ಎಂತಹ ಹಿರಿಯರೂ ಮರುಳಾಗಿ ಚಿಕ್ಕವರಂತಾಗುವರೆಂಬ ಸತ್ಯ ಅವನ ಅನುಭವದ ಮಾತಾಗಿತ್ತು. ಅವನ ನಗೆ, ಅವನ ಆಟ, ಅವನ ಒಂದೇ ಶಬ್ದದ ವಾಕ್ಯಗಳ ಅಬೋಧ ಭಾಷೆ—ಇವೆಲ್ಲ ಮನೆ ಮಂದಿಯ

ಮನಗಳನ್ನೆಲ್ಲ ಮೋಹಜಾಲದಲ್ಲಿ ಸೆರೆ ಹಿಡಿಯುತ್ತಿದ್ದವು. ಇಂಥದೊಂದು ವಸ್ತು ಬೇಕಾಗಿರುವಾಗ ಅವನಿಗದು ದೊರೆಯಲಾರದೆಂದರೇನು? ಅವನಿಗೆ ತನ್ನ ವ್ಯಕ್ತಿತ್ವದ ಮೇಲ್ಮೆಯನ್ನು ಹೇಗೆ ಕಾಯ್ದುಕೊಳ್ಳಬೇಕೆಂಬುದು ಸರಿಯಾಗಿ ಗೊತ್ತಿತ್ತು. ಆದ್ದರಿಂದ ಅಬಚಿ ತನ್ನ ತಪ್ಪು ತೆಗೆಯುವದನ್ನು ನೋಡಿ ಅವನಿಗೆ ಕೋಪವುಂಟಾಯಿತು.

"ಊಃ" ಎಂದು ಪಟ್ಟುಹಿಡಿದು ಅವನು ತನ್ನ ಅನುಪಮ ಅಸ್ತ್ರವನ್ನುಪಯೋಗಿಸಿಯೇ ಬಿಟ್ಟ. ಗಲ್ಲದ ಮೇಲೆ ಕಂಬನಿಗಳುರುಳಿದವು. ಅವುಗಳ ಪ್ರಭಾವವೆಂತಹದೆಂಬುದು ಅವನಿಗೆ ಗೊತ್ತಿತ್ತು.

"ನಾಕಾಯಿತಪ್ಪ ಶಾಮೂ, ನಿನ್ನ ದೆಸೆಯಿಂದ" ಎನ್ನುತ್ತ ಕಡುಗೆಂಪು ಬಣ್ಣದ ದೊಡ್ಡ ದಾಸವಾಳದ ಹೂವೊಂದನ್ನು ಕೊಯ್ದು ಅವನ ಕೈಗೆ ಕೊಟ್ಟಳು. ಆ ಚೆಲುಗಲ್ಲಗಳ ಮೇಲೆ ಅರ್ಧ ದಾರಿಯ ವರೆಗೆ ಸಾಗಿ ಬಂದಿದ್ದ ಅಶ್ರುಗಳು ಅನುಯಾಯಿಗಳಿಲ್ಲದೆ ನಿಂತಲ್ಲಿಯೇ ನಿಂತವು. ಶಾಮನ ಮುಖ ಮತ್ತು ಕಣ್ಣುಗಳಲ್ಲಿದ್ದ ಅಸಮಾಧಾನದ ಛಾಯೆ ಮಾಯವಾಗಿ ಕಿರುನಗೆಯ ತಿಳಿಬೆಳಕು ಮಿನುಗಿತು. "ಅದರ ಪಕಳಿ ಕಿತ್ತಿ ಒಗೆಯುವಹಾಗಿಲ್ಲ" ಅವಳು ಅವನ ಕಣ್ಣು ಒರೆಸುತ್ತ ಹೇಳಿದಳು.

"ಹ್ಞೂಂ."

"ಅವ್ವನಿಗೆ ಹೂ ತೋರಿಸೋಣ, ಶಾಮೂ."

"ಅವ್ವಾ, ಊ." ಮನದುಂಬಿದ ಸಂತಸದಿಂದ ಹೂವಿನ ಕಡೆಗೆ ನೋಡುತ್ತ, ಮುದ್ದು ಮುದ್ದು ಮಾತುಗಳನ್ನಾಡುತ್ತ ತನ್ನ ತಾಯಿಯ ಹೃದಯವನ್ನು ಸೆರೆ ಹಿಡಿಯುತ್ತಲಿದ್ದ ಶಾಮನಲ್ಲಿ ಆ ಹೂವಿನ ಒಂದೊಂದೇ ಪಕಳೆಗಳನ್ನು ಮನಬಂದಂತೆ ಕಿತ್ತು ತೆಗೆದು ಅವರ ಮೇಲಿನ ತನ್ನ ಸಂಪೂರ್ಣ ಸ್ವಾಮಿತ್ವವನ್ನು ಸಿದ್ಧಗೊಳಿಸುವ ಇಚ್ಛೆಯಾಯಿತು. ಸುಂದರ ವಸ್ತುವನ್ನು ನಿಂತು ನಿರೀಕ್ಷಿಸಿ ಸುಖಪಡುವದಕ್ಕಿಂತ ಅದನ್ನು ತನ್ನದಾಗಿಯೇ ಮಾಡಿಕೊಳ್ಳುವದರಲ್ಲಿ ಎಂತಹ ಆನಂದವಿದೆ!

'ಈ ಅನುಪಮ ಸೌಂದರ್ಯರಾಶಿಯನ್ನು ನನ್ನದನ್ನಾಗಿಯೇ ಮಾಡಿಕೊಂಡು ಮನಸೋಕ್ತವಾಗಿ ನಾನದನ್ನು ಉಪಭೋಗಿಸಬೇಕು' ಎನ್ನುವ ಆತುರತೆ ಅದಕ್ಕಿಂತ ಸಾವಿರ ಪಾಲು ಬಲವತ್ತರವಾದದು. ಅವನ ಅಬಚಿ

ಅತ್ತ ತೋಟದಲ್ಲಿಯ ಕಸರು ಕಳೆಯನ್ನು ಕಿತ್ತೊಗೆಯುತ್ತಿರುವಾಗ ಆ ಸುಂದರವಾದ ಹೂವನ್ನು ಚೂರು ಚೂರು ಮಾಡಿ ನೋಡಬೇಕೆಂಬ ಇಚ್ಛೆ ಶಾಮನ ಮನೋಲೋಕವನ್ನೆಲ್ಲ ತುಂಬಿ ಬಿಟ್ಟಿತ್ತು.

" ಶಾಮಾ, ಹೂ ಹರಿಯಕೂಡದು."

"ಇಯ್ಯಾ" ಎಂದ. ಹೂವಿನ ಒಂದೊಂದೇ ಪಕಳೆಗಳನ್ನು ಆಗಲೆ ಕಿತ್ತುಬಿಟ್ಟಿದ್ದ, ಶಾಮ.

" ತಾಯೀ!" ಅಚಲಾ ಒಮ್ಮೆಲೆ ಹಿಂದಕ್ಕೆ ನೋಡಿದಳು.

"ಅಮ್ಮಮ್ಮಾ, ಸುಮ್ಮನೆ ಎಷ್ಟು ಹೆದರಿದೆ! ಚ್, ಚ್, ಶಾಮಾ, ಅಂತೂ ಹೂವನ್ನೆಲ್ಲಾ ಕಿತ್ತಾಡಿಬಿಟ್ಟೆಯಹುದಲ್ಲೋ! ಛೀ, ಛೀ. ನಿಮ್ಮ ಮಗನಂತಹ ಕೆಟ್ಟ ಹುಡುಗನೆಂದರೆ—" ಭಾವೂಸಾಹೇಬರನ್ನನುಲಕ್ಷಿಸಿ ಅಚಲೆ ನುಡಿದಳು.

"ಹೂಂ. ಸ್ವಲ್ಪ ಆಬಚಿಯ ಪಾಠ ಕಲಿತಿದ್ದಾನೆ."

"ಹೌದೇನೊ, ಟೊಣಪಾ?" ಶಾಮನೇನೂ ಉತ್ತರ ಕೊಡದೆ 'ಹೂಂ—' ಎನ್ನುವಂತೆ ಗೋಣು ಅಲ್ಲಾಡಿಸಿದ. ಎರಡು ಕಾಲುಗಳನ್ನೂ ಚಾಚಿ ಕುಳಿತು ಹೂವಿನ ಪಕಳೆಗಳನ್ನು ವಿಭಜಿಸಿ ನೋಡುವ ಮಹೋದ್ಯಮ ದಲ್ಲಿ ಅವನು ಮಗ್ನನಾಗಿದ್ದ. ಉತ್ತರವನ್ನು ಕೊಡುವ ಮಟ್ಟಿಗೆ ಅವನಿ ಗೆಲ್ಲಿ ವ್ಯವಧಾನವಿರಬೇಕು?

"ಭಾವೂಸಾಹೇಬ, ಹಾಗಾದರೆ ನೀವಿನ್ನು ನಿಮ್ಮ ಮಗನನ್ನು ಕರೆದುಕೊಂಡು ನಡೆಯಿರಿ. ನಾನಿನ್ನು ಹೋಗಬೇಕು."

"ಅವನೀಗ ಬೇಡ. ನನಗೆ ಬೇರೆ ಕಡೆ ಹೋಗಬೇಕಾಗಿದೆ."

"ಇದೇನು, ಇನ್ನೂವರೆಗೆ ಮಗನನ್ನು ಎತ್ತಿಕೊಳ್ಳುವದಕ್ಕೆ ನಾಚು ತ್ತೀರೋ, ಹೇಗೆ?"

"ಛೆ, ನಾಚಿಕೊಳ್ಳುವದೇನಿದೆ, ಅದರಲ್ಲಿ?"

"ನಿಜವಾಗಿಯೂ ಮಾಣಿಕ ನನಗೊಮ್ಮೆ ಹೇಳಿದ್ದಳು— ಶಾಮನಿನ್ನೂ ಎರಡು ತಿಂಗಳಿನ ಕೂಸು ಆಗ. ಅವಳು ತವರುಮನೆಯಲ್ಲಿಯೆ ಇದ್ದಳು. ಆಗ ಸುತ್ತುಮುತ್ತು ಯಾರೂ ಇಲ್ಲದ್ದನ್ನು ನೋಡಿ ನೀವೊಮ್ಮೆ ಕೂಸನ್ನು ಎತ್ತಿಕೊಂಡಿರಂತೆ. ಎಲ್ಲಿಂದಲೋ ಅದೇ ಕ್ಷಣಕ್ಕೆ ಪ್ರತ್ಯಕ್ಷಳಾದ ಕಕ್ಕಿ

'ಅಯ್ಯ, ಮಗನ್ನ ಕರಕೊಂಡಾರ ಕಾಣಿಸ್ತದ' ಎಂದಳಂತೆ. ಆಗ ಎನೋ ದಿಕ್ಕೆಟ್ಟವರಂತಾಗಿ ನೀವು ಕೂಸನ್ನು ಕೆಳಗಿಳಿಸಿದಿರಂತೆ!" ಈ ಹಿಂದಿನ ಪ್ರಸಂಗದ ನೆನಪು ಮಾಡಿದ ಕೂಡಲೆ ಭಾವೂಸಾಹೇಬರು ಬಿದ್ದು ಬಿದ್ದು ನಕ್ಕರು.

"ಹೌದು. ಅವೇನು ತೀರ ಚಿಕ್ಕ ಹಸುಳೆಗಳು. ಅವಕ್ಕೇನಾದರೂ ಆಕಾರ ಕೂಡಾ ಇರುವದಿಲ್ಲ. ಸರಿಯಾಗಿ ಗೋಣು ಕೂಡ ನಿಲ್ಲುತ್ತಿರುವದಿಲ್ಲ! ಕೇವಲ ಮಾಂಸದ ಮುದ್ದೆಗಳು! ಅವನ್ನು ಎತ್ತಿಕೊಳ್ಳುವದಾದರೂ ಹೇಗೆ?"

"ಓಹೋ. ಅದಕ್ಕಾಗಿ ನಿಮಗೆ ನಾಚಿಕೆಯಾಯಿತು?"

"ಏ, ಏ, ಮುಳ್ಳು! ಮುಳ್ಳು ಚುಚ್ಯಾವು" ಭಾವೂಸಾಹೇಬರು ಶಾಮುಸಿಗೆ ಒದರಿ ನುಡಿದರು.

"ಥೂ, ಇವನಿಗೇನಾದರೂ ಮಾಡಬೇಕು, ನನ್ನ ತಾಯೀ? ಮತ್ತೆ ಹೋದೆಯೇನು ಆ ಕಡೆಗೆ? ಒಂದು ಕ್ಷಣ ನಿಂತಲ್ಲಿ ನಿಂತಿರುವದಿಲ್ಲ." ಶಾಮು ಕಳ್ಳನಂತೆ ಎದ್ದು ನಿಂತ. ಅವನನ್ನು ಎತ್ತಿಕೊಳ್ಳುತ್ತ ಅವಳೆಂದಳು, "ಭಾವೂಸಾಹೇಬ, ಮೊನ್ನೆ ನೀವು ತಂದು ಹಚ್ಚಿದ ಆ ಗುಲಾಬಿಯ ಕಲವು ಒಳ್ಳೆಯ ಜಾತಿಯದಿದೆ, ನೋಡಿರಿ. ಎಂಥ ಸುಂದರವದೆ ಅದರ ಬಣ್ಣ? ಹೂ ಕೂಡ ಹೇಗೆ ದೊಡ್ಡದಾಗಿ ಅರಳಿವೆಯನ್ನುವಿರಿ!"

ಶಾಮು ಆಸೆ ತುಂಬಿದ ಕಣ್ಣುಗಳಿಂದ ಹೂಗಳ ಕಡೆಗೇ ನೋಡುತ್ತಿದ್ದ.

"ಇನ್ನೊಂದು ಹೀಗೆ ಕಪಾಳ ಮೇಲೆ ತೆಗೆದು ಕೊಡತೇನೆ ನೋಡು, ಶಾಮೂ. ಹೂಂ, ಹೇಳು ಹಾಗಾದರೆ, ಅಪ್ಪನದ್ಯಾವದು ಹೂ?" ಶಾಮು ಬೊಟ್ಟನಿಂದ ಹೂಗಳನ್ನು ತೋರಿಸಲಾರಂಭಿಸಿದ.

"ಬಾಬಾನದ್ಯಾವದು? ಭಾವೂನದು? ಮತ್ತೆ ನನ್ನದು?" ಶಾಮು ಹಿಂದೆ ತಿರುಗಿ ಕಣಗಿಲ ಗಿಡದ ಮೇಲಿದ್ದ ಒಣಗಿ, ಹುಳು ತಿಂದು ಬತ್ತಿ ಹೋಗಿದ್ದ ಹೂವೊಂದನ್ನು ತೋರಿಸಿದನು.

"ಏ ಟೊಣ್ಣ್ಯಾ!"

"ಅಲ್ಲ, ಅವ ನಿಜವನ್ನೇ ನುಡಿದ!" ಭಾವೂಸಾಹೇಬರೆಂದರು. ಅಚಲೆಗೆ ಒಮ್ಮೆಲೆ ಮನಸ್ಸಿನಲ್ಲಿ ಚುಚ್ಚಿದಂತಾಯಿತು. 'ಹೌದು, ಅವನು ಹೇಳುವದರಲ್ಲಿ ಸಂಪೂರ್ಣ ಸತ್ಯವಡಗಿದೆ. ವಾಸನೆಯಿಲ್ಲ, ಹೊಲಸಿಲ್ಲ,

ರೂಪ-ರಂಗಗಳೊಂದೂ ಇಲ್ಲ; ಹುಳು ತಿಂದು ಒಣಗಿ ಬತ್ತಿಹೋದ ಆ ಹೂ ನನ್ನ ಪ್ರತೀಕವಲ್ಲದೆ ಮತ್ತಿನ್ನೇನು?' ಅವಳು ತನ್ನೊಳಗೇ ನೆನೆದಳು.

"ತಾಯೀ, ಇದನ್ನು ನೋಡು" ವರ್ತಮಾನಪತ್ರದ ಒಂದು ಕಾಲಮಿನ ಮೇಲೆ ಬೆರಳಿಟ್ಟು ತೋರಿಸಿ ಭಾವೂಸಾಹೇಬರೆಂದರು. ಅವಳು ಶಾಮುನನ್ನು ಭಾವೂಸಾಹೇಬರ ಕೈಗೆ ಕೊಡುತ್ತ ಓದಲಾರಂಭಿಸಿದಳು. ಓದುತ್ತಿರುವ ಅವಳ ದೃಷ್ಟಿಯಿಂದ ಒಳಗೆಳೆದುಕೊಳ್ಳಲ್ಪಡುತ್ತಿರುವ ಒಂದೊಂದು ಶಬ್ದವೂ ಅವಳ ಹೃದಯದಲ್ಲಿ ಕಲಮಲವನ್ನೆಬ್ಬಿಸಿಬಿಟ್ಟಿತು. "ಶಾಮಾ, ಇನ್ನೇನೂ ಅಂಜಿಕೆ ಬೇಡವಹುದಲ್ಲೊ?" ಮನದುಮ್ಮಳವನ್ನು ಒಳಗಿಂದೊಳಗೇ ಹತ್ತಿಕ್ಕಿ ಅವಳು ಕೇಳಿದಳು. ಅವಳ ಈ ಹೊರಗೆ ಕಾಣುವ ಸಮಾಧಾನ ವೃತ್ತಿಯನ್ನು ನೋಡಿ ಭಾವೂಸಾಹೇಬರಿಗೆ ಆಶ್ಚರ್ಯವೆನಿಸದೆ ಇರಲಿಲ್ಲ. ಸಾಂತ್ವನಪರವಾದ ಒಂದು ಶಬ್ದವನ್ನೂ ಕೇಳುವ ಇಚ್ಛೆ ಅಚಲೆಗೆ ಇರಲಿಲ್ಲ. ಕಾಯ್ದ ಎಣ್ಣೆ, ಒಂದೇ ಒಂದು ಜಲಬಿಂದುವಿನ ಸ್ಪರ್ಶದಿಂದ ಕುದಿದೇಳುವದುಂಟು!

## ೨

ಅಚಲೆಯ ಸ್ವಭಾವದ ವಿಷಯವಾಗಿ ಮಾಣಿಕ ಮತ್ತು ಭಾವೂಸಾಹೇಬ ಇವರಿಬ್ಬರೂ—ಪತಿ-ಪತ್ನಿಯರಲ್ಲಿ ಮಾತುಕತೆ ಬಂದಾಗಲೆಲ್ಲ, 'ಅಚಲೆ ಏನೆಂದರೂ ಬಹು ಗಟ್ಟಿ ಮನಸ್ಸಿನವಳು' ಎನ್ನುವ ವಿಷಯವಾಗಿ ಅವರಿಬ್ಬರಲ್ಲಿಯೂ ಒಂದು ಮತವಾಗುವದುಂಟು. ಆದರೆ ಅವಳ ಆ ಸ್ವಭಾವದ ಮೂಲಕವಾಗಿ ಭಾವೂಸಾಹೇಬರ ಮನಸ್ಸಿನಲ್ಲಿ ಅವಳ ವಿಷಯವಾಗಿ ಒಂದು ತರದ ಕುತೂಹಲ ನಿರ್ಮಾಣವಾಗಿತ್ತು. ಅಚಲೆಯ ಮನದ ನೆಳಲು-ಬೆಳಕುಗಳ ಎಲ್ಲ ಸೂಕ್ಷ್ಮ ರೇಷೆಗಳನ್ನರಿಯುವದು ಅಂತಹ ಹಗುರವಾದ ಮಾತಾಗಿರಲಿಲ್ಲ. ಆದರೆ ಅವನ್ನೆಲ್ಲ ಬೆದಕಿ ನೋಡಬೇಕೆಂಬ ಉತ್ಕಂಠೆ ಅವರಲ್ಲಿ ಬೆಳೆಯುತ್ತಲಿತ್ತು. ಅಚಲೆಯ ಮನದ ರೀತಿ-ನೀತಿಗಳೆಂತಹವು—ಮಾಣಿಕಳಿಗಿಂತ ಅವರಿಗೆ ಸರಿಯಾಗಿ ಅರ್ಥವಾಗುತ್ತಿತ್ತು.

ಅಚಲೆ ಅಂದು ಮನೆಗೆ ಹೋದನಂತರ ಹೀಗೇ ಮಾತಿಗೆ ಮಾತು ನಡೆಯಿತು; ಏನೋ ಒಮ್ಮೆಲೆ ನೆನಪಾಗಿ ಮಾಣಿಕಳೆಂದಳು, "ಹೌದು, ನಮ್ಮ

ತಾಯಿಯ ಅಂದರೆ ಅಂಥಿಂಥವಳಲ್ಲ. ನನಗಿನ್ನೂ ಆಗಿನದೇ ನೆನಪಾಗತಿದೆ ಯಾವಾಗಲೂ. ಅಚಲೆಯ ಲಗ್ನವಾದ ಆರು ತಿಂಗಳಿನಲ್ಲಿಯೇ ಅವಳು ತವರುಮನೆಗೆ ತಿರುಗಿ ಬಂದಳು. ಅನಂತರ ತಿಂಗಳೆರಡು ತಿಂಗಳೂ ಕಳೆದು ಹೋದವು. ಒಂದು ದಿನ ನಾವಿಬ್ಬರೂ ತೂಗುಮಂಚದ ಮೇಲೆ ಕುಳಿತಿದ್ದೆವು. ಅಷ್ಟರಲ್ಲಿ ಹೊರಗಿನಿಂದ ನಾನಾಸಾಹೇಬರು ಬಂದರು. ಅವರ ಮೋರೆ, ಮಹಾ ಅಪಘಾತವಾದಂತೆ ಕಪ್ಪಿಟ್ಟುಹೋಗಿತ್ತು. 'ಆದದ್ದಾದರೂ ಏನು?' ಎನ್ನುವದು ನಮಗೆ ತಿಳಿಯದ ಒಗಟಾಗಿಬಿಟ್ಟಿತು. ಅವರು ಚೆನ್ನಾಗಿ ಅತ್ತಿದ್ದರಂತೆ ಕಾಣುತ್ತಿತ್ತು. ನಮ್ಮಿಬ್ಬರಿಗೂ ಹೃದಯಕ್ಕೆ ಬರೆ ಕೊಟ್ಟಂತಾಯಿತು. ಅವರು ನಮ್ಮ ಸಂಗಡ ಒಂದೂ ಮಾತಾಡದೆ ದಿವಾಣಖಾನೆಯಲ್ಲಿ ಕೋಚಿನ ಮೇಲೆ ಬಿದ್ದುಕೊಂಡು ಕಣ್ಣೊರಸಿಕೊಳ್ಳಹತ್ತಿದರು. ಅವ್ವನು ಹತ್ತಿರ ಹೋಗಿ, 'ಏನಾಯಿತು? ಆಯಿತಾದರೂ ಏನು?' ಎಂದು ಕೇಳಿದಳು. ಅವರೇನು ಮಾತಾಡಿದರೋ ನಮಗೇನೂ ಕೇಳಿಸುತ್ತಿರಲಿಲ್ಲ. ಒಮ್ಮಿಂದೊಮ್ಮೆ ಅವಳೂ ಅಳಲು ಪ್ರಾರಂಭ ಮಾಡಿದಳು. ನಾನು ಮೆಲ್ಲಗೆ ಅವಳ ಹತ್ತಿರ ಹೋಗಿ 'ಆಯಿತಾದರೂ ಏನವ್ವಾ?' ಎಂದು ಕೇಳಿದೆ.

'ಅಚಲಾ, ನಿನ್ನ ಕುಂಕುಮವಳಿಸಿತೇ, ನನ್ನ ತಾಯೀ!' ತಾಯಿಯ ಚಟಕ್ಕನೆ ಮೇಲಕ್ಕೆದ್ದಳು. 'ನಾನಾ, ಪತ್ರ ಕೊಡಿರಿ ನೋಡೋಣ.' ನಾನಾಸಾಹೇಬರು ಅವಳ ಕೈಗೆ ಪತ್ರವನ್ನಿತ್ತರು. ಅವಳದನ್ನು ಓದಿ ನೋಡಿದಳು. ವಿನಾಯಕರಾಯರ ಮರಣದ ವಾರ್ತೆ ಅದರಲ್ಲಿದ್ದಿತು. ನಾವು ಮೂವರೂ ಅಳುತ್ತಿದ್ದೆವು. ಅಚಲೆಯ ಮುಖಮುದ್ರೆ ವಿಲಕ್ಷಣ ಆಕಾರ ತಾಳಿತು. ಅವಳು ಕಠೋರತೆಯಿಂದ ನೆಲದ ಕಡೆಗೆ ದೃಷ್ಟಿಯಿಟ್ಟು ನೋಡುತ್ತ ತೂಗುಮಂಚದ ಮೇಲೆ ಕುಳಿತಳು. ಒಂದಾದರೂ ಹನಿ ಅವಳ ಕಣ್ಣಿಂದುದುರಲಿಲ್ಲ. 'ಎಂತಹ ಕಲ್ಲೆದೆಯವಳದು!' ಎಂದು ನಮಗೆ ಮೂವರಿಗೂ ಎನ್ನಿಸದೆ ಇರಲಿಲ್ಲ. ಗಂಡ ತೀರಿಹೋದ. ಆದರೂ ಇವಳ ಕಣ್ಣು ಒದ್ದೆಯಾಗುವದಿಲ್ಲ! ನಮ್ಮೆಲ್ಲರ ದೃಷ್ಟಿ ಅವಳಲ್ಲಿಯೇ ನಟ್ಟಿತ್ತು. ಅವಳಿಗೂ ಅದರ ಅರಿವಾಗಿರಲಿಲ್ಲವೆಂತಲ್ಲ. ಕೊನೆಗೆ ಅವಳೇ ಒಂದು ತರದ ಗೊಗ್ಗರು ದನಿಯಲ್ಲಿ ನುಡಿದಳು. 'ಅಳುವಿರೇತಕ್ಕೆ? ಏನೇನೂ ಅಳುವ ಕಾರಣವಿಲ್ಲ.' ನಮಗಂತೂ ಅವಳ ಈ ಅಮಾನುಷ ವರ್ತನದಿಂದ ಆಶ್ಚರ್ಯವಾಯಿತು.

ನಮ್ಮಂತಹ ನಾವೇ ದುಃಖದಿಂದ ಜರ್ಜರಿತರಾಗಿದ್ದೇವೆ. ಆದರೆ ಅವಳ ಮೋರೆಯು ಮೇಲಾದರೋ ಈ ಕಠೋರತೆಯಲ್ಲದೆ ಬೇರೇನೂ ಇಲ್ಲ. ಕೊನೆಗೆ ಅವ್ವನೇ ಎಂದಳು, ' ನೀನು ಹೀಗೆ ಮಾಡಿದರೆ ತಿಳಿಯುವದಾದರೂ ಏನನ್ನು ? '

' ಅವ್ವಾ, ಅವರಿಗೇನೂ ಆಗಿಲ್ಲ.'

ಈ ಎರಡು ತಿಂಗಳಿನಲ್ಲಿ ವಿನಾಯಕರಾಯರಿಂದ ಅವಳಿಗೆ ಒಂದಾದರೂ ಒಂದು ಪತ್ರ ಬರಲಿಲ್ಲ. ಅನಂತರ ಅವಳು ಹೀಗೆ ಹೇಳುವದೇನು ! ನಾವಂತೂ ದಿಙ್ಮೂಢರಾದೆವು. ಅವಳು ಮತ್ತೊಂದು ಮಾತನ್ನೂ ಆಡದೆ ಇದ್ದಳು. ಎಂದಿನಂತೆ ಹೆಳಲು ಹಾಕಿಕೊಂಡು, ಅವಳು ಕುಂಕುಮವಿಟ್ಟು ಕೊಂಡಳು. ಅವಳ ಈ ನಡತೆಯ ವಿಷಯವಾಗಿ ನಮಗೆ ಸ್ವಲ್ಪ ತಿರಸ್ಕಾರವೂ ಉಂಟಾಯಿತು. ನಾನಾಸಾಹೇಬರೂ ಕೊನೆಗೆ ಸಿಟ್ಟಿಗೆದ್ದರು. ಆಗ ಮಾತ್ರ ಅವಳ ಕಣ್ಣಿನಿಂದ ಅಶ್ರು ಧಾರೆಗಟ್ಟಿ ಸುರಿಯಲಾರಂಭಿಸಿತು. ಅವಳು ಹೇಳಿದಳು: ' ನಾನಾ, ಈಗೆರಡು ತಿಂಗಳಿನಿಂದಲೂ ಅವರನ್ನು ಬಂಧಿಸಲು ವಾರಂಟು ಹೊರಟಿದೆ. ಅದನ್ನು ತಪ್ಪಿಸಲು ಈ ಊರಿನಿಂದ ಆ ಊರಿಗೆ ಅವರು ಗುಪ್ತವಾಗಿ ಓಡಾಡುತ್ತಲಿದ್ದಾರೆ. ಅವರೇ ನನಗೆ ಹೇಳಿದ್ದರು—ಇದರಿಂದ ಕಾರ್ಯವಾಗದಿದ್ದರೆ ತಾವು ಮೃತಪಟ್ಟ ಸುದ್ದಿಯನ್ನು ಹರಡುವೆವೆಂದು. ಆ ಪತ್ರವೂ ಹೀಗೆ ಯಾರೊಬ್ಬ ಸಾಹುಕಾರನು ಬರೆದುದಾಗಿರಬೇಕು.' ನಮ್ಮೆಲ್ಲರಿಗೂ ಆಶ್ಚರ್ಯದಿಂದ ಕಂಪನವುಂಟಾಯಿತು. ಅಚಲೆ ಮನೆಗೆ ಬಂದು ಎರಡು ತಿಂಗಳಾಗಿತ್ತು. ಆದರೆ ಅವಳು ತನ್ನ ಗಂಡನ ವಿಷಯವಾಗಿ ಒಂದಿಷ್ಟು ಕೆಟ್ಟ ಮಾತನ್ನೂ ಆಡಿರಲಿಲ್ಲ. ಗಂಡನ ಮನೆಯ ವಿಷಯವನ್ನು ಅವಳೆಂದೂ ತೆಗೆಯುತ್ತಿರಲಿಲ್ಲ. ಅವಳು ನೋಡಿದರೆ ಇಷ್ಟು ಜತನದಿಂದ ಗಂಡನ ಮಾನ-ಮರ್ಯಾದೆಗಳನ್ನು ರಕ್ಷಿಸುವ ಹೆಂಡತಿ—ಅವಳಿಗೆಂತಹ ದರಿದ್ರ ಗಂಡ ! "

ಅಚಲೆಗೆ ಸಂಸಾರ ಮಾಡಿಕೊಂಡಿರಬೇಕೆಂದು ಎಂತಹ ಹುರುಪಿತ್ತು ! ವಿನಾಯಕರಾಯರೊಡನೆ ಮದುವೆಯಾದಾಗ ಅವಳಿಗೆ ಅದೆಷ್ಟೋ ಧನ್ಯತೆ ಎನ್ನಿಸಿರಬೇಕು. ಅದೇ ಮದುವೆಯಾದ ಪ್ರತಿಯೊಬ್ಬ ಮುಗುದೆಗೂ ' ನನಗೊಂದು ವಿಶಿಷ್ಟವಾದ ಸ್ಥಾನವಿಂದು ದೊರಕಿತು ' ಎಂಬ ಅಭಿಮಾನ

ಇದ್ದೇ ಇರುತ್ತದೆ. ಇದೇ ದೃಷ್ಟಿಯಿಂದಲೆ ಅಚಲೆ ಸುತ್ತಲಿನ ಜಗತ್ತನ್ನು ಈಕ್ಷಿಸುತ್ತಿದ್ದಳು. ಅವಳ ಕಕ್ಕ ಅತ್ಯಂತ ಪ್ರೇಮಲ ಅಂತಃಕರಣವುಳ್ಳವರಾಗಿದ್ದರು. ಚಿಕ್ಕ ಹುಡುಗ-ಹುಡಿಗೆಯರಾದ ಬಾಬಾ ಮತ್ತು ಅಚಲೆಯರನ್ನು ಅವರು ಸಲಹಿ ದೊಡ್ಡವರನ್ನಾಗಿ ಮಾಡಿದ್ದರು. ಕೇವಲ ತಮ್ಮ ಹೊಟ್ಟೆಯ ಮಗಳಂತೆಯೇ—ಮಾಣಿಕಳಂತೆಯೇ—ಅಚಲೆಯನ್ನು ನೋಡಿಕೊಂಡು ಬಂದಿದ್ದರು. ಮಾಣಿಕ ಮತ್ತು ಅಚಲೆಯರಿಬ್ಬರಿಗೂ ತಾವು ಕಕ್ಕನ ಮಕ್ಕಳು ಎಂಬ ಮಾತಿನ ಅರಿವೂ ಬಂದಿರಲಿಲ್ಲ. ಅಚಲೆ ಮಾಣಿಕಗಳಿಗಿಂತ ನಾಲ್ಕು ವರ್ಷಕ್ಕೆ ಹಿರಿಯಳು. ಆದರೂ ಅವರಿಬ್ಬರೂ ಕೇವಲ ಅಕ್ಕತಂಗಿಯರೇ ಅಲ್ಲವೆ ಜೀವದ ಗೆಳತಿಯರೂ ಆಗಿದ್ದರು. ಅಚಲೆ ಆರನೆಯ ವರ್ಗದಲ್ಲಿರುವಾಗಲೆ ಅವಳ ಲಗ್ನವಾಯಿತು. ಅಚಲೆಯ ಲಗ್ನವಾದಾಗ ಅವರಿಬ್ಬರಿಗೂ ಒಂದು ತರದ ಆನಂದವಾಯಿತು. ಅವರಿಬ್ಬರೂ ಏನೆಲ್ಲ ತಮ್ಮ ರಹಸ್ಯಗಳನ್ನು ಪರಸ್ಪರ ವಿವರಿಸಿ ಹೇಳುವರು, ಚರ್ಚಿಸುವರು. ಲಗ್ನದ ಮೊದಲು ದಿನ ಇಬ್ಬರ ಹೃದಯದಲ್ಲಿ ಆನಂದವಿದ್ದರೂ ಅವರ ಮನದಲ್ಲಿ ಗೊಂದಲವೆದ್ದು ಹೋಗಿತ್ತು. ತನ್ನ ಭಾವೀ ಆಯುಷ್ಯಕ್ರಮದ ಅಜ್ಞಾನದಿಂದ ಅಕ್ಕನಿಗೂ, ಇನ್ನು ಅಚಲಾ ಹೋಗುವಳು, ತಾನು ಮುಂದೆ ಒಬ್ಬಳೇ ಇರಬೇಕಾಗುವದು ಎಂಬ ಕಲ್ಪನೆಯಿಂದ ತಂಗಿಗೂ ಮನದಲ್ಲಿ ಅನಂತ ಚಿತ್ರಗಳ ಚಕ್ರವೊಂದು ಗರಗರನೆ ತಿರುಗುತ್ತಿರುವಂತೆನಿಸುತ್ತಿತ್ತು. ಅಚಲೆಯನ್ನು ಅಳಿಯಂದಿರಿಗೊಪ್ಪಿಸುವಾಗ ಅವಳ ಕಕ್ಕ-ಕಕ್ಕಿಯರಿಗೆ ಒಂದು ತರದ ಆನಂದವಾಗಿದ್ದರೂ, ಅವರ ಕಣ್ಣುಗಳು ಒಂದೆ ಸವನೆ ತುಂಬಿ ಬರುತ್ತಿದ್ದವು. ವೈದಿಕರು ತಮ್ಮ ಗಂಭೀರವಾದ ಮತ್ತು ಸ್ಪಷ್ಟವಾದ ಉಚ್ಚಸ್ವರದಲ್ಲಿ ಹೇಳುತ್ತಿದ್ದ ಮಂಗಳಾಷ್ಟಕದಿಂದ ನಾನಾಸಾಹೇಬ, ಕಕ್ಕಿ, ಸೀತಮ್ಮ ಮತ್ತು ಮಾಣಿಕ ಇವರ ಹೃದಯದಲ್ಲಿ ಎದ್ದ ಕಲವಲ ಕೊನೆಗೊಮ್ಮೆ ನೆರೆದ ಜನರ ಚಪ್ಪಾಳೆಗಳ ಸಿಡಿತಕ್ಕೆ ಧಾರೆಯಾಗಿ ಸುರಿಯಿತು. ಮಾಣಿಕಳಂತೂ ಬಿಕ್ಕಿ ಬಿಕ್ಕಿ ಅಳಹತ್ತಿದಳು. ಕಕ್ಕ ಕಕ್ಕಿಯರ ಅಕೃತ್ರಿಮವಾದ, ಅಪ್ರತಿಮವಾದ, ಅನಂತಪ್ರೇಮದ ಆ ಹೊಯ್ದಾಟದ ವಾರಿಧಿಯನ್ನು ಅಚಲೆ ಬಲ್ಲವಳಾಗಿದ್ದಳು. ಏನೇ ಎಂದರೂ, ಹೇಗೆ ಸಮಾಧಾನಪಟ್ಟುಕೊಂಡರೂ, ಲಗ್ನ ಅವಳನ್ನು ಮನೆಯಿಂದ ಬೇರ್ಪಡಿಸಿತ್ತು. ವಿನಾಯಕ

ರಾಯರ ಮನೆಯಲ್ಲಿ ಎಲ್ಲೆಲ್ಲಿಯೂ ಆನಂದ ತುಂಬಿ ತುಳುಕುತ್ತಿತ್ತು. ನಾಲ್ಕು ತಿಂಗಳುಗಳ ಪರ್ಯಂತ ಸುಖಮಯವಾದ ಹೊಸ ಸಂಸಾರದ ಮೃದು ಮಧುರ ಸ್ವಪ್ನಗಳು ಅವಳ ಮನದ ಮೇಲ್ದೆರೆಯನ್ನು ಸುಖಸಾಗರದಲ್ಲಿ ಮೀಯಿಸಿ, ಅವಳ ಕಿವಿಯಲ್ಲಿ ಮಂಜುಳ ಸುಮಂಗಲ ಗೀತವನ್ನು ಹಾಡಿದ್ದವು. ತನ್ನ ಬಾಳಿನ ಮುಂಬರಲಿರುವ ಅಪಾರ ಅಳಲಿನ ರುದ್ರ ಸಂಗೀತದ ಅಪಶ್ರುತಿ ತಪ್ಪಿ ಕೂಡ ಕಿವಿಗೆ ಬಿದ್ದಿರಲಿಲ್ಲ. ಅವಳು ವಿನಾಯಕರಾಯರಲ್ಲಿ ಸಂಪೂರ್ಣ ಶ್ರದ್ಧೆಯನ್ನಿಟ್ಟಿದ್ದಳು. ಅವರ ಗುಣವರ್ಣನೆಯನ್ನಷ್ಟೇ ಹೆರರ ಮುಂದೆ ಮಾಡಿ, ಅವರ ದೋಷಗಳನ್ನು ಕಂಡೂ ಅರಿಯದವಳಂತೆ ವರ್ತಿಸುವ ಪತ್ನೀ ಧರ್ಮವನ್ನವಳು ಅಕ್ಷರಶಃ ಪಾಲಿಸಲಾರಂಭಿಸಿದಳು. ಆದರೆ ಆ ದುರ್ದೈವಿಗೆ ದಿನ ಕಳೆದಂತೆ ತನ್ನ ಗಂಡನ ಮನೆಯ ವಿಷಯವಾಗಿ ಭ್ರಮನಿರಸನ ವಾಗುತ್ತ ನಡೆಯಿತು. ಅವಳು ಹೃದಯದಲ್ಲಿ ಒಳಗಿಂದೊಳಗೇ ಬಹಳ ಕಳವಳಗೊಂಡಳು ಅಲ್ಲಲ್ಲಿ, ಅಷ್ಟಷ್ಟು ಮಾಡಿಟ್ಟ ಸಾಲದ ವಿಷಯವಾಗಿ ವಿನಾಯಕರಾಯರು ಪ್ರಸ್ತಾಪಿಸಹತ್ತಿದರು ಅಲ್ಲಲ್ಲಿ ಹಿಸಿದು ಹರಿದು ಹೋದ ವಸ್ತ್ರವಾಗಿದ್ದಿತು —ಅವರ ಮಾನಮರ್ಯಾದೆಯೆಂಬುವದು. ಅಂಥಹ ಕಪ್ಪು ಮುಖವನ್ನೆತ್ತಿ ಹೊರಗೆ ಅಡ್ಡಾಡುವದು ಅವರಿಗೆ ಕಠಿಣವಾಯಿತು. ಯಾರಾದರೊಬ್ಬರು ಸಾಲಗಾರರು ಅವರನ್ನು ದಾರಿಯಲ್ಲಿಯೇ ನಿಲ್ಲಿಸಿ ಕೇಳುತ್ತಿದ್ದರು: 'ಏನು ರಾಯರೆ, ಇನ್ನೂ ಎಷ್ಟು ದಿವಸ ನಾವು ನಿಮ್ಮ ಈ ಬೂಟು-ಸೂಟುಗಳ ಮುರವತ್ತಿಗೆ ಸುಮ್ಮನಿರುವದು?' ವಿನಾಯಕರಾಯರಿಗೆ ಒಳಗಿಂದೊಳಗೆ ಚೇಳು ಕಡಿದಹಾಗಾಗುತ್ತಿತ್ತು. ಅದರ ಸಿಟ್ಟನ್ನು ಅವರು ಅಚಲೆಯ ಮೇಲೆ ಕೋಪಿಸಿ ತೀರಿಸಿಕೊಳ್ಳಲಾರಂಭಿಸಿದರು. ಪಾಪ! ಅವಳದೇನು ತಪ್ಪು? ಇಂಗ್ಲಂಡಿನಿಂದ ಬಂದ ಈ ಪತಿರಾಜರನ್ನು ಐದು ಸಾವಿರ ರೂಪಾಯಿ ವರದಕ್ಷಿಣೆ ಕೊಟ್ಟುಕೊಂಡಿದ್ದರು. ಆದರೂ ಅವಳು ಆರ್ಯಪತ್ನಿಯಾಗಿದ್ದಳು. ಅವಳು ಅದೆಲ್ಲವನ್ನೂ ಸಹಿಸುತ್ತಿದ್ದಳು. ಆದರೆ ವಿನಾಯಕರಾಯರಿಗೆ ಸಾಲವೇಕೆಂಬ ಮಾತು ಮಾತ್ರ ಅವಳಿಗೆ ತಿಳಿದಿರಲಿಲ್ಲ ಸಾಲಗಾರರ ಮೋರೆ ತಪ್ಪಿಸುವದಕ್ಕೆಂದು ಅಚಲೆಯನ್ನು ತವರುಮನೆಗೆ ಕಳಿಸಿ ಅವರು ಓಡಿ ಹೋದರು; ಆಗ ಊರಿನಲ್ಲೆಲ್ಲ ಅವರ ನಡತೆಯ ಕಹಳೆಯೂದಿತು. ಆದರೆ ಆ ಸ್ವರ ಅವಳ ತವರುಮನೆಯವರ ಕಿವಿಯ ವರೆಗೆ

ಬಂದಿರಲಿಲ್ಲ ಅವಳಾದರೂ ಮನೆಯಲ್ಲಿ ಆ ವಿಷಯವಾಗಿ ತಪ್ಪಿ ಕೂಡ ಒಂದಕ್ಷರ ನುಡಿಯಲಿಲ್ಲ. ಕೊನೆಗೆ ವಿನಾಯಕರಾಯರು ತಮ್ಮ ದೊಡ್ಡ ಮನೆಯನ್ನೇ ಮಾರಿ ಸಾಲಗಾರರ ಕಾಟ ತಪ್ಪಿಸಿಕೊಂಡರು. ಆ ಬಡತನದ ಬಾಳಿನಲ್ಲಿಯೂ ಅಚಲೆ ಸುಖ ಹಚ್ಚಿಕೊಂಡಿರಬಹುದಾಗಿತ್ತು. ಆದರೆ ವಿನಾಯಕರಾಯರು ಅವಳೆದುರಿನಲ್ಲಿಯೆ ಕುಡಿಯುವದಕ್ಕೆ ಆರಂಭಿಸಿದರು. ಪ್ರತಿದಿನವೂ ಹೊಸ ಹೊಸ 'ಹಕ್ಕಿ'ಗಳನ್ನು ಹಿಡಿದು ತಂದು ನರಕದಲ್ಲಿ ಉರುಳಾಡಲಾರಂಭಿಸಿದರು. ಆ ಹೆಂಗಸರ ಸೇವೆ ಮಾಡಲು ಅಚಲೆಗೆ ಆಜ್ಞೆ ಮಾಡಲಾರಂಭಿಸಿದರು. ಅವಳು ಕೇಳದಾದಳು. ಕೊನೆಗೆ, ಹೊಡೆಯುವ ದಕ್ಕೂ ಆರಂಭವಾಯಿತು. ನಾನಾ ರೀತಿಯ ಛಲಕ್ಕೆ ಆರಂಭವಾಯಿತು. ವಿನಾಯಕರಾಯರು ಕ್ರೂರ, ದುಷ್ಟ, ರಾಕ್ಷಸೀ ಮೃಗವಾದರು. ಅವೆಲ್ಲ ರೀತಿ ನೀತಿಗಳ ಹೇಸಿಗೆ ಸಹಿಸದಂತಾಗಿ ಅವಳು ತವರುಮನೆಗೆ ಬಂದು ವಿನಾಯಕರಾಯರಿಗೆ ನರಕದ ಮಾರ್ಗವನ್ನು ನಿರ್ವಿಘ್ನವಾಗಿ ತೆರೆದಿಟ್ಟಳು.

ಎಷ್ಟೋ ಪ್ರೇಮೋತ್ಸಾಹಗಳಿಂದ ಆಕೆಯ ಕಕ್ಕ ಅವಳ ಲಗ್ನ ಮಾಡಿದ್ದರು! ವಿನಾಯಕರಾಯರು 'ಪಾಶ್ಚಾತ್ಯ ಸುಧಾರಣೆ'ಯ ಅದಾವ ಅಂತರ್ಗೃಹಗಳನ್ನು ಪ್ರವೇಶಿಸಿ, ಅದೆಂತೆಂತಹ ಹೊಲಸು ರೀತಿ-ನೀತಿಗಳ ದೀಕ್ಷೆ ವಹಿಸಿದ್ದರೆನ್ನುವದು ಕೇವಲ ಅವರಿಗೇ ಏಕೆ, ಯಾರ ಕಲ್ಪನೆಗೂ ಎಟುಕದ ಮಾತಾಗಿತ್ತು. ಕೇವಲ ತನ್ನ ಹೊಟ್ಟೆಯ ಮಗಳಂತೆಯೆ ಅಚಲೆಯನ್ನು ನೋಡಿಕೊಂಡು ಬಂದಿದ್ದ ಆಕೆಯ ಕಕ್ಕನ ಸರಳ ಹೃನ್ಮನ ಗಳಿಗೆ ಮಣ್ಣುಗೂಡಿದ ಸುಕೋಮಲ ಪುಷ್ಪದಂತೆಯಾದ, ಅಚಲೆಯ ಜೀವನದ ಬತ್ತಿದ ಜರಿಯನ್ನು ಕಂಡು ವಜ್ರಾಘಾತವಾಗದಿರಲಿಲ್ಲ. ಅಚಲೆ ತಿರುಗಿ ಗಂಡನ ಮನೆಯನ್ನು ನೆನೆಸುವದೂ ಸಾಧ್ಯವಿರಲಿಲ್ಲ. ಪ್ರಶಾಂತ ಸಂಜೆಯೊಂದರ ತಿಳಿನೀಲಿ ಗಗನದಲ್ಲಿ ನಗುನಗುತ್ತ ಮೂಡಿ ಮಿನುಗಹತ್ತಿದ ತಾರೆಯೊಂದು ಅಕಸ್ಮಾತ್ತಾಗಿ ಸಾಗಿಬಂದ ಮೇಘದ ಆಚ್ಛಾದನೆಯಿಂದ ಒಮ್ಮೆಲೆ ನಿಷ್ಪ್ರಭಗೊಳುವಂತೆಯಾಗಿತ್ತು—ಅಚಲೆಯ ಹೀನ ದೀನ ದರಿದ್ರ ಸ್ಥಿತಿ. ದೂರದಿಂದ ಮೋಹಕವಾಗಿ ಕಂಗೊಳಿಸುವ ಹಸುರು ಮುರಿ ಯುವ ಹುಲ್ಲಿನ ಹಾಸಿಗೆಯ ಮೇಲೆ ವಿಶ್ರಾಂತಿಗೆಂದು ಕಾಲಿಟ್ಟೊಡನೆಯೆ ಅದರಲ್ಲಿ ಅಡಗಿದ್ದ ಕಾಳನಾಗಿಣಿಯೊಂದು ನೆಗೆದೆದ್ದು ಕಚ್ಚಿದಂತೆ

ಆಯಿತವಳ ಸ್ಥಿತಿ—ಆ ಮೋಹಕ ಸಂಸಾರದ ಸುಖ ಶಯ್ಯೆಯಲ್ಲಿ ವಿಶ್ರಮಿಸ ಬೇಕೆಂದೊಡನೆಯೆ. ಅವಳ ಅಂತರ್ಯದ ಸುಕುಮಾರ ಭಾವನೆಗಳೆಲ್ಲ ಗಾಸಿ ಗೊಂಡು ಹೊಡೆ ಮರಳಿದವು. ಅಚಲೆಯ ಕಕ್ಕ ಅವಳನ್ನು ಮತ್ತೆ ಶಾಲೆಗೆ ಸೇರಿಸಿದರು. ಅವಳು ಬಿ ಎ ಆದಳು ಅನಂತರ ಕೆಲವೇ ದಿವಸಗಳಲ್ಲಿ ಅವಳ ಕಕ್ಕ ಮತ್ತು ಕಕ್ಕಿ ಇಬ್ಬರೂ ಅವಳಿಂದ ಕೊನೆಯವರೆಗೂ ದೂರವಾದರು. ಅವಳಿಗೆ ತವರುಮನೆಯಲ್ಲಿ ಆಧಾರವೆಂದರೆ ಒಬ್ಬನೇ ಒಬ್ಬ ಅವಳಣ್ಣನದು —ಬಾಬಾನದು. ಅಚಲೆಯ ಜೀವನದ ಈ ದುರಂತ ಚಿತ್ರವನ್ನು ನಿರುಕಿಸು ವದರಲ್ಲಿ ಬಾಬಾನ ಇಪ್ಪತ್ತೈದರ ಪ್ರಾಯದ ಒಗರು ಎಲ್ಲಿಯೋ ಅಡಗಿ ಹೋಗಿತ್ತು. ಬಾಬಾ ಮತ್ತು ಅಚಲಾ! ಈ ಈರ್ವರು ಅಣ್ಣ-ತಂಗಿಯರ ನಿಷ್ಕಪಟ ಪ್ರೇಮದ ಪರಿಯನ್ನು ನೋಡಿದರೆ ಜೀವನದ ವಿಷಯಕವಾದ ಎಂಥ ಔದಾಸೀನ್ಯವೂ ಒಂದು ಕ್ಷಣ ಕರಗಿಹೋಗಬೇಕು

ಅಚಲಾ ಮಾಣಿಕಳ ಮನೆಯಿಂದ ಹೊರಟಳು. ಆ ಅಂಗೈ ಅಗಲದ ವರ್ತಮಾನಪತ್ರ ಅವಳ ಹೃದಯದಲ್ಲಿ ಸುಪ್ತವಾಗಿದ್ದ ಅಗ್ನಿಯನ್ನು ಪ್ರದೀಪ್ತಗೊಳಿಸಿತ್ತು. ಎಷ್ಟೋ ದಿನಗಳಾವನಂತರ ದುಃಖಮಯವಾದ ಹಿಂದಿನ ನೆನಪುಗಳು ಮತ್ತೆ ಅವಳ ಮನದೆದುರು ನರ್ತಿಸತೊಡಗಿದವು.

೩

ಮದ್ಯದ ನಿಶೆಯಲ್ಲಿ ಒಬ್ಬ ವೇಶ್ಯೆಯನ್ನು ಗಾಯಗೊಳಿಸಿದ ವಾರ್ತೆ ಅದರಲ್ಲಿತ್ತು. ವಿನಾಯಕರಾಯರೊಡನೆ ಇನ್ನು ತನಗೆ ಯಾವ ತರದ ಸಂಬಂಧವೂ ಇಲ್ಲ ಎನ್ನುವಂತೆ ಅವಳು ಇರುತ್ತಿದ್ದರೂ ಕತ್ತಲೆಯಲ್ಲಿ ಹೋಗು ವಾಗ ಮರ್ಮಸ್ಥಾನಕ್ಕೆ ಹೊಡೆತ ಕೂತಂತೆ ಅವಳ ಮನಃಸ್ಥಿತಿಯಾಯಿತು. 'ಬಾಬಾಸಾಹೇಬ ಜೋಶಿ, ಇಂಜಿನಿಯರ, ಇವರ ತಂಗಿ ಅಚಲಾಬಾಯಿ ಲೋಣಕರ, ಬಿ.ಎ., ಇವರ ಪತಿ ವಿನಾಯಕರಾವ ಲೋಣಕರ ಇವರನ್ನು ಸುರೆಯ ನಿಶೆಯಲ್ಲಿ ವೇಶ್ಯೆಯೊಬ್ಬಳನ್ನು ತಿವಿದು ಗಾಯಪಡಿಸಿದ ಆರೋಪದ ಮೇಲೆ ಈ ದಿನ ಪೊಲೀಸರು ಬಂಧಿಸಿದರು.'

ಕವಣೆಯಿಂದ ಬೀಸಿ ಬಿಟ್ಟ ಕಲ್ಲೊಂದು ಸಹಜವಾಗಿ ಆಕಾಶದಲ್ಲಿ ಉಡ್ಡಾಣ ಮಾಡುತ್ತಿರುವ ಪಕ್ಷಿಯೊಂದರ ಮರ್ಮಕ್ಕೆ ತಗಲಿ ಅದಕ್ಕೆ ಪೆಟ್ಟಾ

ಗುವದುಂಟು. ಆ ಅರಿಯದ ಸುದ್ದಿಗಾರನಿಗಾದರೂ ಏನು ಗೊತ್ತು—ತನ್ನ ಸುದ್ದಿಯ ಕವಣೆಯಿಂದ ನಿರ್ಹೇತುಕವಾಗಿ ಬೀಸಿಬಿಟ್ಟ ಈ ಪುಟ್ಟ ಕಲ್ಲೊಂದರಿಂದ ಸ್ತ್ರೀಯೊಬ್ಬಳ ಹೃದಯದಲ್ಲಿ ಆಳವಾದ ಗಾಯವೊಂದುಂಟಾಗಬಹುದೆಂಬುದು! ಅವನಿಗೇನು ಇದರ ಕಲ್ಪನೆ! ಮತ್ತು ನಮ್ಮ ಈ ಅಗಾಧವಾದ ವಿಶ್ವದ ಅನಂತವಾದ ವ್ಯಾಪಾರಗಳ ರೀತಿಯಾದರೂ ಇದೇ ಅಲ್ಲವೇನು? ಯಾರೋ ಎಲ್ಲಿಯೋ ಆಡಿಬಿಟ್ಟ ಶಬ್ದವೊಂದು ಗಾಳಿಗುಂಟ ಸಾಗಿ ಬಂದು, ಯಾವುದೋ ಮೂಲೆಯಲ್ಲಿ ಮಗುದೊಬ್ಬರ ಜೀವನದ ಹಿತಾಹಿತಗಳನ್ನು ನಿರ್ಣಯಿಸುವದುಂಟು. ಈಗಲಾದರೂ ಹಾಗೇ ಆಯಿತು. ಹಟ ಮಾಡಿ ಅತ್ತು ಅತ್ತು ಮಲಗುತ್ತಿರುವ ಮಗುವನ್ನು ಬಡಿದು ಮಲಗಿಸಿದರೆ ಅದು ಬಿಕ್ಕುತ್ತ ಮಲಗಲು ಯತ್ನಿಸುತ್ತಿರುವಂತೆ ಅಚಲೆ ತನ್ನ ದುಃಖವನ್ನು ಜೋರಿನಿಂದ ಹತ್ತಿಕ್ಕಿ, ತನ್ನ ಮನಸ್ಸಿಗೆ ಶಾಂತತೆಯ ನಿದ್ರೆಯನ್ನುಂಟು ಮಾಡಲು ಹವಣಿಸುತ್ತಿದ್ದಳು. ಆದರೆ ಅವಳ ಮನೋದ್ವೇಗದ ಬಿಸಿಯುಸಿರ ಬಿಕ್ಕುಗಳು ಪೂರ್ಣವಾಗಿ ನಿಂತಿರಲಿಲ್ಲ. ಇಂದಂತೂ ನಿದ್ರೆಯ ಗುಂಗು ಸಂಪೂರ್ಣವಾಗಿ ಸರಿಯಿತು.

ಬಾಬಾಸಾಹೇಬ, ಅಚಲಾ, ಪತಿ, ವಿನಾಯಕರಾವ, ನಿಶೆ, ವೇಶ್ಯೆ, ಗಾಯ, ಪೊಲೀಸ, ಬಂಧನ! ಬೀದಿಯ ಕ್ರೂರ ಕೇಳಿ ಇವೆಲ್ಲವುಗಳನ್ನು ಹೇಗೆ ಜೋಡಿಸಿತ್ತು! ಆ ದುರ್ಗುಣಗಳ ಮಾಲೆಗೆ ತನ್ನನ್ನು ಹೆಣೆಯುವ ಆ ಒಂದೇ ಒಂದು ಕೊಂಡಿ—ಆ 'ಪತಿ' ಎಂಬ ಶಬ್ದ ಅದು ಎಲ್ಲರ ಮುಖಕ್ಕೂ ಮಸಿ ಬಳಿದಿತ್ತು. ಅಚಲೆಯೇ ಆಗಲಿ ಅಥವಾ ವಿನಾಯಕರಾಯರೇ ಆಗಲಿ ಎಲ್ಲಿಯವರೆಗೆ ಜೀವಿಸಿರುವರೋ ಅಲ್ಲಿಯ ವರೆಗೆ ಅವರ ಜೀವಂತ ಪಾಪಗಳೂ ತಮ್ಮ ಸ್ಪಷ್ಟ ಛಾಯೆಯನ್ನು ಅಚಲೆಯ ಮೇಲೆ ಚೆಲ್ಲದಿರುವದು ಸಾಧ್ಯವೇ ಇರಲಿಲ್ಲ. ವಿನಾಯಕರಾಯರ ಮನೆ ಬಿಟ್ಟು ಬಂದನಂತರ ಇಷ್ಟು ದಿವಸಗಳ ಮೇಲೆ ಅವರ ನೆನಪೂ ಕೂಡ ಅವಳಿಗೆ ದುಸ್ಸಹವಾಗುತ್ತಿತ್ತು. ಇಂದಂತೂ ಮನೆಯಲ್ಲಿ ಯಾರೂ ಇಲ್ಲದ್ದರಿಂದ ಅವಳು ತನ್ನೆಲ್ಲ ಮೂಕ ದುಃಖಗಳಿಗೆ ಅಳುವಿನ ಮುಕ್ತದ್ವಾರವನ್ನು ತೆರೆದಿರಿಸಿದ್ದಳು.

ಇನ್ನೂ ಹದಿನೆಂಟು ವರ್ಷದ ತುಂಬು ಜವ್ವನೆ. ಆ ದಿನಗಳಲ್ಲಿ ದೇಹ, ಮನಸ್ಸುಗಳಲ್ಲಿ ಅದಾವ ಗುಪ್ತ ಶಕ್ತಿಗಳ ಸಂಚಾರವಾಗುತ್ತದೆಯೋ ಯಾರು

ಬಲ್ಲರು! ಆಸೆ, ಇಚ್ಛೆ, ಉತ್ಕಂಠೆ, ಕುತೂಹಲ, ಇನ್ನಿಲ್ಲದ ಸಹಸ್ರನೇತ್ರಗಳಿಂದ ಅಂತರಾತ್ಮ ಸುತ್ತಲಿನ ವಿಶ್ವದ ಅನಂತ ಚಮತ್ಕಾರಗಳನ್ನು ನಿರುಕಿಸಿ ನೋಡ ಲಾರಂಭಿಸುತ್ತಾನೆ. ಪ್ರಾಯದ ಹೃದಯವನ್ನು ಕೊಚ್ಚಿಕೊಂಡು ಹೋಗುವ ಅನಂತವಾದ, ಪರಿಶುದ್ಧವಾದ ಭಾವನೆಗಳು ವೈಮರೆಸುವ ಸುಖದ ಎಲ್ಲ ಕೋಟಿಕೊತ್ತಲಗಳನ್ನು ಜಯಿಸಲು ಆತುರತೆಯಿಂದ ಸಿದ್ಧವಾಗಿ ನಿಲ್ಲುತ್ತವೆ. ಅವುಗಳಿಗೆ ತಮಗಿಂತ ಬೇರೆಯಾದ ಯಾರೊಬ್ಬ ಕೈಹಿಡಿದು ನಡೆಸುವ ಸಂಗಾತಿಯ ಅವಶ್ಯಕತೆಯೆನ್ನಿಸುತ್ತದೆ. ಆ ಕಾಲದಲ್ಲಿ ಉತ್ಸಾಹವೇ ಅವುಗಳ ಮೂಲಮಂತ್ರ. ಹೃದಯಸಾಗರದಲ್ಲೆಲ್ಲ ಆನಂದದ ಊರ್ಮಿಗಳು ಉರುಳು ತ್ತಿರುತ್ತವೆ. ಅವಿಚಾರ? ಅವಿವೇಕ? ಛೆ! ಅಂದಿನ ಆ ದಿನದಲ್ಲಿ ಯಾವದೂ ಅವಿಚಾರವಲ್ಲ, ಯಾವದೂ ಅವಿವೇಕವಲ್ಲ. ಅಷ್ಟೇಕೆ, ಅವಿಚಾರ, ಅವಿವೇಕ ಇವುಗಳಿಂದಲೇ ತಾರುಣ್ಯದ ಉಜ್ವಲತೆಗೆ ಮತ್ತಷ್ಟು ಕಳೆಕಟ್ಟಿದೆ. ಅದೆಂತಹ ಆತ್ಮಪ್ರತಿಷ್ಠೆ! ಅದೆಂತಹ ಆತ್ಮವಿಶ್ವಾಸ! ತಾರುಣ್ಯದ ಹರ್ಷೋನ್ಮಾದದಿಂದ ಸೊಕ್ಕಿದ ಆ ಸ್ತ್ರೀ-ಪುರುಷರಿಗೆ ಇಡೀ ಜಗತ್ತನ್ನೇ ತಾವು ಕಿರುಬೆರಳಿನಲ್ಲಿ ಗರಗರನೆ ತಿರುಗಿಸುತ್ತಿರುವಂತೆ ಭಾಸವಾಗುತ್ತಿರುತ್ತದೆ. ಮುದುಕರಿಗೂ ವಯಸ್ಸಾದವರಿಗೂ ಎನ್ನಿಸುತ್ತದೆ, 'ಏನಿದು ಎಂತಹ ಉನ್ಮಾದ!' ಉನ್ಮಾದ? ಮನಷ್ಯನಲ್ಲಿಯ ದೈವೀ ಅಂಶವನ್ನು ಜಗತ್ತಿನ ಪ್ರತ್ಯಯಕ್ಕೆ ತಂದು ಕೊಡುವ ಸಾಮರ್ಥ್ಯ ಆ ಉನ್ಮಾದದಲ್ಲಿಯೇ ಇದೆ. ಆ ಉನ್ಮಾದದ ಮೂಲಕ ವಾಗಿಯೆ ಜೀವಿತದ ಸಾರ್ಥಕತೆ ನಿದರ್ಶನಕ್ಕೆ ಬರುವದುಂಟು. ಜಗತ್ತಿನ ಪರಿವೆಯೇ ಇಲ್ಲದೆ ತರುಣರು ಜಗತ್ತಿನಲ್ಲಿ ಮುನ್ನುಗ್ಗಿ ತಮ್ಮ ಮನಬಂದಂತೆ ನಡೆದಿರುತ್ತಾರೆ. ಆದರೆ ಯಾರ ಹಂಗು ಮುರವತ್ತನ್ನೂ ಮನ್ನಿಸದ, ಯಾರ ಅಂಜಿಕೆಯೂ ಇಲ್ಲದೆ ನಡೆದಿರುವ ಈ ತರುಣರೇ ಆಗಲಿ ತರುಣಿಯರೇ ಆಗಲಿ ಅವರೆಷ್ಟೇ 'ಇಲ್ಲ'ವೆಂದರೂ ಒಂದೆ ಸವನೆ ತಮ್ಮ ಮನದಲ್ಲಿ ಎಣಿಕೆಹಾಕು ತ್ತಲಿರುತ್ತಾರೆ. ಅವರಿಗೆ ಬೇರೆ ಯಾರಾದರೊಬ್ಬರ—ತಮಗಿಂತ ಬೇರೆ ಜಾತಿಯ ಯಾರಾದರೊಬ್ಬರ—ಮಗುದೊಬ್ಬ ತರುಣನ ಅಥವಾ ತರುಣಿಯ —ಹೃದಯದ 'ಹುಂ'ಕಾರದ ಅವಶ್ಯಕತೆ ತೀರ ಬಲವತ್ತರವಾಗಿ ಭಾಸವಾಗುತ್ತಿರುತ್ತದೆ. ಅಷ್ಟೇ ಅಥವಾ ಅದಕ್ಕಿಂತ ಹೆಚ್ಚಿನ ಆಸೆ ಆತುರ ಗಳಿಂದ, ಉತ್ಕಂಠೆಯಿಂದ, ಕುತೂಹಲದಿಂದ ಬರುವ ಆ ಮಾರ್ದನಿಯ

ಸಾತ್ವಿಕತೆಯಿಂದಲೇ ಸ್ತ್ರೀ-ಪುರುಷರ ಆತ್ಮವಿಕಾಸವಾಗುತ್ತಲಿರುತ್ತದೆ. ಜವ್ವನಿಗನೊಬ್ಬನ ಎದೆಯ ಆತುರದ ಕರೆಗೆ ಅವನಂತಹಳೇ ಆದ ಮುಗುದೆಯೋರ್ವಳು ಕೊಟ್ಟ 'ಹುಂ'ಕಾರದಿಂದಲೇ—ತಾರುಣ್ಯದ ಆ 'ಹುಂ'ಕಾರದಲ್ಲಿಯೇ ಜೀವನ-ಚೈತನ್ಯವನ್ನು ಸದಾ ಜಾಗೃತವಾಗಿರಿಸುವ ಅನುಪಮ ಶಕ್ತಿಯಿದೆ. ಆ ಶಕ್ತಿ ಅದ್ಭುತವಾದುದು. ಹೀಗೆ, ಒಳಗಿನಿಂದ ಬರುತ್ತಿರುವ ಆ ಕರೆಯನ್ನು ನಿರ್ಲಕ್ಷಿಸಿ ಸಾಗೋಣವೆಂದರೆ ಆಗದ ಮಾತು; ಯಾಕೆಂದರೆ ಕೇವಲ ಬುದ್ಧಿಯ ಕಸುವಿನ ಮೇಲೆ ಗಳಿಸಿದ ಧನ ಯಶಸ್ಸುಗಳು ಸ್ತ್ರೀಗೇ ಆಗಲಿ ಪುರುಷನಿಗೇ ಆಗಲಿ, ಒಂಟಿತನದ ಸಪ್ಪೆ ಬಾಳಿನಿಂದ ಕಃಪದಾರ್ಥವಾಗಿ ಕಾಣಹತ್ತುತ್ತವೆ. ಜೀವನದಲ್ಲಿ ಅರ್ಥವಿಲ್ಲ, ರಸವಿಲ್ಲವೆಂದು, ಬಾಳೆಲ್ಲ ಭಣಭಣವಾಗಿ, ಬೇಸರವಾಗಿ, ಕೆಲವರಿಗೆ ಆತ್ಮಹತ್ಯೆ ಮಾಡಿಕೊಳ್ಳಬೇಕೆಂಬ ಬುದ್ಧಿಯುಂಟಾಗುವದಾದರೂ ಮನವನ್ನು ಸೆರೆಹಿಡಿದು ವೈಮರೆಸುವ ಸಂಗಾತಿಯ ಅಭಾವದಿಂದಲೇ!

ಅಚಲೆಯ ತರುಣ ಹೃದಯದ ಕರೆಗೆ 'ಓ' ಕೊಡುವ ಹೃದಯ ತರುಣವಾದುದಾಗಿರಲಿಲ್ಲ, ಅವಳ ಕರೆಗೆ ಅದು ಮಾರ್ದನಿಯೂ ಆಗಿರಲಿಲ್ಲ ಎನ್ನಬಹುದು. ತುಂಬು ಹರಯದ ಉತ್ಕಂಠೆ, ಅದರ ಕುತೂಹಲ, ಸಾತ್ವಿಕತೆ ಅದರಲ್ಲಿರಲಿಲ್ಲ ವಿನಾಯಕರಾಯರು ಎಲ್ಲವನ್ನೂ ಕಂಡುಂಡವರಾಗಿದ್ದರು; ಹಳಸಿ ಹೊಲೆಗೆಟ್ಟು ಹೋಗಿದ್ದರು. ಅವರಲ್ಲಿ ಆ ತಾರುಣ್ಯದ ಸಾತ್ವಿಕ ಉನ್ಮಾದದ ಎಳೆತ ಎಂದೋ ಇಲ್ಲದಾಗಿತ್ತು. ತಾರುಣ್ಯದ ಸ್ವರ್ಗೀಯ ಸ್ವಪ್ನಸೃಷ್ಟಿಯಿಂದ ಅವರೆಂದೋ ದೂರವಾಗಿದ್ದರು. ಅದ್ದರಿಂದ ಅಚಲೆಯ ಹೃದಯದೊಳಗಿನ ಕೋಮಲ, ಸುಕುಮಾರ ಭಾವನೆ-ಇಚ್ಛೆಗಳನ್ನು ಅಲ್ಲಿಂದಲ್ಲಿಯೇ ಕುತ್ತಿಗೆ ಹಿಸುಕಿ ಕೊಂದಿದ್ದರು. ಕೇವಲ ಅಷ್ಟೇ ಅಲ್ಲ; ಅಂತಹ ಅಸಂತೃಪ್ತ ಆಕಾಂಕ್ಷೆಗಳ ಮನೋವಸ್ಥೆಯಲ್ಲಿ ಅವಳಿಗೆ ಅವರು ಅತ್ಯಂತ ಭಯಂಕರವಾದ ದೃಶ್ಯಗಳನ್ನು ತೋರಿಸಿದ್ದರಿಂದ ಅವಳಿಗೆ ಸಂಸಾರ ಜೀವನದ ವಿಷಯವಾಗಿಯೇ ಒಂದು ಅಪರಿಹಾರ್ಯವಾದ ಹೆದರಿಕೆ, ಜಿಗುಪ್ಸೆ ಉಂಟಾಗಿತ್ತು. ತವರುಮನೆಗೆ ಬಂದನಂತರ ದಿನದಿನವೂ ಅವರ ಉತ್ತರೋತ್ತರ ಅಧೋಗತಿಯ ಸುದ್ದಿಗಳೇ ಅವಳ ಕಿವಿಗೆ ಬಂದು ಮುಟ್ಟಿದವು. ಅವಳು ತುಟಿ ಪಿಟಕ್ಕೆನ್ನಲಿಲ್ಲ ಆದರೆ, 'ಇನ್ನುಮೇಲೆ ಮಾತ್ರ ನಾನು ಈ

ಮನುಷ್ಯನನ್ನನುಸರಿಸುವದು ಸಾಧ್ಯವಿಲ್ಲ, ಬೇಕೂ ಇಲ್ಲ. ಸ್ವಾವಲಂಬಿಯಾಗಿ ಜೀವನ ಸಾಗಿಸುವದರಲ್ಲಿಯೇ ಮನುಷ್ಯತ್ವವಡಗಿದೆ' ಎಂದು ಮನಸ್ಸಿನಲ್ಲಿ ನಿಶ್ಚಯ ಮಾಡಿಕೊಂಡಳು. ಆದರಿಂದ ಹೊಸ ಶಕ್ತಿಯೊಂದು ಮೈಗೂಡಿ ಬಂದಂತೆ ಅವಳಿಗನ್ನಿಸಿತು. ಆದರೂ ಮಧ್ಯೆ ಮಧ್ಯೆ ಬರುತ್ತಲಿದ್ದ ವಿನಾಯಕ ರಾಯರ ವಿಷಯಕವಾದ ತಿರಸ್ಕರಣೀಯವಾದ ವಾರ್ತೆಗಳಿಂದ ಅವಳಿಗೆ ತನ್ನನ್ನು ಗಡಗಡನೆ ಅಲುಗಿಸಿಬಿಟ್ಟಂತೆನಿಸುತ್ತಿತ್ತು. ಅವಳಿಗೇ ಆಗಲಿ, ಅವರಿಗೇ ಆಗಲಿ ಎಷ್ಟೇ ಬೇಡವಾಗಿದ್ದರೂ ಗಂಡ-ಹೆಂಡಿರ ಅವರ ಸಂಬಂಧ ಜಗಜ್ಜಾಹೀರವಾದುದಾಗಿತ್ತು. ಅವಳು ಸಹಸ್ರ, ಅಷ್ಟೇಕೆ ಹತ್ತು ಸಹಸ್ರ ಮೈಲು ದೂರ ಹೋಗಿದ್ದುಕೊಂಡರೂ, ಅವರೊಡನೆ ಎಷ್ಟೇ ನಿಸ್ಸಂಬಂಧ ತೋರಿಸಿದ್ದರೂ, ಅವಳ ದೇಹದಲ್ಲಿ ಜೀವವಿರುವ ವರೆಗೆ ಆ ಸಂಕಲ್ಪದ ಉಪಯೋಗವಾಗುವಂತಿರಲಿಲ್ಲ. ಸಹಸ್ರಾರು ಮೈಲುಗಳ ಆಚೆಗಿದ್ದರೂ ಶನಿಯ ಪೀಡೆಯನ್ನು ತಪ್ಪಿಸಲು ಭೂಮಿಗೆ ಆದೀತೆ!

ಅವಳ ಹೃದಯದೊಳಗೆ ನಡೆದಿದ್ದ ಜೀವನ್ಮರಣಗಳ ದ್ವಂದ್ವಯುದ್ಧ ಅತ್ಯಂತ ಘನಘೋರವಾದುದಾಗಿತ್ತು. ಮೃತ್ಯುಮುಖವಾಗಿದ್ದ ದೇಹವೊಂದರಲ್ಲಿ ಸಕಲ ಪ್ರಯತ್ನಗಳಿಂದ ಸಾಧಿಸಿ ಜೀವ ತುಂಬಿದಾಗ ಅದು, 'ಇಲ್ಲ, ಇನ್ನೂ ನನ್ನ ಅಂತವಾಗಿಲ್ಲ' ಎಂದು ಒದರಿ ಹೇಳಲು ಪ್ರಯತ್ನ ಪಡುತ್ತಿರುವಂತೆ ಅಚಲೆಯ ಸ್ಥಿತಿಯಾಗಿತ್ತು. ಅವಳು ತನ್ನನ್ನು ತಾನೇ ವಂಚಿಸಿಕೊಳ್ಳಲು ಉದ್ಯುಕ್ತಳಾಗಿದ್ದಳು: 'ಇಲ್ಲ, ನನ್ನ ಸಂಸಾರಸುಖದ ಸೌಧ ಹೋಮಾಗ್ನಿಯಲ್ಲಿ ಹುರುಪಳಿಸಿ ಹೋಗಿದ್ದರೂ, ನನ್ನ ಹೃದಯದ ಹೆಬ್ಬಾಗಿಲನ್ನು ನಾನು ಮುಚ್ಚಿಲ್ಲ. ಅದಿನ್ನೂ ಮೊದಲಿನಂತೆ ಸತ್ವಪೂರ್ಣವಾಗಿ ಇದೆ. ಜೀವನದಲ್ಲಿ ಚೈತನ್ಯದಾಯಿಯಾದುದು ಸಂಸಾರ ಮಾಡಿಕೊಂಡಿರುವದೊಂದೇ ಎಂದು ಯಾರು ಹೇಳುವರು ?....ಹಾಗಾದರೆ....ನನ್ನ ಪತಿ? ನನ್ನ ನನ್ನ ಮನೆಮಾರು, ಮಕ್ಕಳು ಮರಿ? ಇರದಿದ್ದರಿಲ್ಲ. ಆ ಸುಖದ ವಿಚಾರ ಬೇಡ ನಾನು ನನ್ನ ಆತ್ಮದ ಉನ್ನತಿಯನ್ನೆಸಗುವೆ; ವಿಕಾಸ ಸಾಧಿಸುವೆ. ನನ್ನ ಸುತ್ತುಮುತ್ತಲು ಇರುವ ಈ ಸಹಸ್ರಾರು ಕಂದಮ್ಮಗಳಿಲ್ಲವೇನು? ಅವರೇ ನನ್ನ ಮಕ್ಕಳು. ಕೇವಲ ನನ್ನಿಬ್ಬರು ಹೆತ್ತ ಮಕ್ಕಳನ್ನೇ ಕಟ್ಟಿಕೊಂಡು ಅವರಿಗಾಗಿ ಬದುಕಿರುವದಕ್ಕಿಂತ ಈ ಎಲ್ಲ—ನೂರಾರು, ಸಹಸ್ರಾರು ಮಕ್ಕ

ಳನ್ನು ನಾನು ಅಷ್ಟೇ ಮಮತೆಯಿಂದ ಅದೇಕೆ ನೋಡಲಾರೆ? ನಾನು, ನನ್ನ ಉದ್ಯೋಗ, ನನ್ನ ಸ್ವಾವಲಂಬನ, ನನ್ನ ಪರೋಪಕಾರ, ನನ್ನ ಕಾರುಣ್ಯ ಮಯತೆ—ಕೇವಲ ನನ್ನ ಸಂಸಾರದ ವಿಚಾರವನ್ನೇ ಮಾಡುತ್ತ ಕುಳ್ಳಿರುವ ದಕ್ಕೆ ವೇಳೆಯಾದರೂ ಎಲ್ಲಿ ನನಗೆ?' ಹೀಗೆ ತನ್ನನ್ನು ತಾನೇ ಸಾಂತ್ವನ ಗೊಳಿಸಿ ಧೈರ್ಯದ ದಾರಿಯಲ್ಲಿ ನಡೆದುಹೋಗಲುಪಕ್ರಮಿಸುತ್ತಿರುವಾಗ ಅವಳಲ್ಲಿ ಜೋರಿನಿಂದ ಹತ್ತಿಕ್ಕಲ್ಪಟ್ಟ, ಗುಪ್ತವಾಗಿ ಅಡಗಿಸಿಟ್ಟಿದ್ದ ಸಂಸಾರ ಸುಖದ ಆಕಾಂಕ್ಷೆ ಕಳ್ಳನಂತೆ ಅವಳನ್ನನುಸರಿಸಿ ಅನಿರೀಕ್ಷಿತವಾಗಿ ಅವಳನ್ನು ವಶಪಡಿಸಿಕೊಳ್ಳುವದು. ತಾಸು ತಾಸುಗಟ್ಟಲೆ ಅವಳು ತನ್ನ ಮನದಲ್ಲಿ ಈ ಕಣ್ಣುಮುಚ್ಚಾಲೆಯಾಡುವಳು. ಅವಳಿಗೆ ಅದರ ಕಲ್ಪನೆಯೂ ಬರುತ್ತಿರ ಲಿಲ್ಲ. ಕೂಡಲೆ ಅವಳು ಮೈಮೇಲೆ ಎಚ್ಚರ ಬಂದಂತಾಗಿ ತನ್ನಷ್ಟಕ್ಕೆ ತಾನೇ ಮೆಲುವಾಗಿ ನಗುವಳು, 'ಛೆ! ಇವು ಬಟ್ಟಬಯಲಿನಂತಾಗಿರುವ ಮನದ ವಿಚಾರಗಳು ಮಾತ್ರ. ಅವುಗಳಿಂದ ನನಗೆ ಆಗಬೇಕಾದುದೇನು?' ಮತ್ತೆ ಅದೇ ಅವಳು, ಅವಳ ಉದ್ಯೋಗ, ಅವಳ ಅಣ್ಣ, ಅವಳ ತಂಗಿ, ಅವಳ ತಂಗಿಯ ಸಂಸಾರ, ಅವಳ ಸುತ್ತಲಿನ ಚಿಕ್ಕ ಮಕ್ಕಳು. 'ಅಮ್ಮಮ್ಮಾ, ನನ್ನ ಮನರಂಜನೆಗೆ ಇಷ್ಟೆಲ್ಲ ಸಂಗತಿಗಳುಂಟಲ್ಲ! ಹಾಗಾದರೆ ಜೀವನದ ಈ ಮಹಾ ಸಮರದಲ್ಲಿ ಉತ್ಸಾಹದಿಂದ ಭಾಗಿಯಾಗಲಾರನೇ? ಏತ ಕ್ಕೆಂದು ಇದೆಲ್ಲ ತಳಮಳ? ಸಂಗಾತಿಯೊಬ್ಬನಿರಬೇಕೆಂದೆ? ಪತಿಯೊಬ್ಬ ನೆಂದೆ? ಅದು—ಆ ಪ್ರೇಮ? ಪ್ರೇಮವೆ ಅದು, ನಿಜವಾಗಿ? ದೈಹಿಕ ಕಾಮ! ನಶ್ವರ ಸುಖದ ಸೀಮೆಯನ್ನು ದಾಟಿ ವಿಜಯವನ್ನು ಸಂಪಾದಿಸ ಲಾರದೆ ನನ್ನ ಆತ್ಮ? ಅದೇಕಿಲ್ಲ?'

ಮರುಳೆ ಅಚಲಾ! ಉತ್ಸಾಹದ, ವೀರ್ಯ ವೃತ್ತಿಯ ಉನ್ಮತ್ತತೆ ಯಲ್ಲಿ ಅವಳಿಗೆ ಯಾವುದೂ ಅಸಾಧ್ಯವಾಗಿ ತೋರಿರಲಿಲ್ಲ! ಅಯ್ಯೋ ಹುಚ್ಚಿ ಅಚಲೆ! ದೇಹ ಮತ್ತು ಮನಸ್ಸುಗಳೆಂದರೆ ಬೇರೆ ಬೇರೆಯಾಗಿ ವಿಂಗಡಿಸ ಲ್ಪಟ್ಟ ಕೇವಲ ದಾನವ-ದೇವತೆಯರಿದ್ದಂತೆ ಎಂದು ಅವಳಿಗೆನ್ನಿಸುತ್ತಿತ್ತು. ಮನಸ್ಸು ಮತ್ತು ದೇಹದ ಪರಸ್ಪರ ಸಂಬಂಧದ ವಿಷಯದಲ್ಲಿ ಯಾರು ಏನೇ ಕಲ್ಪಿಸಿಕೊಂಡಿರಲಿ, ಅವೆರಡನ್ನು ವಿಂಗಡಿಸಲು ಎಷ್ಟೇ ಯತ್ನಿಸಲಿ, ಅಥವಾ

ಒಂದು ವೇಳೆ ಹಾಗೆ ಆದಂತೆ ಕಂಡರೂ ಅವೆರಡೂ ಒಂದೇ ಬಿಡಾರದಲ್ಲಿರು ವವೆಂಬುದರಲ್ಲಿ ಸಂಶಯವಿಲ್ಲ.

"ತಾಯಿಾ, ತಾಯಿಾ" ಬಾಬಾನ ಪ್ರೀತಿಯ ಕರೆ ಅವಳಿಗೆ ಕೇಳಿ ಬಂತು. ಬಿಟ್ಟುಕೊಟ್ಟಿದ್ದ ವಿಚಾರಗಳ ಕಡೆಗೆ ಉಪಹಾಸಪೂರ್ವಕವಾಗಿ ನೋಡುತ್ತ ಅವಳೆಂದಳು: 'ಎಂತಹ ಮಮತೆಯ ಮೂರ್ತಿ, ನನ್ನಣ್ಣ! ನನ್ನ ಜೀವನದ ಹೊಡೆದಾಟದಲ್ಲಿ ಅದೇಕೆ ನಾನು ಜಯಿಸಲಾರೆ?'

ಅವಳು ಓಡುತ್ತ ಬಾಗಿಲು ತೆರೆಯಲು ನಡೆದಳು. ಬಾಗಿಲು ತೆರೆಯು ತ್ತಿರುವಂತೆ ಅವಳು ಬಾಬಾನ ಬಾಯಿಂದ ಬಂದ ಶಬ್ದಗಳನ್ನು ಕೇಳಿದಳು. "ಏನಿಲ್ಲೆಂದರೂ ಏಳು ವರ್ಷಗಳ ಶಿಕ್ಷೆಯಾದರೂ ಆದೀತು" ಮತ್ತೊಬ್ಬ ರಾರೋ ಹೇಳಿ ಮುನ್ನಡೆದರು: "ಯೋಗ್ಯವೇ ಆಯ್ತು; ಇನ್ನೂ ಘಟಕಿ ಹೊಡೆಯಬೇಕು ಮೇಲೆ!"

ಅದು ಯಾರನ್ನು ಕುರಿತ ಮಾತಾಗಿತ್ತೆಂಬುದು ಅವಳಿಗೆ ತಿಳಿಯದಿರ ಲಿಲ್ಲ. ಆದರೆ ಅದನ್ನು ಅವಳು ಕೇಳಿಯೂ ಕೇಳದವಳಂತಿದ್ದಳು.

ಕೈಯೊಳಗಿನ ಹ್ಯಾಟನ್ನು ಮೆಲ್ಲಗೆ ಅಚಲೆಯ ಬೆನ್ನಿಗೆ ತಾಗಿಸಿ ಬಾಬಾ ಎಂದ: "ಏನಿದು, ಏನಿದು ಅಚಲಾ! ಎಷ್ಟು ಅತ್ತು ಅತ್ತು ಕಣ್ಣು ನೋಯಿಸಿಕೊಂಡಿರುವಿ?" ಅಚಲೆಯ ಹೃದಯವನ್ನು ಒಡೆದು ಹೋಗುವ ಅಳಲಿನ ಆಳವನ್ನವನು ಅರಿಯದವನಾಗಿದ್ದನೆಂತಲ್ಲ. ಆಕೆಯ ಕಣ್ಣು ಅವಳಿಗೆ ತಿಳಿಯದಂತೆ ಮತ್ತೆ ತುಂಬಿ ಬಂದವು. ಅವಳು ಹತ್ತಿರವಿದ್ದ ಕುರ್ಚಿಯ ಮೇಲೆ ಕುಳಿತಳು. ಅವನ ಕಂಠವೂ ತುಂಬಿ ಬಂದಿತ್ತು. ಆದರೆ ಅವನು ಧೀರವೃತ್ತಿಯ ಅವಳ ಅಣ್ಣನಾಗಿದ್ದ. ಚಿಕ್ಕ ಹುಡುಗಿಯಂತೆ ಅವಳ ಎರಡೂ ಭುಜಗಳನ್ನು ಹಿಡಿದು ಗಡಗಡನೆ ನಡುಗಿಸಿ, ಅವನೆಂದ: "ಛೀ, ಹುಚ್ಚಿ, ಅಳಬೇಕೇನು ಇದಕ್ಕೆಲ್ಲ? ಅಲ್ಲ, ಅವನ ವಿಷಯವಾಗಿ ಇಷ್ಟು ಮನಸ್ಸಿಗೆ ಹಚ್ಚಿಕೊಳ್ಳುವದಕ್ಕೆ ಅವನಿಗೆ ಬೆಲೆಯನ್ನಾದರೂ ಕೊಡುವ ದುಂಟೆ? ಹುಂ. ಏಳು, ಏಳು." ಅವನು ಉಗುಳು ನುಂಗಿ ತನ್ನ ದುಃಖ ತಡೆದುಕೊಂಡ. ಸೆರಗಿನಿಂದ ಕಣ್ಣೊರೆಸಿಕೊಳ್ಳುತ್ತ, ಹುಸಿ ನಗೆ ನಕ್ಕು "ಬಾಬಾ, ಚಹಾ ಆಯಿತೇನು?" ಎಂದಳು.

"ನಿನ್ನನ್ನು ಬಿಟ್ಟು...."

ಅಚಲೆ ತನ್ನಷ್ಟಕ್ಕೇ ಅಂದುಕೊಂಡಳು, 'ಮತ್ತೆ ಮಾಣಿಕ ಹೇಳುತ್ತಾಳೆ, 'ಬಾಬಾ, ಇನ್ನು ನಿನ್ನನ್ನು ಮರೆತೆ' ಎಂದು. ಏನೇ ಆದರೂ ಅವನು ನನ್ನವನೇ ಬಾಬಾ.' ಬಾಬಾ ಕೂಡ ತನ್ನಷ್ಟಕ್ಕೇ ಎಂದುಕೊಳ್ಳುತ್ತಲಿದ್ದ. 'ನನ್ನ ಯಾವುದೇ ಉದ್ಯೋಗವಿರಲಿ; ಅದು ಅಚಲೆಯನ್ನು ನನ್ನಿಂದ ದೂರವಾಗಿರಿಸಲಾರದು.'

೪

"ಇದೇನು ನನ್ನ ತಾಯಿ, ಯಾವಾಗಲೂ ತಿನ್ನುತ್ತಿರುವದಕ್ಕೆ ಬೇಕು" ಮಾಣಿಕಳು ಸ್ವಲ್ಪ ಬೇಸತ್ತು ನುಡಿದಳು. ಪುಟ್ಟ ಕುಂದೆಯನ್ನು ತೊಡೆಯ ಮೇಲೆ ಮಲಗಿಸಿಕೊಂಡು ಮಾಣಿಕ ಕುಳಿತಿದ್ದಳು. ತೀರ ಹಸಿದವರಂತೆ ಕುಂದೆ ಜೋರು ಜೋರಿನಿಂದ ತನ್ನ ಅನ್ನವನ್ನು ತಾಯಿಯ ದೇಹದೊಳಗಿಂದ ಹೀರಿಕೊಳ್ಳುತ್ತಲಿದ್ದಳು. ಅಚಲೆ ಶಾಂತವಾಗಿ ಕುಳಿತು, ಮಾಣಿಕಳ ಕಡೆಗೆ ದೃಷ್ಟಿಯಿಟ್ಟು ನೋಡುತ್ತಿದ್ದಳು. ಅವಳಿಗೆ ಮಾಣಿಕಳ ವಿಷಯವಾಗಿ ಒಂದು ತರದ ಸೂಕ್ಷ್ಮವಾದ ಅಸೂಯೆಯ ಭಾವನೆ ಉಂಟಾಗುತ್ತಿತ್ತು. ಅವಳದೇ ಮಾಂಸ-ಪಿಂಡಗಳಿಂದಾದ, ಅವಳದೇ ಭಾವನೆ-ಪ್ರವೃತ್ತಿಗಳನ್ನೊಳಗೊಂಡಿದ್ದ ಆ ಕೂಸನ್ನು ತೊಡೆಯ ಮೇಲಿಟ್ಟುಕೊಂಡು, ಅದರ ಮುಖದಲ್ಲಿ ತನ್ನ ಜೀವನದ ರಸವನ್ನು ಉಣಿಸುತ್ತಿರುವ ಮಾಣಿಕಳ ವಿಷಯವಾಗಿ ಅವಳಿಗೆ ಅಸೂಯೆಯ ಭಾವನೆಯುದಿಸಿತು.

'ಮಾಣಿಕಳೆಂದಾದರೂ ಸಾಯಲಿಕ್ಕೇ ಬೇಕು, ನಿಜ. ನಾನೂ ಎಂದಾದರೂ ಸಾಯುವವಳೇ, ಅದೂ ಅಷ್ಟೇ ನಿಜವಾದ ಮಾತು. ಆದರೆ ಮಾಣಿಕಳು ನಿಜವಾಗಿ ಜೀವಿಸಿದಳು; ನಿಜವಾಗಿ ಬದುಕಿದಳು. ಮತ್ತು ಜಗತ್ತಿನ ಮೇಲೆ ತನ್ನ ಅಳಿಸಲಾಗದ ಮುದ್ರೆಯನ್ನೊತ್ತಿದಳು. ಮಾಣಿಕಳೊಬ್ಬಳು ಇಲ್ಲದಂತಾದರೂ ಅವಳ ಜೀವನದ ರಸಗಂಗೆ ಶಾಮು, ಕುಂದೆಯರ ರೂಪದಿಂದ ಅವ್ಯಾಹತವಾಗಿ ಹರಿಯುತ್ತಲುಳಿಯುವದು. ಆದರೆ ನಾನು? ನನ್ನ ಬುದ್ಧಿ, ನನ್ನ ಶಕ್ತಿ, ನನ್ನ ರೂಪು, ನನ್ನ ಭಾವನೆ, ವಿಚಾರ, ಮನಃಪ್ರವೃತ್ತಿ ಇವುಗಳಿಗೆ ದಾರಿ ಯಾವುದು? ಅವುಗಳಿಗೆ ಉಳಿಗಾಲವೆಲ್ಲಿಯದು?

ನಾನೊಮ್ಮೆ ತೀರಿದೆನೆಂದರೆ ನನ್ನ ಸರ್ವಸ್ವವೂ ಲಯವಾಗುವದು. ಹಾಗಾದರೆ ಈಗಲಾದರೂ ನಾನು ಜೀವಿಸಿರುವದೇತಕ್ಕೆ? ನನ್ನೊಂದು ಅಣುವಿಗೂ ನನ್ನನಂತರ ಜೀವಿಸಿರಲು ಸಾಧ್ಯವಿಲ್ಲವಾದರೆ ನಾನು ಜೀವಿಸಿರುವದರಲ್ಲಿ ಅರ್ಥವಾದರೂ ಏನು?'

ಅವಳಲ್ಲಿ ಒಂದು ಶಾಂತಗೊಳಿಸಲಾರದ ಹಸಿವು ಜಾಗೃತವಾಗಿತ್ತು; ಅವಳ ಅಂತರಂಗದಲ್ಲಿ ತಳಮಳದ ಬೇಗೆ ಹೊತ್ತಿಕೊಂಡಿತ್ತು. 'ನಾನು— ನಾನು ಬದುಕಲಿಕ್ಕೇ ಬೇಕು. ನನ್ನದೆನ್ನುವದನ್ನು ಜಗತ್ತಿನಲ್ಲಿ ಬಿಟ್ಟು ಹೋಗುವಂತಾಗಬೇಕು. ಜಗತ್ತಿನಲ್ಲಿ ಒಂದಾನೊಂದು ಕಾಲದಲ್ಲಿ ಅಚಲೆ ಜೀವಿಸಿ ಹೋದಳು, ಎಂದಿಷ್ಟೇ ಅಲ್ಲ. ಅಚಲೆಯ ವಂಶ ಜೀವಿಸಿರಬೇಕು. ನನ್ನದೇ ಮಾಂಸ-ಪಿಂಡಗಳ, ನನ್ನವೇ ಭಾವನೆ-ಪ್ರವೃತ್ತಿಗಳ ಪ್ರತಿಮೂರ್ತಿಯೊಂದರ ಪ್ರತಿಷ್ಠಾಪನೆಯಾಗಲೇ ಬೇಕು. ಆದರೆ........ಅದು ಸಂಭವಿಸುವದಾದರೂ ಹೇಗೆ?' ವಿನಾಯಕರಾಯರ ತಿರಸ್ಕರಣೀಯವಾದ ಆಕೃತಿ ಅವಳಿಗೆ ಕಾಣಿಸಲಾರಂಭಿಸಿತು. ಏಳು ವರ್ಷಗಳ ದೀರ್ಘ ಕಾರಾಗ್ರಹವಾಸದಲ್ಲಿ ತಳ್ಳಲ್ಪಟ್ಟಿದ್ದ ವಿನಾಯಕರಾಯರ ಹೀನ ಲೀಲೆಗಳ ಅಸಹ್ಯ ಚಿತ್ರಗಳು ಅವಳ ಮುಂದೆ ಸ್ವೈರ ನೃತ್ಯಕ್ಕಾರಂಭಿಸಿದವು. 'ಬೇಡ, ಬೇಡ. ಅಚಲೆಯ ವಂಶ ಕೇವಲ ಅಚಲೆಯದಾಗಿಯೆ ಉಳಿಯದು!' ಅವಳು ದೀರ್ಘವಾದ ಉಸಿರೊಂದನ್ನು ಬಿಟ್ಟಳು.

"ನೋಡು, ನೋಡಿದ್ಯಾ ಇವಳು ಮಾಡುವದನ್ನು" ಮಾಣಿಕಳು ಕುಂದೆಗೆ ಮೆಲ್ಲಗೆ ಒಂದು ಪೆಟ್ಟು ಕೊಟ್ಟು ಹೇಳಿದಳು. ಅಚಲೆಯ ವಿಚಾರ ತಂದ್ರಿಗೆ ಅದರಿಂದ ಭಂಗ ಬಂದಿತು.

"ಈಗಾಗಲೇ ಇಷ್ಟು ಬೇಸರವಾಯಿತೇನು? ಹಾಗಾದರೆ ಕೊಟ್ಟು ಬಿಡು ನನಗವಳನ್ನು."

"ತೆಗೆದುಕೊಂಡು ಹೋಗಿಬಿಡು" ಮಾಣಿಕ ಪ್ರೀತಿಯಿಂದ ಕೈಯಾಡಿಸುತ್ತ ನುಡಿದಳು. ಪುಟ್ಟ ಕುಂದೆಯ ಮೈಮೇಲೆ ಎದ್ದ ರೋಮಾಂಚನಗಳು ಉತ್ತರ ಕೊಟ್ಟವು. 'ಅವ್ವಾ, ಹೀಗೆಲ್ಲ ಹೇಳುವದರಿಂದೆಲ್ಲಿಯಾದರೂ ಮಕ್ಕಳು ದೊಡ್ಡವಾಗುತ್ತವೆಯೇ?'

ಮಮತೆಯಿಂದ ಉಚ್ಚರಿಸಿದ, ಆ ಶಬ್ದಗಳು ಪ್ರತಿಬಿಂಬಿಸಿದ ಸೂಕ್ಷ್ಮ ಭಾವವನ್ನು ಅವಲೋಕಿಸಿ ಅಚಲೆಯ ಹೃದಯದಲ್ಲಿ ಕಲಮಲವೆದ್ದಿತು.

"ಹೌದು, ಈಗೆಲ್ಲ ಕೊಟ್ಟೀರಿ 'ತೊಗೊಂಡು ಹೋಗು' ಎಂದು; ಆದರೆ ಅರ್ಧ ತಾಸಿನಲ್ಲಿ ನೀನೇ ಓಡಿ ಬಂದೀ 'ನನ್ನ ಮಗುವೆಲ್ಲಿ' ಎಂದು ಅರಸುತ್ತ."

"ಕುಂದಾ, ಹೋಗುವಿಯೇನು ಅಬಚಿಯ ಸಂಗಡ?" ಮಾಣಿಕ ಕುಂದೆಯನ್ನು ಕೇಳಿದಳು. ಕುಂದೆ ಮೈಯಲುಗಿಸಿ ಮತ್ತಿಷ್ಟು ತಾಯಿಯ ಶರೀರಕ್ಕೆ ಅಂಟಿಕೊಂಡು ಜೋರು ಜೋರಾಗಿ ಸ್ನೇಹಪಾನಕ್ಕಾರಂಭಿಸಿದಳು. ತಾಯಿ-ಮಗುವಿನ ನಡುವಿನ ಆ ಕಾಣದ, ಸೂಕ್ಷ್ಮವಾದ ಆದರೆ ಬಿಗಿಯಾದ ಪ್ರೇಮಬಂಧನ ಅಚಲೆಯ ಮನವನ್ನು ಸೆರೆಹಿಡಿಯಿತು.

ಶಾಮ ಓಡುತ್ತ ಬಂದು ತಾಯಿಯ ಹತ್ತಿರ ಕುಳಿತ. ಕುಂದೆ ಅವಳ ತೊಡೆಯ ಮೇಲಿರುವದನ್ನು ಕಂಡು ಅವನ ಪಿತ್ತ ಕೆರಳಿತು. 'ಯಾವಾಗ್ಗೆ ನೋಡಿದರೂ ಆಗ ಕುಂದಾ, ಕುಂದಾ! ಈ ಕುಂದೆಯೇ ತನ್ನನ್ನು ತಾಯಿಯಿಂದ ದೂರವಾಗಿಸಿದವಳು.' ಅವಳು ಅವನಿಗೆಷ್ಟೂ ಮನಸ್ಸಿಗೆ ಬರುತ್ತಿರಲಿಲ್ಲ.

"ಅವ್ವಾ...."

"ಏನು?"

"ನನ್ನ ಕಲಕೊ."

"ಮತ್ತೆ ಕುಂದಾ? ಅವಳನ್ನು ಕೆಳಗಿಳಿಸಬೇಕೇನು?" ಮಾಣಿಕ ಅವನ ಬೆನ್ನ ಮೇಲೆ ಕೈಯಾಡಿಸಿದಳು. ಅವನಿಗೆಷ್ಟೂ ಸಮಾಧಾನವೆನಿಸಲಿಲ್ಲ. ತಾಯಿಯ ಕೊರಳಿಗೆ ತನ್ನ ಕೈಯ ಮಾಲೆಯನ್ನು ಹಾಕಿ ಅವಳಿಗೆ ಹೊಂದಿಕೊಂಡಿರಬೇಕೆಂದು ಅವನಿಗೆ ಅತೀವ ಇಚ್ಛೆಯಾಯಿತು. ಅವನು ಬಂದು ಕುಂದೆಯನ್ನು ಕಿತ್ತೊಗೆಯಲು ಪ್ರಾರಂಭಿಸಿದ.

"ಏ, ಇದೇನೋ ಶಾಮಾ, ನಿನ್ನ ಕಾಟ?"

ಅವನಿಗೆ ಅವಮಾನವೆನಿಸಿತು; ಅದಕ್ಕೆ ಕುಂದೆಯೇ ಕಾರಣಳು. ಅವನು ತಾಯಿಯ ಹತ್ತಿರ ಕುಳಿತು ಕುಂದೆಯ ಕಾಲು ಹಿಡಿದು ಜಗ್ಗಿದ. "ಚ್, ಚ್, ಚ್ ಇದೇನೋ ಇದು?" ಎನ್ನುತ್ತ ಮಾಣಿಕ ಅವನ ಕೈ

ತೆಗೆದು ಬದಿಗೆ ಸರಿಸಿದಳು. ಈ ಕುಂದೆಯ ಕಡೆಗೇ ಎಲ್ಲ ಅವ್ವನ ಲಕ್ಷ್ಯ. ಮಾಣಿಕ ಸಣ್ಣದೊಂದು ಹಾಸಿಗೆಯ ಮೇಲೆ ಕುಂದೆಯನ್ನು ಮಲಗಿಸಿದಳು.

"ಇನ್ನು ಇಲ್ಲಿ ಆಡಬೇಕು, ಅಳುವ ಹಾಗಿಲ್ಲ, ಜ್ಞಂ!"

ಕುಂದಾ ಹುಂಕಾರ ಮಾಡಿದಳು. ಮಾಣಿಕಳಿಗೆ ಆದರ ಅರ್ಥ ತಿಳಿದಿತ್ತು.

"ಹುಂ. ಅಳೋ ಹಂಗಿಲ್ಲ ಹೌದಲ್ಲೋ, ಪಾಪಾ?"

'ಇಲ್ಲ' ಎಂದು ಅನ್ನುವದಕ್ಕೇನೋ ಎನ್ನುವಂತೆ ಕುಂದೆ ತನ್ನ ಕೈಕಾಲುಗಳನ್ನು ಒಂದು ಸಲ ಜಾಡಿಸಿ ಮೇಲೆ ಸರಿಯುಲಾರಂಭಿಸಿದಳು.

"ಈಗೇನು ತೀರ ಹುರುಪಿನಲ್ಲಿದ್ದಾರೆ, ಅವ್ವನವರು"—ಅವಳ ಕಡೆಗೆ ಕುತೂಹಲ ಬೆರೆತ ನೋಟದಿಂದ ನೋಡುತ್ತ ಅಚಲೆಯೆಂದಳು.

"ಇಲ್ಲದೆ ಏನು. ತುಂಬಿದೆಯಲ್ಲ ಹೊಟ್ಟೆಯ ಪಡಗ!" ಎನ್ನುತ್ತ ಮಾಣಿಕ ಕೆಲಸಕ್ಕೆ ಎದ್ದಳು.

"ಶಾಮಾ, ತಾಯಿಯ ಸಂಗಡ ಆಟವಾಡಬೇಕು, ಹಂ. ಅವಳನ್ನು ಮುಟ್ಟುವ ಹಾಗಿಲ್ಲ, ಮತ್ತೆ!"

"ಇಯ್ಯಾ" ಎನ್ನುತ್ತ ಶಾಮು ಅವಳ ಹತ್ತಿರ ಆಸನ ಹಾಕಿ ಕುಳಿತ. ಮಾಣಿಕ ವೈ ತೊಳೆಯುವದಕ್ಕೆಂದು ನಡೆದಳು. ಕೈಲಿದ್ದ ಪುಸ್ತಕದ ಹಾಳೆಗಳನ್ನು ಅಚಲಾ ತಿರುವಲಾರಂಭಿಸಿದಳು.

ಶಾಮು ಅದೆಷ್ಟೋ ವೇಳೆ ಕುಂದೆಯ ಕಡೆಗೆ ನೋಡುತ್ತಲಿದ್ದ. ಎದ್ದು ಓಡಾಡಿ ಮಾತನಾಡಲು ಬರುತ್ತಿದ್ದ ಶಾಮುನಿಗೆ ಕುಂದಾ ಹೀಗೇಕೆ ಹುಚ್ಚಿಯ ಹಾಗೆ ಕೈಕಾಲು ಅಲುಗಾಡಿಸುತ್ತ ಬಿದ್ದಿರುತ್ತಾಳೆ—ಎನ್ನಿಸುತ್ತಿತ್ತು. ಕುಂದೆ ಜೋರಿನಿಂದ ಕೈಕಾಲು ಬಡಿಯುತ್ತ ಕಿಟಕಿಯಿಂದ ಬರುತ್ತಿದ್ದ ಪ್ರಕಾಶದ ಕಡೆಗೆ ತಿರುಗಿದಳು. ಅವಳ ಕೈಕಾಲುಗಳ ಗತಿ ಮಂದವಾಯಿತು. ಕಣ್ಣುಗಳು ಪ್ರಕಾಶವನ್ನು ದೃಷ್ಟಿಸಿ ನೋಡಲಾರಂಭಿಸಿದವು. ಅವಳು ಸೂಕ್ಷ್ಮವಾಗಿ ನಿರುಕಿಸಿ ನೋಡಲಾರಂಭಿಸಿದಳು. ಹಗಲು-ರಾತ್ರಿಗಳೆನ್ನದೆ ಸತತವಾಗಿ ಒಂಬತ್ತು ತಿಂಗಳುಗಳವರೆಗೆ ತಾನನುಭೋಗಿಸಿದ್ದ ಮಾತೆಯ ಉದರದ ಅಜ್ಞಾತವಾಸದ ವಿಷಯವಾಗಿ ವಿಚಾರಮಾಡುವದನ್ನು ಅವಳು ಬಿಟ್ಟುಬಿಟ್ಟಿದ್ದಳು. ಆ ಅಜ್ಞಾತ ಅಂಧಃಕಾರದೊಳಗಿಂದ ಎದ್ದು ಬಂದದ್ದರಿಂದ ಕಣ್ಣು

ಕುಕ್ಕಿ ಹೋಗಿದ್ದ ಕುಂದೆ ಸ್ಥಿರ ದೃಷ್ಟಿಯಿಂದ ಆ ಪ್ರಕಾಶದ ಕಡೆಗೆ ನೋಡುತ್ತಲಿದ್ದಳು. ಮಧ್ಯದಲ್ಲಿಯೆ ಅವಳು 'ಹುಂ'ಕಾರ ಮಾಡಿದಳು. 'ಇದೆ, ಇದೆ. ಜಗತ್ತಿನಲ್ಲಿ ನಾನಾ ವಿಧದ ವೈಚಿತ್ರ್ಯವಿದೆ. ಪ್ರಕಾಶವೂ ಇದೆ. ನಾನು ಅದನ್ನೆಲ್ಲ ಗೊತ್ತುಹಚ್ಚುವೆನು' ಎಂದು ಅವಳು ತನ್ನಷ್ಟಕ್ಕೆ ತಾನೆ ಹೇಳಿಕೊಳ್ಳುವಂತಿತ್ತು—ಆ ದೃಷ್ಟಿ!

ಅವಳ ಸ್ಥಿರವಾಗಿದ್ದ ದೃಷ್ಟಿಯ ಕಡೆಗೆ ಶಾಮ ದಿಟ್ಟಿಯಿಟ್ಟು ನೋಡುತ್ತಿದ್ದ. ಕುಂದೆಯೆಂದರೆ ಇದೇನು ಎನ್ನುವದು ಅವನಿಗೆ ತಿಳಿಯುತ್ತಿರಲಿಲ್ಲ. 'ಹೀಗೇನು ನೋಡುತ್ತಿದೆ ಇದು?' ಅವನು ನೆಟ್ಟಗೆ ನಟ್ಟು ನಿಂತ ಅವಳ ಕಣ್ಣುಗಳಲ್ಲಿ ಬೆರಳು ಹಾಕಿ ನೋಡಿದ. ಕುಂದೆ ಸಂಕಟಪಟ್ಟು ಚೀರಲಾರಂಭಿಸಿದಳು. ಆಗ ಮಾತ್ರ ಅವನಿಗೆ ಅವಳ ಸಾಮರ್ಥ್ಯದ ಕಲ್ಪನೆಯಾಯಿತು. ಅವನು ತನ್ನ ಪುಟ್ಟ ಕೈಯನ್ನು ಅವಳ ಬಾಯಿಗಿಟ್ಟು ಅವಳ ಅಳುವನ್ನು ಗಟ್ಟಿಯಾಗಿ ಒತ್ತಿ ಹಿಡಿದು ನಿಲ್ಲಿಸಿದ. ಮೌನವಾಗಿದ್ದವರನ್ನು ಚುಚ್ಚುವುದು, ಮಾತನಾಡುವವರ ಬಾಯನ್ನು ಬಿಗಿಯಲೆಳಸುವ ಮಾನವ ಪ್ರಾಣಿಗಳ ವಿಚಿತ್ರ ಮನರಂಜನೆಯ ಸಾಧನವನ್ನವನೂ ಉಪಯೋಗಿಸಲಾರಂಭಿಸಿದ್ದ. ಅರ್ಧಕ್ಕೇ ಜೋರಿನಿಂದ ಅಳು ತಡೆದು ನಿಲ್ಲಿಸಲ್ಪಟ್ಟದ್ದರಿಂದ ಕುಂದೆಯ ಮುಖ ಆರಕ್ತವಾಗಿತ್ತು. ಅಚಲಾ ಮಾಣಿಕರಿಬ್ಬರೂ ಓಡಿ ಬಂದರು.

"ಶಾಮಾ, ಏನು ಮಾಡಿದೆ ಹೇಳು? ಚಿವುಟಿದೆಯೋ, ಕಡಿದೆಯೋ? ಮಾಡಿದೆಯಾದರೂ ಏನು?" ಎಂದು ಅವನ ಬೆನ್ನಿಗೊಂದು ಪೆಟ್ಟು ಹಾಕುತ್ತ ಮಾಣಿಕ ಕೇಳಿದಳು. ಶಾಮ ಅಪರಾಧಿಯಂತೆ ಮುಖ ಮಾಡಿ ನಿಂತಿದ್ದ. ಆದರೆ ಕುಂದೆಯ ವಿಷಯವಾಗಿದ್ದ ಅವನ ಮತ್ಸರ ಅದರಿಂದ ಹೆಚ್ಚಾಗಿಯೆ ಇತ್ತು.

'ಇವಳೇ ನನ್ನನ್ನು ತಾಯಿಯಿಂದ ದೂರ ಮಾಡಿದವಳು. ಈಗ ಅವಳಿಗೆ ಕುಂದೆ ಮಾತ್ರ ಬೇಕು.' ಅವನಿಗೆ ಕುಂದೆಯ ವಿಷಯವಾಗಿ ತಿರಸ್ಕಾರ ಉಂಟಾಯಿತು. ಅಚಲೆ ಅವನನ್ನು ಬಳಿಗೆ ಕರೆದುಕೊಂಡಳು.

"ಶಾಮಾ, ಹಾಗೆಲ್ಲ ಮಾಡಬಾರದು. 'ತಾಯಿ' ನಮ್ಮವಳೇ ಅಲ್ಲವೇನು ಮತ್ತೆ?" ಅವನು ಜೋರಿನಿಂದ ಗೋಣು ಅಲ್ಲಾಡಿಸಿ "ಅಲ್ಲ" ಎಂದು ಹೇಳಿದ.

" ಹಾಗಾದರೆ ಅವಳನ್ನು ರಾಜಾಯಿಗೆ ಕೊಟ್ಟುಬಿಡಲೇ ? "

" ಕೊಡು " ಮುಖವನ್ನು ಅಲುಗಾಡಿಸುತ್ತ ಅವನು ನುಡಿದ.

" ನಿಲ್ಲು, ಹಾಗಾದರೆ. ರಾಜಾಯಿೞಾ ! ಏ ರಾಜಾಯಿೞಾ ! " ಕುಂದೆಯನ್ನು ಕೊಟ್ಟೇ ಬಿಡುವ ಸೋಗು ಮಾಡಿ ಮಾಣಿಕ ಮುಸುರೆ ತಿಕ್ಕುವ ಹೆಣ್ಣುಮಗಳನ್ನು ಕೂಗಿದಳು.

" ರಾಜಾಯಿೞಾ, ಕುಂದಾ ನಿನಗೆ ಬೇಕಲ್ಲವೆ ? "

" ಹೌದ್ರಿ, ಅವ್ವಾ. ಅವರಂದ್ರ ನನಗೆ ಭಾಳ ಜೀವ, ಕೊಡ್ರಿ. ನಮ್ಮ ಬಾಳಾನ ಸಂಗಡ ಆಡಾಕ ಆಗತೇತಿ, ಕೊಡ್ರಿ ಅವರನ್ನ, ಇಲ್ಲೆ " ಇಂತಹ ವಿನೋದ ಪ್ರಸಂಗಗಳಲ್ಲಿ ಬೆರೆಯುವ ಸಹಜ ಸ್ವಭಾವದ ರಾಜಾಯಿ ನುಡಿದಳು.

" ಒಳ್ಳೇದು ಹಾಗಾದರೆ, ತೆಗೆದುಕೊಂಡು ಹೋಗು, ಇವಳನ್ನು" ಮಾಣಿಕ ಕುಂದೆಯನ್ನು ರಾಜಾಯಿಯ ಕೈಗೆ ಕೊಟ್ಟಳು. ' ನಿಜವಾಗಿಯೂ ಕರೆದುಕೊಂಡೇ ಹೋಗುವಳೆಂದು ತೋರುತ್ತದೆ ' ಶಾಮನಿಗೆನಿಸಿತು.

ಅಜಿ ನಮ್ಮವಳು, ಬಾಬಾ ನಮ್ಮವರು, ಅವ್ವ ನಮ್ಮವಳು. ಕುಂದಾ? ಆಕೆಯೂ ನಮ್ಮವಳು. ಎಲ್ಲರೂ ನಮ್ಮವರು. ತಮ್ಮ ಮನೆಯವಳೆ ಆದ ಕುಂದೆಯನ್ನು ಹೆರವರವಳಾದ ರಾಜಾಯಿ ಒಯ್ಯುವದೆಂದರೇನು ? ಅವನಿಗೆ ಅದು ತಿಳಿಯದಾಯಿತು. ಅವನು ಅವಳ ಕಡೆಗೇ ನೋಡುತ್ತಲಿದ್ದ. ಅವಳ ಮೇಲೆ ಅವನಿಗೆ ಅನೇಕ ಸಲ ಕೋಪವುಂಟಾಗುತ್ತಿದ್ದಿತಾದರೂ, ಹುಚ್ಚುಚ್ಚಾಕಾರವಾಗಿ ಕೈಕಾಲು ತಿರುವಿ, ಮುಖ ಸೊಟ್ಟಗೆ ಮಾಡಿ ಆಟವಾಡುವ ಕುಂದೆ ಅವನ ಮನರಂಜನೆಯ ಸಾಧನವಾಗಿದ್ದಳು. ಅವಳು ಹಟ ಮಾಡಿ ಅಳಹತ್ತಿದಾಗ ಅನೇಕ ಸಾರೆ ಅವನು ಅವಳ ತೊಟ್ಟಿಲ ಹತ್ತಿರ ಹೋಗಿ, ' ಅಳಬಾರ್ದ್ದು ಪಾಪಾ ' ಎಂದು ಪ್ರೀತಿಯಿಂದ ಸಮಾಧಾನ ಮಾಡಿದ್ದ. ಕೈಗೆ ದೊರೆತ ಗಂಟೆ, ತಾಟು, ಬಟ್ಟಲ ಅಥವಾ ಮತ್ತೇನನ್ನಾದರೂ ತೆಗೆದುಕೊಂಡು ಬಾರಿಸಿ, ಥಡಪಡ ಮಾಡಿ, ಸಪ್ಪಳ ಮಾಡಿ, ಕುಣಿದು ಅವಳನ್ನು ಸುಮ್ಮನಿರಿಸುವ ಪ್ರಯತ್ನಗಳನ್ನವನು ಅನೇಕ ಸಲ ಮಾಡಿದ್ದ. ಅವಳೂ ಆಗೆಲ್ಲ ಹರ್ಷಗೊಂಡು ಅವನನ್ನು ನೋಡುತ್ತ ಸುಮ್ಮನಾಗಿರುತ್ತಿದ್ದಳು.

"ಹಾಂಗಾರ ಕರಕೊಂಡ್ಹ ಹೋಗ್ರೀನರಿ" ಎನ್ನುತ್ತ ರಾಜಾಯಿ ಬಾಗಿಲ ಮರೆಯಾದಳು. ಶಾಮುನಿಗೆ ಅಳು ಬಂದಿತು.

"ಅಬಚೀ" ಎಂದು ತನ್ನ ಒಂಟಿ ಶಬ್ದದ ಮಾತಿನಿಂದ ನಡೆದುಹೋದ ಘಟನೆಯ ವಿಷಯವಾಗಿ ಅವನು ತನ್ನ ಆಪ್ತಾಲೋಚಕಳಲ್ಲಿ ಸಲಹೆ ಕೇಳಿದ.

"ಅಬಚೀ ಅಂತೆ, ಅಬಚೀ? ಕೂಸಿನ ಕಣ್ಣಿನಲ್ಲಿ ಬೊಟ್ಟು ಯಾರು ಹಾಕಿದರೊ, ಟೊಣಪಾ? ಆಕೆಯ ಕಾಲು ಹಿಡಿದು ಯಾಕೆ ಜಗ್ಗಿದೆ? ಹೇಳು."

'ಏನೆಲ್ಲ ಮಾಡಿದೆ, ನಿಜ. ಆದರೆ' ಎನ್ನುವಂತೆ ಹತಬುದ್ಧನಂತೆ ಅವನು ಅವಳ ಕಡೆಗೆ ನೋಡಲಾರಂಭಿಸಿದ. ಅವನ ಆ ಅಸಹಾಯತೆಯ ನೋಟವನ್ನು ನೋಡಿ ಅಚಲೆಗೆ ನಗು ಬಂದಿತು. ಆದರೆ ಅದನ್ನು ಒಳಗಿಂದೊಳಗೆ ತಡೆಹಿಡಿದು ಅವಳೆಂದಳು: "ಇನ್ನೊಮ್ಮೆ ಮಾಡುವದಿಲ್ಲ ಅಹುದಲ್ಲೊ?"

"ಇಲ್ಲ, ಇಲ್ಲ" ತೀರ ಹತಾಶನಾಗಿ ಶಾಮು ಎರಡೆರಡು ಸಾರೆ ಒಪ್ಪಿಗೆ ಕೊಟ್ಟ. ಮಾಣಿಕಳಿಗೆ ನಗೆ ಬಂದಿತು.

"ರಾಜಾಯಿ, ಅದ್ಯಾಕೇ ನಮ್ಮ ಶಾಮುನ ಕುಂದಾನ್ನ ಕರೆದುಕೊಂಡು ಹೋಗುತ್ತೀ? ಒಳ್ಳೆಯವಳಿದ್ದೀಯಲ್ಲ! ಹೂಂ. ಬೇಗ ಕರೆದುಕೊಂಡು ಬಾ ಅವಳನ್ನಿಲ್ಲಿ, ನೋಡೋಣ!"

ರಾಜಾಯಿ ಬಾಗಿಲ ಮರೆಯಿಂದ ಹೊರಗೆ ಬಂದಳು. ಘೋರ ನಿರಾಶೆಯೊಳಗಿಂದ ಆಸೆಯ ಕಿರಣವೊಂದು ಕಂಡುಬಂದಿತು. ರಾಜಾಯಿಯ ಮಗ್ಗುಲಲ್ಲಿ ಕುಳಿತ ಕುಂದೆಯ ಕಡೆಗೆ ಶಾಮು ಸ್ತಿಮಿತ ನೇತ್ರಗಳಿಂದ ನೋಡುತ್ತಲಿದ್ದ.

ಎರಡೂ ಹುಡುಗರ ಇಂತಹ ಅಸಂಖ್ಯ ಆಟಪಾಟಗಳಲ್ಲಿ ಮಾಣಿಕಳ ವೇಳೆ ಕಳೆಯುತ್ತಿತ್ತು. ಅವಳ ಇಡೀ ದಿವಸವೆಲ್ಲ—ಇಂತಹ ಮನರಂಜನೆ ನಡೆದೇ ಇರುತ್ತಿತ್ತು. ಶಾಮು ಮುಂಜಾನೆ ಎದ್ದ, ಕುಂದಾ ಎದ್ದಳು. ಅವರ ಅಳುವದು, ಅವರ ಜಗಳ, ಅವರ ಮೈ ತೊಳೆಸುವದು, ಅವರ ತಿನಿಸು ಉಣಿಸುವದು, ಅವರ ನಿದ್ರೆ! ಅವಳ ದೈನಂದಿನ ಕ್ರಮದಲ್ಲಿ ಈ ಎರಡು

ಚಿಕ್ಕ ಜೀವಿಗಳಿಗೆ ಅದೆಂತಹ ಸ್ಥಾನ! ಚಿಕ್ಕ ಮಕ್ಕಳನ್ನು ಮನಮುಟ್ಟಿ ಪ್ರೀತಿಸುತ್ತಿದ್ದ ಅಚಲೆ ಬಿಡುಗಣ್ಣಿನಿಂದ ಎಲ್ಲವನ್ನೂ ನೋಡುತ್ತಿದ್ದಳು. ತನ್ನಲ್ಲಿ ತಾನೇ ಹುದುಗಿಕೊಂಡು ಅವಳು ತನ್ನ ಹೃದಯದ ಹಸಿವೆಯನ್ನು ಕೊಲ್ಲಲೆಳಸುತ್ತಿದ್ದಳು.

೫

'ತಾಯಿಯ ಪ್ರೇಮ ಅವಳಲ್ಲ ಮಕ್ಕಳ ಮೇಲೆಯೂ ಸಮನಾಗಿಯೆ ಇರುವದೆ?' ಹೀಗೆಂದು ಯಾವಳೊಬ್ಬ ಮಾತೆಯನ್ನು ಕೇಳಿದರೆ ಅವಳು, 'ಹೌದು. ಸಮನಾಗಿಯೆ ಇರುತ್ತದೆ' ಎಂದು ಉತ್ತರಿಸದಿರಲಾರಳು. ಅವಳಿಗೆ ಅದರಲ್ಲಿ ಹೆಚ್ಚುಕಡಿಮೆಗಳಿಲ್ಲ. ಆದರೆ ತಾಯಿಯ ಒಲವಿನ ಛತ್ರದ ನೆಳಲಿನ ಕೆಳಗೆ ಆಸರ ಪಡೆದ ಆ ಜೀವಗಳಿಗೆ ಅದರ ರೀತಿ ತಿಳಿಯುವದುಂಟು. ಕೆಲವರು ಆ ಛತ್ರದ ಮಧ್ಯದಲ್ಲಿ ಇದ್ದುಕೊಂಡು ಅದರ ದಟ್ಟವಾದ ತಂಪು ನೆಳಲಿನಲ್ಲಿರಬಹುದು, ಮತ್ತೆ ಕೆಲವರು ಆ ನೆಳಲಿನ ಅಂಚಿನಲ್ಲಿರುವದರಿಂದ ಆ ಪ್ರೇಮದ ಸ್ವಲ್ಪ ಮಾತ್ರ ತಂಪು, ಸುಖ-ಸಮಾಧಾನ ಅವರಿಗೆ ಲಭಿಸೀತು. ಆದರೆ ಆ ಮಾತಾಯಿ ಯಾರೊಬ್ಬರ ಉಣ್ಣು ತಿನ್ನುವದರಲ್ಲಿ ಪಕ್ಷಪಾತ ಮಾಡುವಳೆಂದಲ್ಲ; ಹಾಗೆಂದಿಗೂ ಆಗುವದೇ ಇಲ್ಲ. ತಿನ್ನುವದು, ಉಡಿಸುವದು, ಹೊಚ್ಚುವದು, ಮಾತು —ಯಾವುದರಲ್ಲಿಯೂ ಅವಳು ಭೇದ ಭಾವ ತೋರುವದಿಲ್ಲ. ಬಹಿರುಪಚಾರಗಳಲ್ಲಿ ಅಂತರವಿರುವದೇ ಇಲ್ಲ. ಆದರೂ ಅವಳ ಎಳೆತ ಯಾರ ಕಡೆಗೆ ಹೆಚ್ಚಾಗಿದೆಯೆನ್ನುವದು ಅವಳ ಪ್ರೀತಿಯ ರಸವುಣ್ಣುವ ಆ ಮಕ್ಕಳಿಗೇ ತಿಳಿಯುವದುಂಟು. ಇದು ತಾಯಿಯ ಪ್ರೇಮದ ವಿಷಯವಾದ ಮಾತು! ಅಂದಮೇಲೆ ಉಳಿದವರ ಮಾತೇನು! 'ಎಲ್ಲರೂ ಅಷ್ಟೇ' ಎನ್ನುವ ಒಲವಿನ ಬೇರೆ ಬೇರೆ ವಿಧಗಳಲ್ಲಿ ಈ ತರದ ಭೇದಭಾವವಿದ್ದೇ ಇರುತ್ತದೆ. ಮತ್ತು ತಾಯಿಯ ಪ್ರೇಮದ ರೀತಿಗಿಂತ ಇಂಥವರಲ್ಲಿ ಈ ಹೆಚ್ಚುಕಡಿಮೆಗಳು ಚೆನ್ನಾಗಿ ಎದ್ದುಕಾಣುತ್ತವೆ.

ಒಬ್ಬಳೇ ತಾಯಿಯ ಮಕ್ಕಳು—ಬಾಬಾ ಮತ್ತು ಅಚಲಾ— ಒಡಹುಟ್ಟಿದ ಅಣ್ಣ-ತಂಗಿಯರು. ಅಚಲೆಯ ಮೇಲೆ ಮಮತೆಯ ಮಳೆಗರೆವ ಬಾಬಾ! ಬಾಬಾನ ವಿಷಯವಾಗಿ ಅಂಥದೇ ಒಲವಿನ ಹೊಳೆ ಹರಿಯಿಸುವ ಅಚಲಾ! ಒಂದೇ ಗಿಡದ ಟೊಂಗೆಗಳು, ಒಂದೇ ದಿಕ್ಕಿಗೆ ಬೆಳೆದಿರಬಹುದು.

ಆದರೆ ಅವೆರಡೂ ಒಂದೇ ಆಗಿರಲು ಸಾಧ್ಯವಿಲ್ಲ. ಒಂದು ಶಾಖೆಯನ್ನು ಹಿಡಿದು ಅಲುಗಿಸಿದರೆ ಮಗ್ಗುಲಿನದೂ ನಡುಗಬಹುದು. ಆದರೆ ಒಂದರ ಮೇಲೆ ಆಗುವ ಪ್ರಹಾರದ ದುಃಖ ಮತ್ತೊಂದರ ಮೇಲೆ ಅದೇ ಪ್ರಮಾಣದಲ್ಲಿ ಆಗಲಾರದು. ಅತಿ ಪ್ರೇಮದಿಂದ ಒಂದು ಶಾಖೆ ಮತ್ತೊಂದನ್ನು ಸುತ್ತಿ ಕೊಂಡು ಬೆಳೆದಿದ್ದರೂ ಒಂದೊಂದರ ಜೀವನವೂ ಬೇರೆ. ಅದರಲ್ಲಿ ಒಂದನ್ನು ಛೇದಿಸಿದರೆ ಅದು ಒಣಗಿಹೋಗಬಹುದು; ಆದರೆ ಅದರಿಂದ ಎರಡನೆಯದು ಒಣಗುತ್ತದಂತಿಲ್ಲ. ಆ ಒಣಗಿಹೋದ ಶಾಖೆ ಮತ್ತೊಂದರ ಸುತ್ತಲೂ ಸುತ್ತಿ ಕೊಂಡೇ ಇರಬಹುದು. ಒಣಗಿ ಒಣಗಿ ಕಟ್ಟಿಗೆಯಾಗಿ ಹೋಗಬಹುದು; ಆದರೆ ಅದರಿಂದ ಇನ್ನೊಂದರ ಬೆಳವಣಿಗೆಗೆ ಬಾಧೆ ಬರಲಾರದು.

ಆ ಅಣ್ಣತಂಗಿಯರ ಅದೆಂತಹ ನಿಷ್ಕಪಟ ಪ್ರೀತಿ! ಆದರೆ ಬಾಬಾ ಮತ್ತು ಅಚಲಾ ಇಬ್ಬರೂ ಬೇರೆ ಬೇರೆಯಾದ ಎರಡು ವ್ಯಕ್ತಿಗಳಾಗಿದ್ದರು. ಬಾಬಾನ ಜೀವನವನ್ನು ವಿಕಸಿಸಿ ಅದಕ್ಕೆ ಪೂರ್ಣತೆಯನ್ನು ತಂದುಕೊಡು ವಂತಹ ವಿಷಯಗಳು ಬೇರೆ, ಅಚಲೆಯವು ಬೇರೆ. ಬಾಬಾನ ಹೆಂಡತಿ ಎಷ್ಟೇ ಒಳ್ಳೆಯವಳಿರಲಿ, ಅದೆಷ್ಟೇ ಆತ್ಮೀಯತೆಯಿಂದ ಅವಳ ಅತ್ತಿಗೆ ಅಚಲೆಯನ್ನು ಕಾಣುತ್ತಿರಲಿ, ಲಗ್ನವಾದಂದಿನಿಂದ ಅಚಲೆಯ ವಿಷಯಕ ವಾದ ಬಾಬಾನ ಪ್ರೇಮದಲ್ಲಿ ಸೂಕ್ಷ್ಮವಾದ ಬದಲಾವಣೆಯಾಗದಿರಲಿಲ್ಲ. ಅಚಲೆಗೆ ಅದರ ಅರಿವಾಗುತ್ತಿತ್ತು. ಒಮ್ಮೆ ಅಣ್ಣನ ಅತ್ಯಂತ ಪ್ರೀತಿಯನ್ನೂ ಅವಳು ಕಂಡಿದ್ದಳು. ಆದ್ದರಿಂದಲೇ ಅದರಲ್ಲಿ ಸ್ವಲ್ಪವಾದರೂ ಹೆಚ್ಚು ಕಡಿಮೆಯಾದರೆ ಅದು ಅವಳಿಗೆ ಸಹಿಸುವದಾಗುತ್ತಿರಲಿಲ್ಲ. ಬಾಬಾ ಅವಳಿಗೇನೂ ಕಡಿಮೆ ಮಾಡಿರಲಿಲ್ಲ. ಆದರೆ ಮನೆಗೆ ಬಂದೊಡನೆ 'ತಾಯೀ, ತಾಯೀ' ಎಂದು ಕರೆಯುವ ಅವನ ಪ್ರೇಮದ ಕರೆ ಅವಳಿಗೆ ಕೇಳಿಸದಾ ಗಿತ್ತು. ಹಾಗೆ ಕರೆಯಿಸಿಕೊಳ್ಳುವದರಲ್ಲಿ ಅಂಥದು ಇಗ್ದಿತಾದರೂ ಏನು? ಆದರೆ ಸೂಕ್ಷ್ಮಸ್ಪರ್ಶವನ್ನೂ ಗ್ರಹಿಸಿ ವ್ಯಕ್ತಪಡಿಸುವ ಸುವರ್ಣಕಾರನ ತಕ್ಕಡಿ ಯಂತೆ ಇಂತಹ ಅಮುಖ್ಯವೆನಿಸುವ ಮಾತುಗಳಿಂದಲೂ ಅವಳ ಮನ ಕಲಕುತ್ತಿತ್ತು.

'ನನಗೊಬ್ಬ ಅತ್ತಿಗೆ ಬರುವಳು' ಎಂಬ ಕಲ್ಪನೆಯಿಂದ ಆನಂದಿಸದ ಹುಡುಗಿಯರು ಎಲ್ಲಿಗೋ ನೂರಕ್ಕೊಬ್ಬರು. ಬಾಬಾನದು ಸಿಂಧುವಿನೊಡನೆ

ಲಗ್ನವಾಗುವದೆಂಬ ಮಾತನ್ನು ಅವಳು ಯಾವಾಗಲೋ ಕಂಡುಕೊಂಡಿದ್ದಳು. ಸಿಂಧೂ ಅನೇಕ ಸಲ ಮನೆಗೆ ಬರುತ್ತಿದ್ದಳು. ಆಗೆಲ್ಲ ಏನಾದರೂ ಕೆಲಸ ತೆಗೆದು ಅಚಲೆ ಬೇರೆ ಕಡೆಗೆ ಹೋಗುತ್ತಿದ್ದಳು. ಅವರಿಬ್ಬರ ನಡುವಿನ ಆ ಸೂಕ್ಷ್ಮ ಬಂಧನ ಬಲಿತು ದೃಢವಾಗಿ ತನಗೆ, ಇಂತಹಳೊಬ್ಬ ಸ್ನೇಹಪೂರ್ಣಳಾದ ಅತ್ತಿಗೆ ದೊರೆಯಬೇಕೆಂಬ ಉದ್ದೇಶದಿಂದ ಅವಳು ಆ ಸಂಧಿಕಾಲದಲ್ಲಿ ಬಹಳ ಜಾಣತನದಿಂದ ವರ್ತಿಸುತ್ತಿದ್ದಳು. ಬಾಬಾ ಮತ್ತು ಸಿಂಧೂ ಇವರೀರ್ವರ ಲಕ್ಷ್ಯದಲ್ಲಿಯೂ ಈ ಮಾತು ಬರುತ್ತಿತ್ತು. ಅವರಿಬ್ಬರೂ ಮೆಲು ನಗೆ ನಗುವರು; ಅಚಲೆಯೂ ನಗುವಳು. ಆ ಮೂವರಿಗೆ ಮಾತ್ರ ಅದರ ಅರ್ಥವೇನೆಂದು ತಿಳಿಯುತ್ತಿತ್ತು. ಅಚಲೆ ಅರ್ಥಪೂರ್ಣವಾಗಿ ಕಣ್ಣು ಹೊರಳಿಸಿ ಅವರೆಡೆಗೆ ನೋಡುತ್ತ ನೋಡುತ್ತ ನಡೆಯುವಳು. ಆಗೆಲ್ಲ, 'ಬಹಳ ಸುಂದರವಾಗಿದೆ ಈ ಜೋಡಿ. ಇನ್ನು ಏನಾದರೂ ಹೆಜ್ಜೆ ಹಿಂದಕ್ಕಿಟ್ಟೀರಿ, ಹಾಂ!' ಎಂದೇನೋ ಹೇಳುವಂತಿರುತ್ತಿತ್ತು ಅವಳ ದೃಷ್ಟಿ!

ಪ್ರೇಮಬಂಧನದಲ್ಲಿ ಸಿಲುಕಿದ ಎರಡು ವ್ಯಕ್ತಿಗಳು ತಮ್ಮ ವಿಷಯವಾಗಿ ಯಾರ ಸಹಾನುಭೂತಿಯಿದೆ, ಯಾರದಿಲ್ಲ, ಸಹಾನುಭೂತಿಯಿದ್ದರೂ ಅದು ನಿಜವಾದುದೋ ಅಥವಾ ಮೇಲು ಮೇಲಿನದೊ, ಇದನ್ನು ಹುಡುಕುವದರಲ್ಲಿ ತತ್ಪರರಾಗಿರುತ್ತಾರೆ. ನಿಜವಾದ ಸಹಾನುಭೂತಿ ಇಲ್ಲದಿದ್ದಲ್ಲಿ ಅವರ ರಹಸ್ಯಗಳೆಂದೂ ಅವರ ಬಾಯಿಂದ ಹೊರಬರಲಾರವು. ಅದರಂತೆಯೆ ನಿಜವಾದ ಸಹಾನುಭೂತಿಯಿದ್ದವರಲ್ಲಿ ತಮ್ಮ ಪ್ರಿಯ ವ್ಯಕ್ತಿಯ ವಿಷಯವಾಗಿ ಒಂದೆರಡೇನಾದರೂ ಮಾತನಾಡದಿದ್ದರೆ ಅವರಿಗೆ ಸಮಾಧಾನ ಎನ್ನಿಸದಿರುವದೂ ಅಷ್ಟೇ ಸತ್ಯವಾದ ಮಾತು. ಪ್ರೇಮಿ ಜೀವಿಗಳಿಬ್ಬರು ಪರಸ್ಪರ ವಚನಬದ್ಧರಾಗಿ ತಮ್ಮಿಬ್ಬರಲ್ಲಿಯೇ ಅದರ ಸವಿಯನ್ನನುಭವಿಸುವದರಲ್ಲಿ ಆನಂದವಿದ್ದರೂ ತಮ್ಮ ಅನುರಾಗದ ವಿಷಯವನ್ನು ತೀರ ಸನಿಯದವರೊಬ್ಬರಿಗೆ ಹೇಳಿ ಆ ಮೂರನೆಯವರನ್ನೂ ತಮ್ಮಿಬ್ಬರ ಆನಂದದಲ್ಲಿ ಭಾಗಿಗಳನ್ನಾಗಿ ಮಾಡುವದರ ಮಧುರ ಸುಖವಾದರೂ ಒಂದು ಬೇರೆ ತರಹದ್ದೇ ಆಗಿರುತ್ತದೆ. ತಮ್ಮ ಸುಖದ ರಹಸ್ಯವಾರ್ತೆಯನ್ನು ಆ ಮೂರನೆಯವರಿಗೆ ತಿಳಿಯಗೊಡುವದರಿಂದ ಅಂಥವರೊಬ್ಬರ ವಿಷಯವಾಗಿ ಉಂಟಾಗುವ ಆತ್ಮೀಯತೆಯ ಆನಂದ ಮಹತ್ತರವಾದದ್ದಿರುತ್ತದೆ.

ಬಾಬಾ ಮತ್ತು ಸಿಂಧೂ ಇವರಿಗೆ ಅಚಲೆಯ ವಿಷಯವಾಗಿ ಇಂತ ಹದೇ ಒಂದು ಆತ್ಮೀಯತೆಯೆನ್ನಿಸುತ್ತಿತ್ತು. ತಮ್ಮಿಬ್ಬರ ಹೃದಯದ ಗಂಗೆ ಅವರ ಹೃದಯದ ಭಾವನೆಗಳೊಡಗೂಡಿ ತುಂಬಿ ಹೊರಚೆಲ್ಲುತ್ತಿರುವಾಗ ಅವರಿಬ್ಬರೂ ಪರಸ್ಪರ ತಾವೆಷ್ಟು ಪ್ರೀತಿಸುತ್ತಿರುವೆವೆನ್ನುವದನ್ನು ತಮ್ಮತಮ್ಮಲ್ಲಿಯೇ ಹೇಳುವದರ ಬದಲಾಗಿ ಅಚಲೆಯ ಮುಂದೆ ಆಡಿ ತೋರಿಸುವದರಲ್ಲಿ ಅವರಿಗೆ ಅತ್ಯಂತ ಸುಖವೆನಿಸುತ್ತಿದ್ದಿತು. ಅಚಲೆಗೂ ಕೂಡ ಅವರೀರ್ವರ ರಹಸ್ಯಗಳಲ್ಲಿ ಭಾಗವಹಿಸುವದರಲ್ಲಿ ಆನಂದವೆನಿಸುತ್ತಿದ್ದಿತು. ಕೊನೆಗೊಮ್ಮೆ, ಅವಳ ಮನಸಿನಂತೆಯೆ ಆಯಿತು. ಅವಳಿಗೆ ಒಬ್ಬ ಅತ್ತಿಗೆ ಬಂದಳು. ಇಂತಹ ಅವರ ದಾಂಪತ್ಯದ ಅರ್ಥ ಸ್ಫುಟ ಪ್ರೇಮಕ್ಕೆ ಸಂತತ ಸಾಕ್ಷಿಯಾಗಿರುವದೊಂದು ಅವಳಿಗೆ ಎಣೆಯಿರದ ಮನ ರಂಜನೆಯಾದಂತಾಯಿತು. ಆದರೆ—ಅದೇಕೋ ಏನೋ, ಅವಳಿಗೆ ಬರು ಬರುತ್ತ ತಾನು ಅವರಿಬ್ಬರ ನಡುವೆ ಅಡ್ಡಿಯಾಗುತ್ತಿರುವಂತೆನಿಸಹತ್ತಿತು. ಅವಳಿಗೆ ಈ ಕಲ್ಪನೆ ಬಂದಾಗಲೆಲ್ಲ ಅವಳ ನಡತೆಯ ಸಹಜತೆ ಕಳೆದು ಹೋಗಿ ಅವಳು ಮರೆಗೆ ಹೋಗಿ ಬಿಡುವಳು. ಅವಳ ಮನದ ಈ ಸ್ಥಿತಿ ಅವರಿಗೆ ಸರಿಯಾಗಿ ಅರ್ಥವಾಗುವದು ಯಾವಾಗಲೂ ಸಾಧ್ಯವಿರಲಿಲ್ಲ. ಯಾವಾಗಲಾದರೊಮ್ಮೆ ಅದು ತಪ್ಪಿ ಲಕ್ಷ್ಯಕ್ಕೆ ಬಂದಾಗ ಬಾಬಾ ಅಥವಾ ಸಿಂಧೂ ಎನ್ನದೆ ಇರಲಿಲ್ಲ: " ನಿಲ್ಲು, ಅಚಲಾ. ಮತ್ತೆ ಇಷ್ಟೇ ಇದೆ, ನಿನ್ನ ಓದು. ಈಗೆಲ್ಲಿ ಹೋಗುತ್ತೀ, ಕೂತುಕೊ." ಅಚಲೆಯ ಸಂಶಯ ನಿರಸನವಾದಂತಾಗಿ ಅವಳು ಅಲ್ಲಿಯೇ ಕೂಡ್ರುವಳು, ಹರಟೆಹೊಡೆಯುವಳು. ತೀರ ಸಹಜವಾಗಿ ನಡೆದುಕೊಳ್ಳುವಳು. ಆದರೆ ಅವರೂ ಸಹಜವಾಗಿಯೇ ಒಮ್ಮೊಮ್ಮೆ ಅವಳಿಗೆ ಕೂಡ್ರಲು ವಿಶೇಷ ಆಗ್ರಹ ಮಾಡುತ್ತಿರಲಿಲ್ಲ ಆಗೆಲ್ಲ ಅವರ ನಡುವೆ ತಾನು ವ್ಯತ್ಯಯುವಾಗುತ್ತಿದ್ದೇನೆಂಬ ಅರಿವಾಗಿ ಅಚಲೆಗೆ ಹಿಡಿದು ಬಿಟ್ಟಂತಾಗುವ್ವದು. ಮತ್ತು ಏನಾದರೂ ನಿಮಿತ್ತದಿಂದ ಅವಳು ಅವರಿಂದ ದೂರ ಹೋಗುವಳು

ಮನುಷ್ಯನ ಮನದಲ್ಲಿ ಅಸಮಾಧಾನದ ಬೀಜ ಯಾವಾಗ ಬಿತ್ತಲ್ಪಡುತ್ತದೆಂದು ಹೇಳಲು ಬಾರದು. ಅಥವಾ ಅವಳ ಆ ಸಂದೇಹದಿಂದಲೆ ಅಸಮಾಧಾನದ ಬೀಜವಂಕುರಿಸಿರಬಹುದು. ಒಂದೊಂದು ದಿನ ಅವಳು

ಹೀಗೇ ಚಿಂತಿಸುತ್ತ ಕುಳಿತಿರುವಳು ಆಗ ಅವಳಿಗೆ ತನ್ನೆಲ್ಲ ಬಂಧನಗಳು ತನ್ನಿಂದ ದೂರವಾಗುತ್ತಿರುವವೆಂದೆನಿಸುವದು. ಬಾಬಾನ ಪ್ರತಿಯೊಂದು ಶಬ್ದದಲ್ಲಿ, ಪ್ರತಿಯೊಂದು ಕೃತಿಯಲ್ಲಿ ಅವಳು ಪ್ರೇಮದ ಉತ್ಕಟತೆಯನ್ನು ಕಂಡಿದ್ದಳು. ಅದೇನೋ ಇತ್ತಿತ್ತಲಾಗಿ ಅದನ್ನು ತಪ್ಪಿಸಿಕೊಂಡಂತೆ ಅವಳಿಗೆ ಭಾಸವಾಗುವದು. ಸ್ನೇಹಾರ್ದ್ರವಾದ ಬಂಧುಪ್ರೇಮದಿಂದ ಉಕ್ಕುತ್ತಿರುವ ಸಾಗರ ಇಳಿತಕ್ಕೆ ಬರಹತ್ತಿದಂತೆ ಎನಿಸಲಾರಂಭಿಸಿತ್ತು ಅವಳಿಗೆ.

ಮನೆಗೆ ಬರುತ್ತಲೆ 'ತಾಯೀ, ತಾಯೀ' ಎಂದು ಕರೆಯುತ್ತ ಬರುವ ಅಣ್ಣನ ಪ್ರೇಮದ ಕರೆ ಇಲ್ಲವಾಗಿತ್ತು. ಅವಳು ತಾಸು ತಾಸುಗಳವರೆಗೆ ಒಬ್ಬಳೇ ಕುಳಿತಿರುತ್ತಿದ್ದಳಾದರೂ ನಗು ನಗಿಸುವ ಅಣ್ಣನ ಚೇಷ್ಟೆಯ ಮಾತುಗಳು ಅವಳಿಗೆ ಕ್ವಚಿತ್ತಾಗಿ ಕೇಳಿಬರಲಾರಂಭಿಸಿದ್ದವು. ಈ ತರದ ಬದಲಾವಣೆಗೆ ಕಾರಣವೇನೆಂಬುದನ್ನು ಅರಿಯುವ ಶಕ್ತಿ ಅವಳ ಬುದ್ಧಿಗೆ ಇದ್ದಿತು. ತನ್ನ ಹೊಸ ಸಂಸಾರದಲ್ಲಿ ಒಂದಾಗಿ ಬೆರೆತಿರುವಾಗ ಬಾಬಾನ ಆ ಮೈಮರೆಯಿಸುವ ಹೊಸ ಒಲವಿನ ರೀತಿ ಅವಳಿಗೆ ತಿಳಿದಿತ್ತು. ಅದರಲ್ಲಿ ಅವನದೇನು ತಪ್ಪಿರಲಿಲ್ಲವೆಂಬುದೂ ಅವಳ ವಿವೇಕಕ್ಕೆ ತಿಳಿದ ಮಾತಾಗಿತ್ತು. ಆದರೆ ಅದರಿಂದ ಅವಳ ಹೃದಯಕ್ಕೆ ನೋವಾಗುವದು. ಅವಳಿಗೆನಿಸಿತು, ತಾನೇನಾದರೂ ಉದ್ಯೋಗದಲ್ಲಿ ತೊಡಗಬೇಕೆಂದು. ಅವಳು ಮೊದಲೆಷ್ಟೋ ವೇಳೆ ಬಾಬಾನನ್ನು ಕೇಳಿದ್ದಳು: "ಬಾಬಾ, ನಾನು ಯಾವದಾದರೊಂದು ಶಾಲೆಯಲ್ಲಿ ಶಿಕ್ಷಕಿಯಾಗಬೇಕೆನ್ನುತ್ತೇನೆ. ಹೀಗಿದ್ದರೆ ನನಗೆ ಹೊತ್ತೇ ಹೋಗುವದಿಲ್ಲ ನೋಡು." ಅದಕ್ಕೆ ಅವನೆನ್ನುತ್ತಿದ್ದ—"ನೀನು ಬೇರೆ ಏನು ಬೇಕಾದರೂ ಮಾಡು. ಆದರೆ ನನ್ನ ತಂಗಿಯನ್ನು ಸಂರಕ್ಷಿಸುವ ಶಕ್ತಿಯಿರುವವರೆಗೆ ನಾನವಳನ್ನು ನೌಕರಿ ಮಾಡುವದಕ್ಕೆ ಎಂದೂ ಬಿಡಲಾರೆ" ಎಂದು ಅವಳ ಬಾಬಾ ಮೊನ್ನೆ ಅದೇ ಪ್ರಶ್ನೆಯನ್ನು ಅವಳು ಕೇಳಿದಾಗ ಎಂದಿದ್ದ. "ನೌಕರಿ ಮಾಡಬೇಕೆನ್ನುವೆಯಾ? ನೋಡು, ನಿನ್ನದನ್ನು ನೀನು ವಿಚಾರ ಮಾಡಿ ನೋಡು. ಇಷ್ಟಾಗಿಯೂ ನೀನು ಕೆಲಸ ಮಾಡಲೇ ಬೇಕೆಂದಿದ್ದರೆ ನಿನ್ನ ಮನಸ್ಸು ನೋಯಿಸುವ ಇಚ್ಛೆ ನನಗಿಲ್ಲ" ಅವಳಿಗೆ ನೌಕರಿ ಮಾಡಬೇಕೆಂಬ ಇಚ್ಛೆ ನಿಜವಾಗಿ ಇದ್ದಿತು. ಅವನು ಅದಕ್ಕೆ ಒಪ್ಪಿಗೆ ಕೊಡಬೇಕೆಂದೂ ಅವಳು ಇಚ್ಛಿಸುತ್ತಿದ್ದಳು. ಆದರೆ ಅವನು ಅದಕ್ಕೆ ಒಪ್ಪಿದ ಎಂಬುದರಿಂದಲೇ ಅವಳ ಹೃದಯಕ್ಕೆ ಏನೋ ಚುಚ್ಚಿದಂತೆನಿಸಿತು.

ಇಂತಹ ಅನೇಕ ಚಿಕ್ಕ ಪುಟ್ಟ ಘಟನೆಗಳು ನಡೆಯುತ್ತಲಿದ್ದವು. ಅವಳಿಗೆ ತಾನು ತನ್ನ ಅಣ್ಣನಿಂದ ದೂರವಾಗುತ್ತಲಿರುವೆನೆಂದೆನಿಸಿತು.

ಅಚಲೆ ಅಕೋಲೆಯಲ್ಲಿ ಹುಡುಗಿಯರ ಶಾಲೆಯಲ್ಲಿ ತಾತ್ಪೂರ್ತಿಕವಾಗಿ ತೆರವಾಗಿದ್ದ ಸ್ಥಳವೊಂದಕ್ಕಾಗಿ ಅರ್ಜಿ ಹಾಕಿದಳು. ಅವಳಿಗೆ ಆ ಸ್ಥಳ ದೊರೆತೂ ದೊರೆಯಿತು.

ಶಾಲೆಯ ಈ ಕೆಲಸ ಅಚಲೆಯ ಕಾಲಹರಣಕ್ಕೆ ಒಳ್ಳೇ ಉಪಯುಕ್ತವಾಗಿತ್ತೆಂಬುದರಲ್ಲಿ ಸಂಶಯವಿರಲಿಲ್ಲ. ಯಾವುದೊಂದು ಕೆಲಸಕ್ಕೆ ಹೊಂದಿಕೊಳ್ಳುವ ಮೊದಲು ನಮ್ಮ ಮನದಲ್ಲಿ ಉಂಟಾಗುವ ಅಸ್ವಸ್ಥತೆಯಲ್ಲಿಯೂ ಒಂದು ತರದ ಮೋಜುಂಟು. ಅಚಲಾ ಉತ್ಸಾಹಪೂರ್ವಕವಾಗಿ ಕೆಲಸಕ್ಕಾರಂಭಿಸಿದಳು. ದಿವಸದ ಬಹುಭಾಗವೆಲ್ಲ ಶಾಲೆಯ ಕೆಲಸದಲ್ಲಿಯೆ ತೊಡಗಿರುತ್ತಿದ್ದುದರಿಂದ ಬರಿ ಮನದ ಭೂತಗಳು ಅವಳ ಸನಿಯಕ್ಕೆ ಸುಳಿಯುವದನ್ನು ಬಿಟ್ಟಿದ್ದವು. ಒಮ್ಮಿಂದೊಮ್ಮೆ ಘಟಿಸಿದ ಈ ನವೀನ ಜಗದ ಸಂಪರ್ಕದ ಮೂಲಕವಾಗಿ, ಹೊಸ ಪರಿಚಯ, ಹೊಸ ಹೊಸ ಜನರ ಸ್ವಭಾವಪರೀಕ್ಷೆ —ಇನ್ನೂ ಎಷ್ಟೋ ಸಂಗತಿಗಳು ಅವಳ ಮನವನ್ನೆಲ್ಲ ವ್ಯಾಪಿಸಿದ್ದವು. ಬಾಬಾ–ಸಿಂಧೂ ಇವರ ಸಂಗಡ ಮಾತಾಡಬೇಕೆಂಬ ಇಚ್ಛೆಯಾಗುತ್ತಿದ್ದರೂ ತಾನು ತಾನುಗಟ್ಟಲೆ ಮಾತನಾಡುತ್ತ ಕುಳಿತಿರುವದು ಅಶಕ್ಯವಾದ ಮಾತಾಗಿತ್ತು. ಮಾಣಿಕಳ ಮನೆಗಂತೂ ಅವಳು ಹೋಗದೆ ಎಷ್ಟೋ ದಿವಸಗಳಾಗಿದ್ದವು. ದಿನಕ್ಕೊಮ್ಮೆಯಾದರೂ ಬಂದು ಹೋಗುವ ಅಚಲಾ ಹದಿನೈದು ದಿನಗಳಲ್ಲಿ ಒಮ್ಮೆಯಾದರೂ ಮಾಣಿಕಳನ್ನು ಕಾಣದಾದಳು.

೬

ಮಾಣಿಕಳಿಗೆ ಜ್ವರ ಸುಡುತ್ತಿದ್ದವು. ಮನೆಯೆಲ್ಲ ಅಸ್ತವ್ಯಸ್ತವಾಗಿತ್ತು. ಮನೆಯೊಳಗಿನ ಚೂರು-ಚಾರು ಕೆಲಸಗಳನ್ನು ತೀರಿಸಿ ಎರಡು ಮಕ್ಕಳನ್ನೂ ಸಾಕುತ್ತಿದ್ದ ಮಾಣಿಕಳ ಕೆಲಸ ಕಣ್ಣಿಗೆ ಹಿಡಿಯುವಂತಿರದಿದ್ದರೂ, ಅವಳು ಜ್ವರದಿಂದ ಮಲಗಿದ ಕೂಡಲೆ ಅವೇ ಅಮಹತ್ವದ ವಿಷಯಗಳು ದೊಡ್ಡ ಸಮಸ್ಯೆಗಳಾಗಿ ಅವಳ ಮಹತ್ವವನ್ನು ನಿದರ್ಶನಕ್ಕೆ ತಂದುಕೊಡಲಾರಂಭಿಸಿದವು. ಬಾಗಿಲು ತೆರೆದದ್ದು ಹಾಗೆಯೇ ಉಳಿಯಿತು, ಬೆಕ್ಕು

ಹಾಲನ್ನೆಲ್ಲ ಕುಡಿದು ಹೋಯಿತು, ಕುಂದಾ ದೊಡ್ಡ ಡಬ್ಬಿಯೊಂದನ್ನು ಮೈಮೇಲೆ ಹಾಕಿಕೊಂಡುಬಿಟ್ಟಳು, ಶಾಮು ಇದ್ದಲಿನ ಕಪ್ಪನ್ನೆಲ್ಲ ಮೈಗೆ ಬಳಿದುಕೊಂಡು ಕುಳಿತ, ಮುಸುರಿ ತಿಕ್ಕುವವಳು ವೇಳೆಗೆ ಸರಿಯಾಗಿ ಬರಲಿಲ್ಲ, ಭಾವೂ ಸಾಹೇಬರ ಅರಿವೆ ಸಮಯಕ್ಕೆ ಸಿಗಲಿಲ್ಲ—ಒಂದೇ ಎರಡೇ—ನಾನಾ ತರಹದ ಗೊಂದಲವೆದ್ದುಹೋಗಿತ್ತು ಹುಡುಗರು ಕಿರಿಕಿರಿ ಮಾಡುತ್ತಿದ್ದವು. ಭಾವೂ ಸಾಹೇಬರಿಗೂ ತಲೆ ಬೇಸರವಿಟ್ಟುಹೋಗಿತ್ತು. ಮಾಣಿಕ ಮನೆಯ ಆಡಳಿತಗಾರಳು. ಬೇನೆಯಿಂದೆದ್ದನಂತರ ವಿಶ್ರಾಂತಿ ತೆಗೆದುಕೊಳ್ಳುವದಂತೂ ಅವಳಿಗೆ ಸಾಧ್ಯವೇ ಇರಲಿಲ್ಲ. ಆದರೆ ಬೇನೆಯಿಂದ ಬಳಲುತ್ತಿದ್ದ ಅವಳು ವಿಶ್ರಾಂತಿ ಪಡೆಯಬೇಡವೆ? ಜ್ವರದಿಂದ ಪರಿತಪಿಸು ತ್ತಿದ್ದ ಮಾಣಿಕಳಿಗೆ ಮನೆಯಲ್ಲಿನ ಅಸ್ತವ್ಯಸ್ತತೆ ತಿಳಿಯುತ್ತಿತ್ತು. ಕೊನೆಗೆ ಅವಳೇ ಅಚಲೆಯನ್ನು ಕರೆದುತರಲು ಭಾವೂ ಸಾಹೇಬರನ್ನು ಕಳುಹಿಸಿದಳು.

ಅಚಲೆ ಬಂದಮೇಲೆ ಎಲ್ಲರಿಗೂ ಸ್ವಲ್ಪ ಸಮಾಧಾನದಿಂದ ಶ್ವಾಸ ಬಿಡುವಂತಾಯಿತು. ಅಚಲೆ ಯಾವಾಗಲೂ ಮನೆಯ ಕೆಲಸಕಾರ್ಯ ಗಳಲ್ಲೆಲ್ಲ ಸೂಕ್ಷ್ಮದೃಷ್ಟಿ ಇಟ್ಟಿರುತ್ತಿದ್ದಳು. ಅವಳು ಬಂದವಳೇ ಎಲ್ಲರ ವ್ಯವಸ್ಥೆಯನ್ನು ಸರಿಯಾಗಿ ಮಾಡಿದಳು. ಮಧ್ಯಾಹ್ನ ಚಹದ ಹೊತ್ತಿಗೆ ಮಾಣಿಕಳಿಗೆ ಮತ್ತೆ ಜ್ವರ ಬಂದಿದ್ದವು. ಚಹ ತೆಗೆದುಕೊಳ್ಳುತ್ತಿರುವಾಗ ಹೀಗೇ ಮಾತಿಗೆ ಮಾತು ಹೊರಟು ಭಾವೂ ಸಾಹೇಬರೆಂದರು: "ಸಂಸಾರ ನಿಜವಾಗಿಯೂ ದೂರಿನಿಂದ ಕಾಣುವಷ್ಟು ರಮ್ಯವಾಗಿಲ್ಲ."

"ನಿಜವಾಗಿಯೂ ಯಾವದೊಂದು ಕುಟುಂಬದ ಕಡೆಗೆ ನೋಡಿದಾಗ ಲೆಲ್ಲ ನನಗೆ ಮನಸ್ಸಿನಲ್ಲಿ ವಿಚಾರ ಬರುವದುಂಟು—ನಿಜವಾಗಿಯೂ ಇವರು ಸುಖದಿಂದಿರಬಹುದೇನು? ಆದರೆ ಅದಾವ ಕಾರಣಕ್ಕಾಗಿಯೋ ಏನೋ ನನಗೆ ನೋಡಿದತ್ತೆಲ್ಲ ಅಸಮಾಧಾನದ ಸ್ವರಗಳೇ ಕೇಳಿದಂತಾಗುತ್ತದೆ."

"ಸಂಪೂರ್ಣವಾಗಿ ಅಸಮಾಧಾನವೇ ಇಲ್ಲದಿದ್ದರೂ ಅದು ಮೊದ ಲೆಷ್ಟು ಸುಖದಾಯಿಯಾಗಿರಬಹುದೆಂದೆನಿಸುವದೋ ಅಷ್ಟು ಹಾಗಿರುವದೇ ಇಲ್ಲ, ನಿಜವಾಗಿ. ನಾನು ಸ್ವಂತದ ಅನುಭವದ ಮೇಲಿಂದ ಹೇಳುತ್ತೇನೆ. ಮತ್ತು ನನಗೆನಿಸುವದೆಂದರೆ, ಬಹುತರ ಎಲ್ಲ ಪುರುಷರ ಅನುಭವವೂ ಹೀಗೆಯೋ ಇರಬೇಕು—ಅದೇಕೆ ಇದ್ದೇ ಇರುತ್ತದೆ."

"ಎಂತಹ ಅನುಭವ?"

"ಲಗ್ನವಾದನಂತರ ಕೆಲವು ವರ್ಷ ಹೆಂಡತಿ ಮಕ್ಕಳಲ್ಲಿ ಮನುಷ್ಯನ ಮನಸ್ಸು ತೊಡಗಿರುತ್ತದೆ; ಆದರೆ ಅನಂತರ ಅವನು ಅದರ ಆಚೆಗೆ ಏನನ್ನೋ ಶೋಧಿಸಲು, ಪಡೆಯಲು ಹವಣಿಸುತ್ತಾನೆ. ದಿನಗಳೆದಂತೆಲ್ಲ ಸ್ತ್ರೀ ಹೆಚ್ಚೆಚ್ಚು ಸಂಸಾರದಲ್ಲಿ ಆಸಕ್ತಳಾಗುತ್ತಾಳೆ. ಆದರೆ ಗಂಡಸಿನ ಚಿತ್ತ ಅಷ್ಟೇ ಬಹಿರ್ಮುಖವಾಗುತ್ತದೆಂಬುದರಲ್ಲಿ ಸಂಶಯವಿಲ್ಲ."

"ಎಂದರೇನು?"

"ಎಂದರೆ ಸ್ತ್ರೀ ತನ್ನ ಗಂಡ ಮತ್ತು ಮಕ್ಕಳಲ್ಲಿ ತನ್ನೆಲ್ಲ ಸರ್ವಸ್ವವನ್ನು ಮರೆತುಬಿಡುತ್ತಾಳೆ. ಆದರೆ ಗಂಡಸಾದರೋ ಭೂಮಿಯಿಂದ ಮೊಳೆತು ಮೇಲೆ ಬರುವ ಬೀಜದ ಮೊಳಕೆಯಂತೆ ಸಂಸಾರದೊಳಗಿಂದ ಹೊರಗಾಗಲು ಯತ್ನಿಸುತ್ತಾನೆ."

"ಹಾಗಾದರೆ ಪುರುಷನೇ ಹೆಚ್ಚಿಗೆ ಅಸಮಾಧಾನ ಹೊಂದುತ್ತಾನೆ ಎನ್ನಿರಿ!"

"ನಿಸ್ಸಂಶಯವಾಗಿ ತಾಯಿ, ನಾನೂ ಕೂಡ ಹೀಗೆ ಹೇಳಬಯಸುತ್ತೇನೆ—ಮಾಣಿಕಳ ಮೇಲೆ—ಮಕ್ಕಳ ಮೇಲೆ ನನಗೆ ಪ್ರೇಮವಿದೆ, ಇಲ್ಲವೆಂತಲ್ಲ. ಆದರೆ ಅನೇಕ ಸಲ ಅವರು ನನ್ನ ಮಾರ್ಗದಲ್ಲಿ ನನಗೆ ಅಡ್ಡಿಯಾಗಿದ್ದಾರೆಂಬೆನ್ನಿಸುತ್ತದೆ."

ಮಾಣಿಕಳನ್ನು ಅಸಾಮಾನ್ಯವಾಗಿ ಪ್ರೀತಿಸುತ್ತಿದ್ದ ಅಚಲೆಗೆ ಭಾವೂ ಸಾಹೇಬರ ಮಾತಿನಿಂದ ಅದೆಷ್ಟು ಆಶ್ಚರ್ಯವೆನ್ನಿಸಲಿಲ್ಲ. ಈ ರೀತಿ ಬಿಚ್ಚು ಮನದಿಂದ ಮಾಡಿದ ಸ್ವಭಾವ ಪರೀಕ್ಷಣ ಮತ್ತು ಪ್ರಾಮಾಣಿಕ ಅಭಿಪ್ರಾಯಗಳನ್ನು ಅಷ್ಟೇ ನಿಷ್ಪಕ್ಷಪಾತವಾಗಿ ನೋಡುವ ಬೌದ್ಧಿಕ ಪಾತ್ರತೆ ಅವಳಲ್ಲಿದ್ದಿತು. ಆದ್ದರಿಂದ ಭಾವೂ ಸಾಹೇಬರೂ ಅವಳ ಸಂಗಡ ಮನ ಬಿಚ್ಚಿ ಮಾತನಾಡುತ್ತಿದ್ದರು. ಅಷ್ಟೇ ಏಕೆ, ಮಾಣಿಕಳಿಗಿಂತ ಹೆಚ್ಚಾಗಿ ಅವರು ಅಚಲೆಯ ಹತ್ತಿರ ತಮ್ಮ ಸ್ಪಷ್ಟ ಮನದ ಅಭಿಪ್ರಾಯಗಳನ್ನು ಮುಚ್ಚುಮರೆಯಿಲ್ಲದೆ ಪ್ರಸ್ತಾಪಿಸಿ ಚರ್ಚಿಸುತ್ತಿದ್ದರು.

"ಭಾವೂ ಸಾಹೇಬ, 'ಅಡ್ಡಿಯಾಗಿದ್ದಾರೆಂದೆನ್ನಿಸುತ್ತದೆ' ಎಂದು ನೀವು ಹೇಳುವ ಮಾತಿನ ಅರ್ಥವಾದರೂ ಏನು?"

“ಎಂದರೆ, ಮಾಣಿಕ ನನ್ನ ಸರ್ವಸ್ವವಾಗಲಾರಳು. ಜೀವನದುದ್ದಕ್ಕೂ ಕೇವಲ ಹೆಂಡತಿ ಮಕ್ಕಳಲ್ಲಿಯೇ ತೃಪ್ತಿಪಟ್ಟುಕೊಂಡಿರುವದು ನನ್ನಿಂದಾಗದು. ಇವಿಷ್ಟೇ ನನ್ನ ಬಂಧನಗಳಾಗಲಾರವು. ಅದರ ಹೊರಗೂ ನನ್ನ ವ್ಯಾಪವಿದೆ. ನನ್ನ ಆ ದೊಡ್ಡ ಜೀವನದಲ್ಲಿ ಯಾವದೇ ಸಂಸಾರದ ತೊಂದರೆಯೂ ನನಗೊಂದು ಮಹತ್ತರವಾದ ಕಾಲ್ತೊಡಕಿನಂತೆ ತ್ರಾಸದಾಯಕವೆನ್ನಿಸುತ್ತದೆ.”

“ಅನಂತರ ಈ ನಿಮ್ಮ ಹೆಂಡತಿಯೆನ್ನುವವಳು ಮಾಡಬೇಕಾದರೂ ಏನು?”

“ಇವೆರಡೂ ಭಿನ್ನ ಮನಃಪ್ರವೃತ್ತಿಗಳೇ ಸರಿ. ಒಂದು ಹೆಚ್ಚೆಚ್ಚು ಅಂತರ್ಮುಖವಾಗುತ್ತ ನಡೆಯುವದು, ಇನ್ನೊಂದು ಬಹಿರ್ಮುಖವಾಗುತ್ತಲಿರುವದು. ಇದರಲ್ಲಿ ಅಸ್ವಾಭಾವಿಕವಾದುದೇನೂ ಇಲ್ಲ.”

“ಆದರೆ ಇದೇ ಪ್ರವೃತ್ತಿಯೇ ಒಮ್ಮೊಮ್ಮೆ ಸಂಸಾರದ ಮತ್ತು ಸ್ವಂತದ ನಾಶಮಾಡಬಹುದಲ್ಲ?”

“ಅದು ಆ ಪ್ರವೃತ್ತಿ ಅನುಸರಿಸುವ ಮಾರ್ಗವನ್ನವಲಂಬಿಸಿದೆ. ಅದರಿಂದ ಕೆಲವರು ಪ್ರಸಿದ್ಧ ಮಾತುಗಾರರಾಗಬಹುದು; ಕೆಲವರು ಸಮಾಜಕಾರಣಿಗಳು, ಕೆಲವರು ಧರ್ಮಕಾರಣಿಗಳು ಮತ್ತೆ ಕೆಲವರು ರಾಜಕಾರಣಿಗಳಾಗಬಹುದು; ಅಥವಾ ಕೆಲವರು ಕೇವಲ ಹೆಂಡ-ಹೆಣ್ಣಿನಲ್ಲಿಯೇ ರಮಿಸಿಯಾರು; ಮತ್ತೆ ಕೆಲವರು ‘ಏನು ಮಾಡಬೇಕು?’ ಎನ್ನುವ ಸಮಸ್ಯಾಪರಿಹಾರದ ಸಂಭ್ರಮದಲ್ಲಿಯೇ ಉಳಿಯಬಹುದು.”

ಅಚಲೆಯ ಕಣ್ಣೆದುರು ವಿನಾಯಕರಾಯರ ಛಿನ್ನ-ವಿಚ್ಛಿನ್ನ ಮೂರ್ತಿ ಬರದೆ ಇರಲಿಲ್ಲ. ಅವಳ ಮುಖದ ಮೇಲೆ ಅವಳ ಮನದೊಳಗಿನ ಗೊಂದಲ, ತಿರಸ್ಕಾರಗಳು ಸ್ವಲ್ಪವೇ ಮೂಡಿಕೊಂಡವು. ಭಾವೂ ಸಾಹೇಬರ ಲಕ್ಷ್ಯಕ್ಕೂ ಆ ಮಾತು ಬಂದೇ ಬಂದಿತು. ತಿಳಿಯದೆಯೇ ಅವಳಿಗೆ ತನ್ನ ದುಃಸ್ಥಿತಿಯ ಅರಿವನ್ನುಂಟುಮಾಡಿದುದಕ್ಕಾಗಿ ಅವರಿಗೆ ಕೆಡುಕೆನಿಸಿತು. ಅವರು ಕೂಡಲೆ ನುಡಿದರು: “ತಾಯಿ, ಲಗ್ನದನಂತರ ಅನೇಕ ಪುರುಷರಿಗೆ ತಮ್ಮ ವೈವಾಹಿಕ ಬಂಧನದಲ್ಲಿರುವ ಇಕ್ಕಟ್ಟಿನ ಕಲ್ಪನೆ ಬರುವುದುಂಟು. ಕೇವಲ ಪ್ರೇಮವಿವಾಹವೆನ್ನುತ್ತಾರಲ್ಲ, ಅವುಗಳನ್ನು ತೆಗೆದುಕೊಂಡರೂ ಈ ಮಾತು ಅಲ್ಲಿಯೂ ಅನ್ವಯಿಸುವದುಂಟು. ನಿಜವನ್ನೇ

ನುಡಿಯಬೇಕೆಂದರೆ ಪುರುಷನೆಂಬುವ ಪ್ರಾಣಿ ಏಕನಿಷ್ಠನಲ್ಲ, ಎಂದು ನನಗನ್ನಿಸುತ್ತದೆ."

"ಭಾವೂ ಸಾಹೇಬ, ಏನೇನು ಮಾತನಾಡುತ್ತಿರುವಿರಿ, ನೀವು?"

"ಗಂಡಸು ಯಾವಾಗಲೂ ತನ್ನಲ್ಲಿ ಇದ್ದುದಕ್ಕಿಂತಲೂ ತಾನು ಇನ್ನೂ ಹೆಚ್ಚಾಗಿ ಪ್ರೀತಿಸಬಲ್ಲ ಬೇರೊಂದು ವಸ್ತುವನ್ನು ಹುಡುಕುತ್ತಲೇ ಇರುತ್ತಾನೆ."

"ಹಾಗಾದರೆ ಈ ಪುರುಷನೆಂಬುವದೊಂದು ಪಾಪವೇ ಜನ್ಮವೆತ್ತಿ ಬಂದಂತೆಯೆನ್ನಿರಿ?"

"ಹೀಗನ್ನುವದರಲ್ಲಿ ಅರ್ಥವಿಲ್ಲ. ಸ್ತ್ರೀಯ ಸ್ವಭಾವವಾದರೂ ಹೀಗೆಯೇ ಇರಬೇಕು. ಹೆಚ್ಚೇನು, ಸ್ತ್ರೀಪುರುಷರ ಮನೋವೃತ್ತಿಗಳೆರಡೂ ಸಾಧಾರಣ ಒಂದೇ. 'ಈಗಿರುವದಕ್ಕಿಂತ ಚೆನ್ನಾಗಿದ್ದರೆ!' ಎಂದು ಅವರಿಗೆ ಯಾವಾಗಲೂ ಅನ್ನಿಸಿಯೇ ಅನ್ನಿಸುವದು. ಆದರೆ ಸ್ತ್ರೀಯರು ಅತ್ಯಂತ ಮರ್ಯಾದಿತವಾದ ಜಗತ್ತಿನಲ್ಲಿಯೇ ಇರುವದರಿಂದ ಮತ್ತು ಅವರು ತಮ್ಮ ಹೊಣೆಗಾರಿಕೆಯನ್ನು ಅರಿತವರಾಗಿರುವದರಿಂದ, ಅವರು ತಮ್ಮ ಈ ತೆರದ ಮನಃಪ್ರವೃತ್ತಿಗಳನ್ನು ಸಂಯಮಿಸಬಲ್ಲವರಾಗಿರುತ್ತಾರೆ. ಪುರುಷರಲ್ಲಿಯೂ ತಮ್ಮ ಈ ತರದ ಪ್ರವೃತ್ತಿಯನ್ನು ಅಂಕಿತದಲ್ಲಿಡುವವರೇನೂ ಕಡಿಮೆಯಿಲ್ಲ; ಆದರೆ ನಿಸ್ಸಮರ್ಥ ದುರ್ಬಲ ಪುರುಷರು ಇಂಥ ವೃತ್ತಿಯ ದಾಸರಾಗುತ್ತಾರೆ."

ಅಚಲೆ ಭಾವೂ ಸಾಹೇಬರ ಮಾತುಗಳನ್ನು ಕೇಳುತ್ತಿದ್ದಳೇನೋ ನಿಜ. ಆದರೆ ಅವಳ ಚಿತ್ತವೆಲ್ಲ ತನ್ನನ್ನು ತಾನೇ ನಿರುಕಿಸಿ ನೋಡುತ್ತಿತ್ತು. 'ಈಗಿರುವದಕ್ಕಿಂತ ಇನ್ನೂ ಸ್ವಲ್ಪ ಚೆನ್ನಾಗಿದ್ದರೆ—' ನಿಜವಾಗಿ ಎಂತಹ ಮಾತು! ಈ ವಿಚಾರ ಅದೆಷ್ಟೋ ಸಲ ಅವಳ ಮನಸ್ಸಿನಲ್ಲಿ ಬಂದಿತ್ತು. ವಿನಾಯಕರಾಯರಿಗಿಂತ ಒಳ್ಳೆಯ ಮನುಷ್ಯನೊಬ್ಬನೊಡನೆ ಅವಳು ಮದುವೆಯಾಗಿದ್ದುದಾದರೆ! ಆಗ ಅವಳನ್ನು ಹಿಡಿವವರೇ ಇರಲಿಲ್ಲ. ಅವಳ ಸಂಸಾರ ಎಷ್ಟು ಸುಖಕರವಾಗಬಹುದಿತ್ತು! ಆದರೆ ಈಗ? ಈಗ ಅವಳು ಭಾವೂ ಸಾಹೇಬರೆಂದಂತೆ ತನ್ನ ಮನಃಪ್ರವೃತ್ತಿಗಳನ್ನು ಅಂಕಿತದಲ್ಲಿಡಲು ಹವಣಿಸುತ್ತಿರಲಿಲ್ಲವೆ? ವಿನಾಯಕರಾಯರ ಮನೆಯಿಂದ ಹೊರಬಿದ್ದಮೇಲೆ ಆ

'ಮನವೆಂಬ ಮರ್ಕಟವ' ತಡೆಯುವದಕ್ಕೆಂದೇ ಒಂದು, ಎರಡು, ಮೂರು, ನಾಲ್ಕು ಅಲ್ಲ, ಅರ್ಧ ತಪವನ್ನೇ ವ್ಯಯಿಸಿ ಅವಳು 'ಬಿ.ಎ.' ಆಗಿದ್ದಳು.

ಮಾಣಿಕಳ ಲಗ್ನವಾಯಿತು. ಅದಕ್ಕೆ ಮೊದಲೇ ಅಚಲೆ ಗಂಡನ ಮನೆಗೆ ಹೋಗುವವನ್ನು ಬಿಟ್ಟುಬಿಟ್ಟಿದ್ದಳು. ತನ್ನದೊಂದು ಎಲ್ಲ ತೊಳೆದು ಹೋಯಿತು, ಆದರೆ ಮಾಣಿಕಳಾದರೂ ಸುಖದಿಂದ ಸಂಸಾರ ಮಾಡಿ ಕೊಂಡಿರಬೇಕೆಂಬುದೇ ಅವಳ ಅಂತರ್ಯದ ಆಸೆಯಾಗಿದ್ದಿತು. ಅಚಲೆಯ ಸಂಸಾರ ಒಡೆದುಹೋಗಿ ಚೂರುಚೂರಾದ ರೀತಿಯನ್ನು ನೋಡಿ ಮಾಣಿಕ ಳಿಗೆ ಒಂದು ತರದ ಆಘಾತವಾದಂತಾಗಿತ್ತಲ್ಲದೆ ಅವಳಿಗೆ ತನ್ನ ಭವಿಷ್ಯತ್ತಿನ ವಿಷಯವಾಗಿಯೂ ಇಲ್ಲದ ಶಂಕೆ-ಕುಶಂಕೆಗಳುಂಟಾಗಿ ಅವಳನ್ನು ಭಯ ಭೀತಳನ್ನಾಗಿಸುತ್ತಿದ್ದವು. ಈಜುವಾಗ ಉಂಟಾಗಬಹುದಾದ ಸಂಕಟಗಳ ನ್ನೆಲ್ಲ ನೆನಿಸಿ, ಹೊಸಬನಾದ ಈಜುಗಾರನು ಸಾವಿರ ಸಲ ಹಿಂದೆಮುಂದೆ ನೋಡುತ್ತ ನಿಲ್ಲುತ್ತಾನೆ, ಅಂತೆಯೇ ಮಾಣಿಕಳ ಅವಸ್ಥೆಯಾಗಿದ್ದಿತು. ಅಚಲೆಯೇ ಅವಳಿಗೆ ಧೈರ್ಯ ಕೊಡುತ್ತಿದ್ದಳು. "ಏಳೀ ಹುಚ್ಚಿ, ಹಾಗೇ ನಾದರೂ ಆಗುವದುಂಟೇನು? ಯಾವದೊಂದು ಮಾತನ್ನು ಬಹಳ ವರೆಗೆ ಹಚ್ಚುವದರಲ್ಲಿ ಯಾವ ಅರ್ಥವೂ ಇಲ್ಲ. ಭಾವೂ ಸಾಹೇಬರು ಉತ್ತಮ ವಕೀಲರೆಂದು ಹೆಸರಾಗಿದ್ದಾರೆ. ಊರಿನಲ್ಲಿ ಎಲ್ಲರೂ ಅವರಿಗೆ ಗೊತ್ತಿದ್ದವರು, ಅವರನ್ನು ಬಲ್ಲವರಿದ್ದಾರೆ. ಹೀಗೇಕೆ ತೊಂದರೆಪಟ್ಟುಕೊಳ್ಳುವಿ?"

ಮದುವೆ, ಬಯಕೆಯೂಟ ಅಥವಾ ಅಂಥವೇ ಇನ್ನಿತರ ಮಂಗಲ ಕಾರ್ಯಗಳಲ್ಲಿ ಭಾಗವಹಿಸಲು ಎಲ್ಲ ಹೆಣ್ಣುಮಕ್ಕಳೂ ಉತ್ಸುಕರಾಗಿರುತ್ತಾರೆ. ಆದರೆ ಅದರಲ್ಲಿಯೂ ಇತರರ ಇಂತಹ ಉತ್ಸವಗಳಲ್ಲಿ ಬಹಳೇ ಮನವಿರಿಸಿ ಏನೆಲ್ಲ ಚವಕಸಿ ಮಾಡುವ ವರ್ಗವೊಂದುಂಟು. ಅದೆಂದರೆ—ಬಾಲ ವಿಧವೆಯರು; ಮತ್ತು ಅವಮಾನಿತರಾದ ಹೆಣ್ಣುಮಕ್ಕಳು. ತಾವು ಅನುಭವಿಸಲಾರದುದನ್ನು, ಮಾಡಲಾರದುದನ್ನು ಇತರರು ಅನುಭವಿಸುವರು ಪಡೆಯುವರೆಂದರೆ ಅವರಿಗೆ ಸಹನವಾಗುವದಿಲ್ಲವಾದರೂ, ಅದು ತಮಗೆ ದೊರೆಯುವದೆಂದಿಗೂ ಶಕ್ಯವೇ ಇರದ್ದರಿಂದ ಆ ವಿಷಯುಕವಾದ ತಮ್ಮ ಹಸಿವೆಯನ್ನು ಅವರು ಹೀಗೆಯೇ ಇತರರ ಅಂತಹ ಸುಖಸಮಾಧಾನಗಳಲ್ಲಿ ಮನಸ್ಸು ಹಾಕಿ ಹಿಂಗಿಸಲು ಯತ್ನಿಸುತ್ತಾರೆ.

ಅಚಲೆಗೆ ತನ್ನ ವಿಷಯವಾಗಿ ಕೆಡಕೆನ್ನಿಸುತ್ತಿದ್ದಿಲ್ಲವೆಂದು ಹೇಳುವದು ಹೇಗೆ ಸಾಧ್ಯ? ಆದರೆ ಆದರೊಡನೆಯೇ ಅಚಲೆ ಮತ್ತು ಮಾಣಿಕಳ ನಡು ವಿದ್ದ ಅತ್ಯಂತ ಪ್ರೇಮದ ಮೂಲಕವಾಗಿ ಮಾಣಿಕಳನ್ನು ಸುಖದಲ್ಲಿರಿಸಿ ಅಚಲೆ ಸುಖಪಡೆಯಬಹುದಾಗಿತ್ತು. ಭಾವೂ ಸಾಹೇಬರ ಸಂಗಡ ಮಾಣಿಕಳ ಲಗ್ನವಾದಮೇಲೂ ಅವರಿಬ್ಬರೂ ಅಕ್ಕತಂಗಿಯರು ತಾಸುಗಟ್ಟಲೆ ಮಾತನಾಡುತ್ತ ಕುಳಿತಿರುತ್ತಿದ್ದರು. ಅಚಲೆ ಯಾವಾಗಲೂ ಉಪದೇಶಿಕೆಯ ಹಿರಿತನದ ಅಗ್ರಸ್ಥಾನದಿಂದ ಮಾತನಾಡುವಳು. ಮಾಣಿಕಳ ಮನದ ಸಣ್ಣ ಸಣ್ಣ ಶಂಕೆ-ಉಪಶಂಕೆಗಳಿಗೆಲ್ಲ ಉತ್ತರ ಕೊಟ್ಟು ಅವಳನ್ನು ಸಮಾಧಾನ ಪಡಿಸುತ್ತಿದ್ದಳು. ಸಭ್ಯ, ನಿಷ್ಪಾಪ ಮನದ ಮಾಣಿಕಳ ಜೀವಕ್ಕೆ ಅಚಲೆಯೊಂದು ದೊಡ್ಡ ಆಧಾರಳಾಗಿದ್ದಳು. ಲಗ್ನದನಂತರವೂ ಅವಳು ತನ್ನ ಸುಖದುಃಖಗಳನ್ನೆಲ್ಲ ಅಚಲೆಯೊಡನೆ ಬಿಚ್ಚುಮನದಿಂದ ಆಡುವಳು. ಅಚಲೆ ಭಾವೂ ಸಾಹೇಬರೊಡನೆಯೂ ಅದೇ ಹಿರಿತನದಿಂದ ಮಾತನಾಡುವಳು. ಅವರಿಗೂ ಸ್ಪಷ್ಟವಾಗಿ ಮಾತನಾಡಿ ತಮ್ಮ ಮನವನ್ನು ಹಗುರಮಾಡಿಕೊಳ್ಳ ಬೇಕೆನಿಸುವದು.

ಕಳೆದ ಹದಿನೈದು ದಿನಗಳಲ್ಲಿ ಒಮ್ಮೆಯಾದರೂ ಮನೆಗೆ ಬಾರದ್ದಕ್ಕಾಗಿ ಮಾಣಿಕ ಮತ್ತು ಭಾವೂ ಸಾಹೇಬ ಇಬ್ಬರೂ ಅವಳಿಗೆ ಸರಿಯಾಗಿ ಮಾತಿನ ಉಡುಗೊರೆ ಕೊಟ್ಟರು. "ಅಲ್ಲ, ಶಾಲೆಯೊಂದಿದೆಯೆಂದು ಜನರೆಲ್ಲ ತಮ್ಮ ತಮ್ಮ ಮಂದಿಯನ್ನೇ ಮರೆಯುವರೋ, ಹ್ಯಾಗೆ?"

"ಇಲ್ಲ. ಒಮ್ಮೆ ಎಲ್ಲಾ ಹೊಂದಿಕೆಯಾಗುವ ವರೆಗೆ ಗೊಂದಲವೆದ್ದು ಹೋಗಿತ್ತು, ನೋಡಿರಿ."

"ಆಯಿತೋ ಇಲ್ಲವೋ ಈಗಲಾದರೂ ಎಲ್ಲ ಒಮ್ಮೆ. ಅಬಚೀ, ಅಬಚೀ ಎಂದು ಶಾಮನಂತೂ ತಲೆಯುಬ್ಬಿಸಿಬಿಟ್ಟಿದ್ದ" ಭಾವೂ ಸಾಹೇಬರೆಂದರು.

ಈ ನವೀನ ಜೀವನಕ್ಕೆ ಅಚಲೆ ಬೇಗನೆ ಹೊಂದಿಕೊಂಡಳು. ಭಾವೂ ಸಾಹೇಬ, ಮಾಣಿಕ, ಸಿಂಧು ಇವರೆಲ್ಲರಿಗೂ ಅವಳ ಈ ಹೊಸ ಜೀವನ ಮಾತಿನ ವಿಷಯವಾಯ್ತು.

೭

ಶಾಲೆ ಬಿಟ್ಟು ಬಂದೊಡನೆಯೇ ಯಾರೊಡನೆಯಾದರೂ ಎರಡು ಗಳಿಗೆ ತನ್ನವರೊಡನೆ ಮಾತನಾಡುವದಕ್ಕೆ ಉತ್ಸುಕಳಾಗಿರುತ್ತಿದ್ದ ಅಚಲೆ ಮಾಣಿಕಳ ಕಡೆಗೆ ಹೋಗುವಳು. ಅವಳೊಡನೆ ಮಾತನಾಡುವಳು. ಪ್ರೀತಿಯಿಂದಾಡುವಳು—ಗೆಳತಿಯೆಂದು, ಸೋದರಿಯೆಂದು. ಅಷ್ಟೇ ಆಸಕ್ತಿಯಿಂದ ಅವಳ ಮಕ್ಕಳ ಆಟಪಾಟಗಳನ್ನು ನೋಡಿ, ಮುದ್ದುಮಾತಗಳನ್ನು ಕೇಳಿ ಆನಂದಿಸುವಳು. ಆದರೆ ಮಾಣಿಕಳ ಸಂಗಡ ಆಡಬಹುದಾದ ಮಾತು ಅವಳ ಸಂಸಾರ ಜೀವನದ ವಿಷಯಗಳಿಗೆ ಮರ್ಯಾದಿತವಾಗಿದ್ದಿತಾದ್ದರಿಂದ ದಿನದಿನವೂ ಅದರಲ್ಲಿ ನವಚೈತನ್ಯ ಕಂಡುಬರುವದು ಸಾಧ್ಯವಿರಲಿಲ್ಲ. ಅಚಲೆಯ ಪ್ರಬುದ್ಧ ಮನಕ್ಕೆ ಅಷ್ಟರಿಂದ ಶಾಂತಿ ಸಿಗುವದು ಸಾಧ್ಯವಿರಲಿಲ್ಲ. ಭಾವೂ ಸಾಹೇಬರಿದ್ದರೆ ಏನೆಲ್ಲ ವಿಷಯವೆತ್ತಿ ಮಾತನಾಡುವರು. ಅವಳು ತನ್ನ ಸಂಶಯಗಳನ್ನೆಲ್ಲ ಅವರ ಮುಂದಿಡುವಳು. ಅವರು ಸಾಧ್ಯವಿದ್ದಷ್ಟು ಅವುಗಳಿಗೆ ಸಮರ್ಪಕವಾದ ಉತ್ತರ ಕೊಡುವರು. ಈರ್ವರೂ ವಾದ ಮಾಡುವರು; ಒಮ್ಮೊಮ್ಮೆ ವಾಗ್ಯುದ್ಧವೂ ನಡೆಯುವದು. ಇಬ್ಬರಲ್ಲಿ ಯಾರಿಗಾದರೂ ಬಹಳ ಆನಂದ ಅಥವಾ ಖಿನ್ನತೆ ಎನಿಸಿದ ಪಕ್ಷದಲ್ಲಿ, ಒಬ್ಬರೊಬ್ಬರು ಮತ್ತೊಬ್ಬರ ಅತಿಪ್ರಸನ್ನತೆಯ ಅಥವಾ ಅತಿಖಿನ್ನತೆಯ ಕಾರಣಮೀಮಾಂಸೆ ಮಾಡಿ, ಮನಸ್ಸನ್ನು ಶಾಂತಗೊಳಿಸಲು ಯತ್ನಿಸುವರು. ಹೀಗೆಯೇ ದಿನದಿನವೂ ನಡೆಯುವದು. ಮಾಣಿಕಳು ಅದರಲ್ಲಿ ಭಾಗವಹಿಸುವಳು. ಆದರೆ ಅವಳಿಗೆ ಅವೆಲ್ಲ ನೀರಸವಾಗಿ ಬೇಸರ ತರುವದು. ಅವಳು ಎದ್ದು ಒಳಗೆ ಕೆಲಸಕ್ಕೆ ನಡೆದುಬಿಡುವಳು.

ಭಾವೂ ಸಾಹೇಬರೇನಾದರೂ ಮೋಜುಗೊಳಿಸುವ ನಗೆ ಮಾತನ್ನೇನಾದರೂ ಆಡಿದರೆಂದರೆ ಆ ನಗೆಯಲ್ಲಿ ಮಾಣಿಕಳನ್ನು ಎಳೆಯುವದಕ್ಕೆಂದು ಅಚಲೆಯೆನ್ನುವಳು: "ಏ ಮಾಣಿಕ, ಇದು ನೋಡಿದೆಯೇನು, ಭಾವೂ ಸಾಹೇಬರೇನೆನ್ನುತ್ತಾರೆ!" ಮಾಣಿಕ ಕೂಡಲೆ ಉತ್ತರ ಕೊಡುವಳು. "ನನಗೇನೂ ಗೊತ್ತಾಗುವದಿಲ್ಲವಮ್ಮಾ, ಆ ನಿಮ್ಮ ಮಾತು. ಬಾದಾಮಿಹಲ್ವ ಹೇಗೆ ಮಾಡಬೇಕು, ಮೈಸೂರುಪಾಕು ತಯಾರಿಸುವ ರೀತಿ ಯಾವುದು, ಇದನ್ನು ಕೇಳು ಬೇಕಾದರೆ ನನ್ನನ್ನು. ಆ ನಿಮ್ಮ ಅಸೆಂಬ್ಲಿ, ಡಾ|| ಗೌರರ

ಬಿಲ್ಲು ಮತ್ತು ನಿಮ್ಮ ಆ ಆಸ್ಕರ ವಾಯಿಲ್ಡ—ಅದೇನೇನೋ ನನಗೆ ತಿಳಿಯು ವದೇ ಇಲ್ಲ." ಮೊದಮೊದಲು ಈ ಮಾತುಗಳನ್ನು ಮಾಣಿಕ ತೀರ ಸಹಜ ಸಹಜವಾಗಿ ಮತ್ತು ಸರಳ ಮನಸ್ಸಿನಿಂದ ಹೇಳುತ್ತಿದ್ದಳು. ಆದರೆ ಬರು ಬರುತ್ತ, 'ನನ್ನ ಜನ್ಮವೆಲ್ಲ ವ್ಯರ್ಥ, ನಮ್ಮ ಶಿಕ್ಷಣವೂ ಅಷ್ಟಕ್ಕಷ್ಟೇ. ಸಂಸಾರದಲ್ಲಿ ಗಂಡನ ಮನಸ್ಸನ್ನು ಹಿಡಿಯುವದಕ್ಕೆ ಅದೂ ಬೇಕು' ಎಂದು ಮುಂತಾಗಿ ತನ್ನ ಅಲ್ಪಬುದ್ಧಿಗೆ ಅರಿವಾದಂತೆ ಅವಳು ತನ್ನೊಳಗೆ ತಾನೇ ವ್ಯಸನಪಡದೆ ಇರಲಿಲ್ಲ.

ಒಂದು ದಿನ ಮಧ್ಯಾಹ್ನ ಊಟದ ಹೊತ್ತಾಗಿತ್ತು. ಎಲ್ಲ ಸಿದ್ಧವಾಗಿದೆ ಊಟಕ್ಕೇಳಬೇಕೆಂದು ಎರಡು ಮೂರು ಸಲ ಮಾಣಿಕ ತನ್ನ ಗಂಡನಿಗೆ ತಿಳಿಸಿದಳು. ಆದರೆ ಭಾವೂ ಸಾಹೇಬರು ಮಾತಿನಲ್ಲಿ ತಮ್ಮನ್ನು ತಾವೇ ಮರೆತಿದ್ದರಿಂದ 'ಬಂದೆ' ಎಂದು ಹೇಳುತ್ತಲೆ, ಮತ್ತೆ ತಮ್ಮ ಮಾತನ್ನು ಮುಂದುವರಿಸಿದರು. "ಅವನೆಂಥರೆ ಅಂಥಪ ಪ್ರಸಿದ್ಧ ದರೋಡೆಖೋರ. ಅವರ ಮನಃಪ್ರವೃತ್ತಿಯೇ ಹಾಗಾಗಿಬಿಟ್ಟಿರುತ್ತದೆ. ಅವರಿಗೇನು ಗೊತ್ತಿರುವ ದಿಲ್ಲವೆಂತಲ್ಲ—ತಮಗೆ ಶಿಕ್ಷೆಯಾಗದಿರಲಾರದು, ಆದ್ದರಿಂದ ತಾವು ಕಳವು ಮಾಡಬಾರದು ಎಂಬುದು. ಆದರೆ ಕಳವು ಮಾಡದಿದ್ದರೆ ಹೊಟ್ಟೆಗೇನು? ಈ ಪ್ರಶ್ನೆಯನ್ನೇನೂ ಕಾಯಿದೆ ಬಿಡಿಸಿ ಹೇಳುವದಿಲ್ಲವಲ್ಲ. ಆದ್ದರಿಂದ ಅದೇ ಕಾಯಿದೆ ಪ್ರಕಾರ, ಅಪರಾಧ ಮಾಡಿ ಜೇಲಿಗೆ ನಡೆದರೆ ಅಲ್ಲಿ ಎಂತಹದೇ ಇರವೊಲ್ಲದೇಕೆ ಎರಡು ಹೊತ್ತು ರೊಟ್ಟಿಯಾದರೂ ಹೊಟ್ಟೆಗೆ ಸಿಕ್ಕೀತಲ್ಲ!"

ಅಚಲೆಯದು ಭಾವೂ ಸಾಹೇಬರ ಮಾತಿನ ಕಡೆಗೆ ಎಳ್ಳಷ್ಟೂ ಲಕ್ಷ್ಯ ವಿರಲಿಲ್ಲ. ಅವಳು ಅವರಿಗೆ ಒಂದೆ ಸಮನೆ ಊಟಕ್ಕೇಳುವದಕ್ಕೆ ಸೂಚಿಸು ತ್ತಿದ್ದಳು. "ಹೂಂ, ಹೋಗುವೆನೇಳು" ಎಂದು ಅವರು ಮತ್ತೆ ಮಾತನಾಡ ಹತ್ತಿದರು. ಆಗ ಅವಳು ನಿಶ್ಚಿತವಾಗಿ ಹೇಳಿದಳು: "ಭಾವೂ ಸಾಹೇಬ, ನಾನು ಈಗ ಏನನ್ನೂ ಕೇಳಿಕೊಳ್ಳಲು ಸಿದ್ಧಳಿಲ್ಲ. ನೀವು ಹೋಗಿರಿ ನೋಡೋಣ. ಮಾಣಿಕಳದೆಷ್ಟು ಹೊತ್ತು ನಿಮ್ಮ ದಾರೀ ನೋಡಬೇಕು?" ಅದಕ್ಕುತ್ತರವಾಗಿ ಮಾಣಿಕಳೆಂದಳು: "ಏನೂ ಬೇಡ. ನಿಮ್ಮ ಮಾತು ಮುಗಿಯಲಿ. ನಾನಿಲ್ಲೇ ಅಡಿಗೆಮನೆಯಲ್ಲಿರುತ್ತೇನೆ. ನಿಮ್ಮದಾದೊಡನೆ ಹೇಳಿರಿ ಅಂದರೆ ಆಯಿತು." ಮಾಣಿಕಳ ಬಾಯಿಂದ ಮೊಟ್ಟಮೊದಲನೆಯ

ಸಲ ವೈಷಮ್ಯದ ಭಾವನೆ ಹೊರಬಿದ್ದಿತ್ತು. ಅಚಲಾ ಮತ್ತು ಭಾವೂ ಸಾಹೇಬರಿಬ್ಬರಿಗೂ ಅದು ಚಮತ್ಕಾರವೆನಿಸಿತು. ಮಾಣಿಕ ಒಮ್ಮಿಂದೊಮ್ಮೆ ಇಷ್ಟೇಕೆ ಕೋಪಿಸಿದಳು ಎಂಬುದು ಇವರಿಬ್ಬರಿಗೂ ಅರ್ಥವಾಗಲೇ ಇಲ್ಲ. ಇಷ್ಟೊತ್ತಿನ ವರೆಗೆ ನಡೆದಿದ್ದ ನಗೆ ಚೇಷ್ಟೆಗಳ ವಾತಾವರಣ ಒಮ್ಮೆಲೆ ಕಳೆಗುಂದಿದಂತಾದ್ದರಿಂದ ಎಲ್ಲರಿಗೂ ವಿಷಾದವಾದಂತೆನಿಸಿತು. ಆದರೆ ಮಾಣಿಕ ಆ ರೀತಿ ಭಾವೂಸಾಹೇಬರ ಮೇಲೆ ಸಿಟ್ಟಾಗುವದು ಅಚಲೆಗೆ ಆಗ ಸ್ವಾಭಾವಿಕವೇ ಎನ್ನಿಸಿತು.

ಒಂದು ದಿವಸ ಹೀಗೆ ಅವರು ಮೂವರೂ ಮಾತಾಡುತ್ತಾ ಕುಳಿತಿದ್ದರು. ಹುಡುಗರು ಹತ್ತಿರದಲ್ಲಿ ಆಟವಾಡುತ್ತಿದ್ದವು. ಭಾವೂಸಾಹೇಬರು ಕುಳಿತಲ್ಲಿಗೇ ಶಾಮು ಬಂದು ಅವರ ಕೊರಳಿಗೆ ಕೈ ಸುತ್ತಿ ಅವರ ಮೈಗೆ ಮೈ ತಿಕ್ಕಲಾರಂಭಿಸಿದ. "ಛೆ ಇದೇನೋ ಶಾಮೂ? ಸ್ವಲ್ಪ ದೂರ ಸರಿದು ಕೂಡ್ರಲ್ಲ, ನೋಡೋಣ" ಎನ್ನುತ್ತ ಶಾಮುನನ್ನೆತ್ತಿ ದೂರ ಕುಳ್ಳಿರಿಸಿ ಅವರು ತಮ್ಮ ಮಾತನ್ನು ಹಾಗೆಯೇ ಮುಂದುವರಿಸಿದರು. ಕೂಡಲೆ ಮಾಣಿಕ ಅಲ್ಲಿಂದೆದ್ದು ಅಡಿಗೆಮನೆಗೆ ನಡೆದಳು. "ಶಾಮಾ" ಎಂದು ಅವನನ್ನು ಒದರಿ ಕರೆದಳು. ಶಾಮು ಓಡುತ್ತ ಒಳಗೆ ನಡೆದ. ಮಾಣಿಕ ತನ್ನ ಮನದೊಳಗಿನ ಸಂತಾಪವನ್ನೆಲ್ಲ ಆ ಹುಡುಗನ ಮೇಲೆ ಹರಿ ಬಿಟ್ಟಳು. "ಇನ್ನೊಮ್ಮೆ ಏನಾದರೂ ಹೋಗುವೆಯೇನು ಹಾಗೆ ನಡುವೆ, ದೊಡ್ಡವರು ಮಾತನಾಡುತ್ತಿರುವಾಗ?" ಎನ್ನುತ್ತ ಆ ಅರಿಯದ ಬಾಲಕನ ಬೆನ್ನ ಮೇಲೆ ಮೂರು ನಾಲ್ಕು ಏಟು ಕೊಟ್ಟಳು. ಅದನ್ನು ಕೇಳಿ ಅಚಲೆ ಒಳಗೆ ಓಡುತ್ತ ನಡೆದಳು. "ಇದೇನೇ ಇದು, ಮಾಣಿಕ? ಅವನನ್ಯಾಕೆ ಹಾಗೆ ಹೊಡೆದದ್ದು?" ಅವಳಿಗೇನೂ ಉತ್ತರ ಕೊಡದೆ, ಶಾಮುನನ್ನೇ ಉದ್ದೇಶಿಸಿ, ಕಣ್ಣರಳಿಸುತ್ತ ಮಾಣಿಕಳೆಂದಳು: "ಸ್ವಲ್ಪವೇನಾದರೂ ನಾಚಿಕೆಯೆಂಬುದಿದ್ದರಲ್ಲವೇ ಜೀವಕ್ಕೆ? ಇಪ್ಪತ್ತೆಂಟು ಸಲ ಹೇಳಿರಬಹುದು, ದೊಡ್ಡವರು ಮಾತನಾಡುತ್ತ ಕುಳಿತಿರುವಾಗ ಹಾಗೆ ನಡುವೆ ಹೋಗಬಾರದೆಂದು."

"ಅಲ್ಲೇ, ಅವನಿಗ್ಯಾತರದೇ ಅದೆಲ್ಲದರ ತಿಳಿವಳಿಕೆ? ಮತ್ತು ಎಲ್ಲಾ ಬಿಟ್ಟು ಇಂದೇ ಏನಿದು ನಿನ್ನ ಈ ಚಿಕ್ಕವರು ದೊಡ್ಡವರೆನ್ನುವ ಹುಚ್ಚು ಜಾಣತನ?" ಅವಳಿಗೆ ಸರಿಯಾಗಿ ಉತ್ತರ ಕೊಡಬೇಕೆಂದು ಮಾಣಿಕಳ

ಮನಸ್ಸಿನಲ್ಲಿ ಬಂದಿತು. ಆದರೆ ಅವಳಿಗೆ ಮಾತನಾಡುವ ಧೈರ್ಯವಾಗಲಿಲ್ಲ. ಅವಳು ಹಾಗೆಯೇ ಮೂಕಳಾಗಿ ಕೆಲಸಕ್ಕೆಂದು ನಡೆದಳು. ಅಚಲೆಗೆಲ್ಲವೂ ಅರ್ಥವಾದಂತಾಯಿತು.

ಅಚಲೆಗೆ ಈ ಮಾತು ಒಂದೆ ಸವನೆ ಮನಸ್ಸಿನಲ್ಲಿ ಕೊರೆಯಲಾರಂಭಿಸಿತು. ಮಾಣಿಕಳ ಮನದಲ್ಲಿ ಬೇರೂರಿ ಬೆಳೆಯುತ್ತಲಿದ್ದ ವೈಷಮ್ಯಭಾವನೆ ಅವಳ ಬಾಯಿಂದ ರೂಪುಗೊಂಡು ಬಂದಿತ್ತು. ಮೊದಲು ಸಲವೊಮ್ಮೆ ಆ ರೀತಿಯಾದಾಗ ತನ್ನದೇ ಮಾಣಿಕಳ ವಿಷಯವಾಗಿ ತಪ್ಪು ಕಲ್ಪನೆಯಾಗಿರಬಹುದೆಂದು ಅಚಲೆಗೆನ್ನಿಸಿತ್ತು. ಈ ಎರಡನೇ ಪ್ರಸಂಗದಿಂದ ಸಂದೇಹ ದೃಢವಾಯಿತು. ವೈಮರೆತು ಹೊರಟಿರುವಾಗ ಹಿಂದಿನಿಂದ ಏಟು ಬಿದ್ದರೆ ಆಗುವಂತೆ ಅವಳ ಮನದ ಸ್ಥಿತಿಯಾಯಿತು. ಈಗ ಅವಳ ಮನವನ್ನು ತಟ್ಟಿದ ಮೊದಲವಿಚಾರ ಮಾಣಿಕಳನ್ನೇ ದೋಷಿಯನ್ನಾಗಿ ನಿರ್ಧರಿಸಿತು 'ಮಾಣಿಕ, ಎಂತಹ ಹುಚ್ಚಿಯವಳು! ತೀರ ಚಿಕ್ಕವರಿದ್ದಾಗಿನಿಂದ ಕೂಡಿ ಆಡಿದೆವು, ಬೆಳೆದೆವು. ಅವಳು ಮದುವೆಗೆ ಸಿದ್ಧವಾಗಿಂಲಿಲ್ಲ. ನಾನೇ ಅವಳ ಮನ ಒಲಿಸಿ ಸಿದ್ಧಗೊಳಿಸಿದೆ. ನನ್ನಲ್ಲಿ ಅಕ್ಕರೆಯಿಂದ, ವಿಶ್ವಾಸದಿಂದ ತನ್ನೆಲ್ಲ ಸಾವಿರ ಸಂದೇಹಗಳನ್ನು, ಗುಪಿತಗಳನ್ನು ಬಿಚ್ಚಿ ತೋರಿಸಿದಳು. ನಾನೇ ಅವಳನ್ನು ಸಮಾಧಾನಪಡಿಸಿದೆ. ಅವಳ ಮನದ ಸಂಶಯಗಳನ್ನು ನಾನೇ ನಿರಸನಗೊಳಿಸಿದೆ. ಹೀಗೆ ಜೀವಕ್ಕೆ ಜೀವ ಜೋಡಿಸಿ ಬೆಳೆದ ಅದೇ ನನ್ನ ಮೇಲೆ ಅವಿಶ್ವಾಸವೆಂದರೇನು? ಅವಳೆದುರಿಗೇ ಕುಳಿತು ಆಡುವ ನಾಲ್ಕು ಮಾತುಗಳಿಗಾಗಿ ಅವಳಿಗಿಂತಹ ಸಂತಾಪವೇಕೆ? ಮಾಣಿಕ ಯಾವಾಗಲೂ ದೊಡ್ಡ ಮನಸ್ಸಿನವಳಲ್ಲವೇ ಅಲ್ಲ. ಆಗ ಹೇಗಿದ್ದಳೋ ಹಾಗೇ ಇದ್ದಾಳೆ ಇನ್ನೂ. ಎರಡು ಮಕ್ಕಳ ತಾಯಾದರೂ ಮನದ ಉಯ್ಯಾಲೆ ತೂಗುವದು ಬಿಟ್ಟಿಲ್ಲವಿನ್ನೂ.' ಆದರೆ ಈ ವಿಚಾರ ಮುಗಿಯುವದರೊಳಗಾಗಿಯೇ ಇನ್ನೊಂದು ಏರಿ ಬಂದಿತು. 'ಆದರೆ ಭಾವೂಸಾಹೇಬರದೆ ಇದರಲ್ಲಿ ಎಲ್ಲ ತಪ್ಪು. ಮಾತನಾಡಹತ್ತಿದರೆಂದರೆ ತೀರಿತು. ಅದಕ್ಕೇನಾದರೂ ಕೊನೆ ಮೊದಲೆಂಬುದಿದ್ದರಲ್ಲವೆ?' ಕೂಡಲೆ ಮೂರನೆಯ ಸ್ವರವೊಂದು ಎದ್ದಿತು. 'ಮತ್ತೆ ನೀನು? ನಿನಗೇನಾದರೂ ಆಯ ಅಳತೆ ಇದ್ದಿತೇನು?' ಎರಡೆರಡು ತಾಸುಗಳ ವರೆಗೆ ಹೊಡೆದ ಹರಟೆಯ ನೆನಪನ್ನು ಮನಸ್ಸು ಉಪಹಾಸ

ಪೂರ್ವಕವಾಗಿ ಸಾದರಪಡಿಸಿತು. 'ನೀನ್ಯಾಕೆ ಹೋಗಿದ್ದೆ? ನೀನು ಯಾತಕ್ಕೆ ಮಾತನಾಡಿದೆ? ಯಾವ ಭಾವನೆಯಿಂದ ಭಾವೂಸಾಹೇಬರೊಡನೆ ಮಾತನಾಡುತ್ತಲಿದ್ದೆ?' ಅಚಲೆ ತನ್ನಷ್ಟಕ್ಕೆ ತಾನೇ ಕಠಿಣಳಾದಳು. ಚುಚ್ಚಿದ ಮುಳ್ಳನ್ನು ತೆಗೆಯಲು ಸೂಜಿಯಿಂದ ಸುತ್ತಲೂ ಕೆದರಿ ತೆಗೆಯಲೇಬೇಕಲ್ಲವೆ?

'ಶಾಲೆಯಿಂದ ದಣಿದು ಬಂದೆಯೆಂದು ನೀನು ಮಾಣಿಕಳ ಕಡೆಗೆ ಹೋಗುತ್ತಲಿದ್ದೆ. ಆದರೆ ಮಾಣಿಕಳಿಗಿಂತ ಭಾವೂಸಾಹೇಬರ ಸಂಗಡ ಮಾತನಾಡುವದರಲ್ಲಿಯೇ ನಿನಗೆ ಹೆಚ್ಚು ಸುಖವೆನಿಸುತ್ತಿತ್ತೋ ಇಲ್ಲವೊ? ನಿನಗೇಕೆ ಹಾಗೆನಿಸಿತು. ಮಾಣಿಕಳ ಶಬ್ದದೊಳಗಿಲ್ಲದ ಸವಿ ನಿನಗೆ ಭಾವೂಸಾಹೇಬರ ಶಬ್ದಗಳೊಳಗೆ ದೊರೆಯುತ್ತಿದ್ದಿಲ್ಲವೆ? ಈ ಆಕರ್ಷಣವೇಕಾಗುತ್ತಿದ್ದಿತು ನಿನಗೆ?' ಅವಳಿಗೆ ತನ್ನ ಮೇಲೆಯೇ ಸಂತಾಪವುಂಟಾಯಿತು. ನೀರಿನಿಂದ ದೂರವಾಗಿದ್ದ ಬಳ್ಳಿಯ ಬೇರುಗಳು ನೀರಿದ್ದ ದಿಶೆಯಲ್ಲಿಯೇ ಬೆಳೆಯಹತ್ತುವದು ಅವುಗಳ ಸ್ವಭಾವ ಧರ್ಮ. ಮನುಷ್ಯನ ಮನಸ್ಸಾದರೂ ಆ ನಿಯಮಕ್ಕೆ ಅಪವಾದವಾದುದಲ್ಲ. ಸುಖದ ತಂಪು ಸುಧೆ ಎಲ್ಲಿಂದ ದೊರೆಯುವುದೋ ಆ ಕಡೆಗೆ ತಿಳಿದೂ ತಿಳಿಯದೆಯೇ ಆಕರ್ಷಿತವಾಗಿ ಆ ಸುಖದ ಆಸ್ವಾದನೆಯನ್ನು ಮಾಡಲು ಮನಸ್ಸು ಹವಣಿಸುತ್ತಿರುತ್ತದೆ.

ಸಹಾನುಭೂತಿಶೂನ್ಯವಾದ ಒಣ ಮರಳುಗಾಡಿನಲ್ಲಿ ಬಿಡಲ್ಪಟ್ಟಿದ್ದ ಅಚಲೆಯ ಮನಸ್ಸು ಸಹಾನುಭೂತಿಯ ತಂಪನ್ನು ಹುಡುಕುತ್ತ ಅಲೆಯುತ್ತಲಿತ್ತು. 'ಭಾವೂಸಾಹೇಬರ ಸರ್ವಸ್ವವೂ ಮಾಣಿಕಳದೇ ಆಗಿರುವಾಗ ತಾನು ಅವರ ಸಹಾನುಭೂತಿಯನ್ನಪೇಕ್ಷಿಸುವದು ಮಹಾಪರಾಧವಲ್ಲವೆ?' ಅವಳ ತಲೆ ತುಂಬ ವಿಚಾರಗಳೆದ್ದವು. ಭಾವೂಸಾಹೇಬರೊಡನೆ ಮಾತನಾಡುವಾಗ ಅವಳಿಗಾವ ಕೀಳು ಆಸೆಯೂ ಇರುತ್ತಿರಲಿಲ್ಲ. ಅವರು ಮಾಣಿಕಳ ಮೇಲೆ ಕರೆಯುತ್ತಿದ್ದ ಮಳೆ ಬರಬಿದ್ದು ಬತ್ತಿಹೋಗಬೇಕೆಂದು ಅವಳೆಂದಿಗೂ ಆಶಿಸಿರಲಿಲ್ಲ. ಆದರೆ ಇದೂ ಅಷ್ಟೇ ಸತ್ಯವಾದ ಮಾತಾಗಿತ್ತು— ತನ್ನ ದುರ್ದೈವಿ ಜೀವನದ ಕರುಣಕತೆಯನ್ನು ನೆನೆದು ಮಾಣಿಕಳು ಪಡುವ ಪಾಡಿಗಿಂತ ಭಾವೂಸಾಹೇಬರು ತೋರುತ್ತಿದ್ದ ಸಹಾನುಭೂತಿ ಅವಳಿಗೆ ಮಹತ್ವದ್ದೆನ್ನಿಸುತ್ತಿತ್ತು. ಈ ಸಹಾನುಭೂತಿಯ ಜಗತ್ತು ಬಹು ವಿಚಿತ್ರ

ವಾದದ್ದಿದೆ. ಕೇವಲ ಸಹಾನುಭೂತಿಯ ಪ್ರದರ್ಶನದಿಂದ ಮೃದು ಮನ ವೊಂದು ತನಗಿಂತ ಸಹಸ್ರ ಪಾಲು ಸಾಮರ್ಥ್ಯಶಾಲಿಯಾಗಬಲ್ಲದು.

ನೀರಸವಾದ ತನ್ನ ಜೀವನದೊಡನೆ ಹೋರಾಡಲು ಬೇಕಾಗುವ ಶಕ್ತಿಯನ್ನು ಬಾಬಾ, ಭಾವೂಸಾಹೇಬ, ಮಾಣಿಕ ಇವರ ಸಹಾನುಭೂತಿಯೇ ಅವಳಿಗೆ ಒದಗಿಸಿಕೊಡುತ್ತಿದ್ದಿತು. ಆದರೆ ಅವರಿಂದ ಸಹಾನುಭೂತಿ ಪಡೆದೇ ಜೀವಿಸಲೆಳಸುವದೂ, ಮೃತ್ಯುಮುಖದಲ್ಲಿದ್ದೊಬ್ಬನ ಶರೀರದಲ್ಲಿ ಪ್ರಾಣ ವಾಯುವನ್ನು ತುಂಬಲೆಳಸುವದೂ ಒಂದೇ ಆಗಿದ್ದಿತು. ಅದರಲ್ಲಿ ಅವಳ ಸ್ವಂತದ ಸಾಮರ್ಥ್ಯವೆಂಬುದೆಲ್ಲಿದ್ದಿತು? ಬಾಬಾ, ಭಾವೂಸಾಹೇಬ ಮತ್ತು ಮಾಣಿಕ ಈ ಮೂವರ ಸಹಾನುಭೂತಿಯ ಮೇಲೆ ಶಕ್ತಿ ಗಳಿಸಲೆಳಸುವ ತನ್ನ ಮನದ ರೂಪರೇಷೆಗಳನ್ನು ಅಚಲೆ ಸರಿಯಾಗಿ ಕಂಡುಕೊಂಡಳು.

ತನ್ನ ಸ್ವಂತದ ನಿರ್ಭತ್ಸನೆಯನ್ನೇ ಮಾಡಲು ಹೊರಟ ಅವಳ ಮನಸ್ಸು ಸಹಜವಾಗಿ ಅವಳ ತಿಳಿವಳಿಕೆಯಿಲ್ಲದೆ ಘಟಿಸಿದ ಸಂಗತಿಗಳನ್ನು ಕೂಡ ಭಯಂಕರ ಬಣ್ಣ ಬಳಿದು ತೋರಿಸಲಾರಂಭಿಸಿತು. ಒಮ್ಮೊಮ್ಮೆ ಹೀಗೂ ಆಗುವದುಂಟಲ್ಲ?—ತಮ್ಮ ದುಃಖದ ಸ್ಥಿತಿಯ ವಿಷಯವಾಗಿ ಯಾರಾದರೂ ಸಹಾನುಭೂತಿಪರವಾಗಿ ಮಾತನಾಡಿದರೆಂದರೆ ತಮ್ಮ ದುಃಖದ ಬದಲು ಆ ವ್ಯಕ್ತಿಯ ವಿಷಯವಾಗಿ ಎಳೆತ ವಿಶೇಷವಾಗುವದು. ಕಠೋರಳಾಗಿ ತನ್ನನ್ನು ತಾನೇ ಪರೀಕ್ಷಿಸುತ್ತಿರುವಾಗ ಅಚಲೆಗೆ ಇದೇ ಕಂಡು ಬಂದಿತು. ಹಿಂದಕ್ಕೆ ಘಟಿಸಿ ದೂರವಾಗಿದ್ದ ಅವಳ ಕರುಣಾವ್ಯಂಜಕ ಕತೆಯ ಬಗ್ಗೆ ಭಾವೂಸಾಹೇಬರು ಸಹಾನುಭೂತಿಪೂರ್ವಕವಾಗಿ ಮಾತನಾಡಿದಾಗ ಲೆಲ್ಲ ತನ್ನ ಸ್ವಂತದ ದುರ್ದೈವದ ವಿಷಯವಾಗಿ ಖೇದವೆನಿಸುವದಕ್ಕಿಂತ ಆಸ್ಥೆಯಿಂದ ಮಾತನಾಡುವ ಭಾವೂಸಾಹೇಬರ ವಿಷಯವಾಗಿಯೇ ಅವಳಿಗೆ ಹೆಚ್ಚು ಆತ್ಮೀಯತೆಯೆನಿಸುತ್ತಿತ್ತು. ಆ ಎಳೆತದಲ್ಲಿ, ಯಾವ ತರದ ಹೀನ ಭಾವನೆಯೂ ಇರಲಿಲ್ಲ. ಆದರೆ ಹೀನ ಭಾವನೆಯಿಲ್ಲದಿದ್ದರೂ ಅವರಲ್ಲಿ ಈ ವ್ಯರ್ಥವಾದ ಆತ್ಮೀಯತೆಯನ್ನುಂಟುಮಾಡುವ ಅಧಿಕಾರವಾದರೂ ಏನಿತ್ತು ಅವಳಿಗೆ? ಮಾಣಿಕಳಿಗೆ ತಡೆಯಲಿಲ್ಲ, ಸಂತಾಪವುಂಟಾಯಿತು. 'ಅದರಲ್ಲಿ ತಪ್ಪೇನೂ ಇಲ್ಲ. ಅವಳದು ಸರಿಯಾದುದೇ. ತಪ್ಪೆಲ್ಲ ನನ್ನದೇ. ತಮ್ಮ ಮನಸ್ಸಿನ ಸಾಮರ್ಥ್ಯವನ್ನು ಇತರರ ಸಹಾನುಭೂತಿಯ ಮೇಲೆ ಕಟ್ಟುವದ

ಕ್ಕಿಂತ ಸ್ವಂತದ ಬಲದ ಮೇಲೆ ನಿಲ್ಲಿಸುವದೇ ಹೆಚ್ಚು ಪ್ರಾಮಾಣಿಕವಾದುದು. ಇತರರ ಸಹಾನುಭೂತಿಯೊಡನೆ, ಅದರಲ್ಲಿಯೂ ಪುರುಷರ ಸಹಾನುಭೂತಿಯೊಡನೆ ವೈಮರೆತು ಆಟವಾಡುವದು—ಕೆಲವು ವೇಳೆ ಬೆಂಕಿಯೊಡನಾಟಕ್ಕಿಂತಲೂ ಭಯಂಕರವಾದುದು!'

೮

ಎಲ್ಲ ಸಂಗತಿಗಳೂ ಹೇಳಿ ಮಾಡಿಸಿದಂತೆ ಕೂಡಿಬಂದಿದ್ದವು. ಅಚಲೆಯ ಶಾಲೆಯ ಕೆಲಸದ ಅವಧಿ ಮುಗಿಯುತ್ತ ಬಂದಿತ್ತು. ಅವಳ ಎಳೆ ಮನದ ಆನಂದವೂ ಅಳಿಸಿಹೋಗಿತ್ತು. ಮಾಣಿಕರ ವಿಷಯವಾಗಿ ನಡೆದ ಪ್ರಸಂಗವಂತೂ ಅಚಲೆಯ ಮನಸ್ಸಿನಲ್ಲಿ ಶಲ್ಯವಾಗಿ ನಟ್ಟಿತ್ತು. ಬಾಬಾ ಮತ್ತು ಸಿಂಧೂ ಇವರಿಂದ ಅವಳು ತನ್ನನ್ನು ತಾನೇ ದೂರವಾಗಿರಿಸಿಕೊಂಡಿದ್ದಳು. ಶಾಲೆಯ ಕೆಲಸದ ಮೂಲಕ ಅವಳು ಕಂಡಿದ್ದ ಹೊಸ ಬಾಳಿನ ರೀತಿಯಲ್ಲಿ ಕೊನೆಯವರೆಗೆ ನಿಲ್ಲುವ ಆನಂದ ಲಭಿಸಬಹುದೆಂದು ಅವಳಿಗೆನ್ನಿಸಿತು. ಇದರಿಂದ ಬಾಬಾ, ಅತ್ತಿಗೆ, ಮಾಣಿಕ, ಭಾವೂಸಾಹೇಬ ಇವರೆಲ್ಲ ತನ್ನ ಸಂಗದ ಯಾವ ರೀತಿ ನಡೆದುಕೊಳ್ಳುತ್ತಾರೆ ಎನ್ನುವ ವಿಚಾರವನ್ನೇ ವ್ಯರ್ಥವಾಗಿ ಮಾಡುತ್ತ ಕಳೆಯುವದಕ್ಕಿಂತ ತನ್ನ ಅಂತಸ್ಥ ಸಾಮರ್ಥ್ಯವನ್ನು ಪ್ರಕಟಗೊಳಿಸಲು ಸಾಧನವೊಂದು ಬಾಳಿನಲ್ಲಿ ತನಗೆ ದೊರೆಯಿತೆಂದು ಅವಳಿಗೆನಿಸಿತು. ಆದ್ದರಿಂದಲೇ ಅವಳು ಅಕೋಲೆಯಲ್ಲಿಲ್ಲವಾದರೆ ಬೇರೆ ಎಲ್ಲಿಯಾದರೂ ತನಗೆ ಕೆಲಸ ದೊರೆವಲ್ಲಿಗೆ ಹೋಗಲು ಸಿದ್ಧಳಾದಳು.

ತನ್ನ ಶಾಲೆಯ ಕೆಲಸದ ಬಗ್ಗೆ ತಮಗಾದ ಅಭಿಪ್ರಾಯವನ್ನು ಸೂಚಿಸಿ ತನಗೊಂದು ಶಿಫಾರಸು ಪತ್ರವನ್ನು ಕೊಡಬೇಕೆಂದು ಅವಳು ಮುಖ್ಯಾಧ್ಯಾಪಿಕೆಯನ್ನು ಕೇಳಿಕೊಂಡಳು. ಹೊಸದಾಗಿ ಕೆಲಸ ಕೈಕೊಂಡವಳೆಂಬ ದೃಷ್ಟಿಯಿಂದ ಅಚಲೆಯ ಕೆಲಸ ಚೆನ್ನಾಗಿತ್ತು. ಆದರೆ ಅವಳ ನಡತೆ ಅದಕ್ಕಿಂತ ಪ್ರಭಾವಯುತವಾದುದಾಗಿತ್ತು. ಅದರಿಂದ ಅವಳ ಸಾಮಾನ್ಯವಾದ ಒಳ್ಳೆಯ ಕೆಲಸವೂ ಅತ್ಯಂತ ಉತ್ತಮವಾದುದಾಗಿ ತೋರುತ್ತಿತ್ತು. ಅವಳು ಒಂದೆರಡು ಕಡೆಗೆ ಅರ್ಜಿಗಳನ್ನೂ ಕಳಿಸಿದಳು. ಆದರೆ ಅವಳಿಗೆ ನಿರಾಶಾಜನಕವಾದ ಉತ್ತರಗಳೇ ಬಂದವು. ಹೀಗೆ ಎರಡು ತಿಂಗಳುಗಳು ಕಳೆದು

ಹೋದವು. ಕೊನೆಗೆ ಆಕಸ್ಮಾತ್ತಾಗಿ ನಾಗಪುರಕ್ಕೆ ಮಾಡಿದ ಅರ್ಜಿಯೊಂದಕ್ಕೆ ಅವಳಿಗೆ ಅನುಕೂಲವಾದ ಉತ್ತರ ದೊರೆಯಿತು.

ಬಾಬಾನಿಗೆ ಅಚಲೆಯ ಸ್ವಭಾವದಲ್ಲಾದ ಬದಲಾವಣೆ ತಿಳಿಯದಿರಲಿಲ್ಲ. ಆದರೆ ಅದು ಅವಳ ಈ ಹೊಸ ಉದ್ಯೋಗದ ಮೂಲಕವಾಗಿಯೇ ಇರಬೇಕೆಂದು ಅವನಿಗೆ ಎನ್ನಿಸುತ್ತಿತ್ತು. ಅಚಲೆಯಂತೂ ತನ್ನ ಅಸಮಾಧಾನವನ್ನು ಎಂದೂ ಅವನೆದುರು ವ್ಯಕ್ತಪಡಿಸಿರಲಿಲ್ಲ. ಹಾಗೆ ತೋರಗೊಡುವ ಕಾರಣವಾದರೂ ಏನು? ಅದರಲ್ಲಿ ಅವನದೇನೂ ತಪ್ಪಿರಲಿಲ್ಲವೆಂದು ಅವಳಿಗೆ ಪೂರ್ಣವಾಗಿ ತಿಳಿದಿತ್ತು. ಅವಳ ಸಂಪೂರ್ಣವಾದ ಪರಾವಲಂಬತ್ವ—ಕೇವಲ ಹಣದ ವಿಷಯವಾಗಿಯಲ್ಲ—ತನ್ನ ಸ್ವಂತದ ಭಾವನೆಗಳ ವಿಷಯವಾಗಿಯೂ ಇರುವ ಪರಾವಲಂಬತ್ವವೇ ಅವಳ ಅಸಮಾಧಾನಕ್ಕೆ ಮೂಲಕಾರಣವಾಗಿತ್ತು. ಅದನ್ನು ಕಳೆಯುವದಕ್ಕೆಂದೇ ಅವಳಿಗೆ ದೂರ ಹೋಗುವ ಇಚ್ಛೆಯಾಗಿದ್ದಿತು. ಮನಸ್ಸಿಗೆ ದುರ್ಬಲತೆಯೆನಿಸಿದಾಗ ಯಾರಾದರೂ ತನ್ನನ್ನು ಸಾಂತ್ವನಗೊಳಿಸಿದರೇ ಅದರಿಂದ ಸಮಾಧಾನವುಂಟಾಗುವ ಈ ಚಟವನ್ನು ನಿರ್ಮೂಲಗೊಳಿಸುವದೇ ಅವಳ ಉದ್ದೇಶವಾಗಿತ್ತು. ಯಾರ ಸಹಾಯವೂ ಇಲ್ಲದೆ ತಾನೇ ತನ್ನ ಅಡ್ಡಿ ಆತಂಕಗಳನ್ನು ನಿವಾರಿಸುವಂತಾಗುವದು ಅವಳಿಗೆ ಬೇಕಾಗಿದ್ದಿತು. ತನ್ನ ದುಃಖಗಳನ್ನು ಧೈರ್ಯವಾಗಿ ತಾನೇ ನುಂಗಿಕೊಂಡು ಶಾಂತಿಯನ್ನು ಪಡೆವ ಪರಿಪಾಠವನ್ನು ತನ್ನ ಮನಸ್ಸಿಗೆ ಹಾಕಿಕೊಡುವುದರ ಸಲುವಾಗಿ ಅವಳಿಗೆ ತನ್ನವರನ್ನು ಬಿಟ್ಟು ದೂರ ಹೋಗಿರಲು ಕಲಿಯಬೇಕೆನ್ನಿಸುತ್ತಿತ್ತು. ಆದ್ದರಿಂದ ಅವಳು ತನ್ನ ಅರ್ಜಿಗೆ ಉತ್ತರ ಬಂದೊಡನೆ ಆನಂದದಿಂದ ನಾಗಪುರಕ್ಕೆ ಹೊರಟಳು.

೯

ಹೀಗೆ ತಿಳಿದರೆ ಸುಖವುಂಟು; ಹಾಗೆ ತಿಳಿದರೆ ದುಃಖವುಂಟು. ಬಾಳೆಲ್ಲ ಭಣಭಣ, ಬದುಕೆಲ್ಲ ಒಣ ಒಣ, ಎನ್ನುವ ಮಾತು ಅಸಹ್ಯವಿದ್ದಷ್ಟೇ ಅಸತ್ಯವೂ ಆಗಿದೆ. ಅಚಲೆ ಆ ದಿನ ಸಂಪೂರ್ಣವಾಗಿ ಸಮಾಧಾನವಾಗಿದ್ದಳು. 'ಜಗತ್ತನ್ನು ಪ್ರೀತಿಸಿರಿ. ಅದು ತಿರುಗಿ ನಿಮ್ಮನ್ನು ಪ್ರೀತಿಸುವದೊ ಇಲ್ಲವೊ ನೋಡಿರಿ.' ಅಚಲೆಯ ಜಗತ್ತು ಮರ್ಯಾದಿತವಾದ

ದಾಗಿತ್ತು. ಅವಳ ವಿದ್ಯಾರ್ಥಿನಿಯರು, ಅವಳ ಸಹಾಧ್ಯಾಪಿಕೆಯರು, ಅವಳ ಶಾಲೆಯ ಅಧಿಕಾರಿಗಳು ಇವರಷ್ಟೇ ಅವಳ ಬಾಹ್ಯ ಜಗತ್ತನ್ನು ವ್ಯಾಪಿಸಿದವರು. ವಿಶ್ವದಲ್ಲಿ ಮತ್ತೆ ಯಾರಾರಿದ್ದರು ? ಇಲ್ಲ. ಆ ವಿಷಯವಾಗಿ ಅವಳಿಗೆ ವಿಚಾರಮಾಡುವದೂ ಬೇಡವಾಗಿದ್ದಿತು. ಅವಳು ತನ್ನ ಮರ್ಯಾದಿತವಾದ ಜಗತ್ತಿಗಾಗಿ ತ್ಯಾಗವೆಸಗುತ್ತಿದ್ದಳು. ಅವಳು ತನ್ನದೇ ಆದ ಆ ಚಿಕ್ಕ ಜಗತ್ತನ್ನು ಪ್ರೀತಿಸುತ್ತಿದ್ದಳು. ಆದರೆ ಅವಳ ಆ ಮರ್ಯಾದಿತವಾದ ಜಗತ್ತು ಅವಳನ್ನು ಪ್ರೀತಿಸುತ್ತಿತ್ತೇ ? ಅವಳಿಗೆ ಇಂದು ಅದರ ಪ್ರತ್ಯಯುವುಂಟಾಗಿದ್ದಿತು. ತೋಟಗನು ದಿನದಿನವೂ ಚಿಕ್ಕ ಚಿಕ್ಕ ಕಲಮುಗಳನ್ನು ಮಣ್ಣಿನ ಪಾತ್ರೆಗಳಲ್ಲಿ ಹಚ್ಚುತ್ತಾನೆ. ಪ್ರತಿನಿತ್ಯವೂ ಅವನು ಅವುಗಳಿಗೆ ಜೀವದ ರಸವುಣ್ಣಿಸುತ್ತಾನೆ. ಆ ಸಣ್ಣ ಸಸಿಗಳು ಚಿಗುರಿ ಬೀಗಿ ಬೆಳೆಯುತ್ತವೆ. ಹರಡಿಕೊಂಡಿರುವ ಅವುಗಳ ಗಾತ್ರವನ್ನು ನೋಡಿ ಅವನು ಆನಂದಿಸುತ್ತಾನೆ. ಆದರೆ ಅದೆಲ್ಲ ಯಾರಿಗಾಗಿ ? ಅವನಿಗಾಗಿಯೇ ? ಅಲ್ಲ, ಬೇರೊಬ್ಬರಿಗಾಗಿ. ಅವುಗಳ ಮಾಲಕನಿಗಾಗಿ. ಆದರೂ ತನ್ನ ಕೆಲಸವಲ್ಲವನಿಗೆ ಸಮಾಧಾನವುಂಟು. ಅಚಲೆಯೂ ಅಂತೆಯೇ ಆ ಕೋಮಲವಾದ ಲತೆಗಳನ್ನು ಬೆಳೆಯಿಸುತ್ತಿದ್ದಳು. ಆದರೆ ಆ ನಿಷ್ಪಾಪ ಜೀವಿಗಳು ಅವಳ ಒಂದೊಂದು ಶಬ್ದವನ್ನೂ ಆತುರತೆಯಿಂದ ತಾಸುತಾಸುಗಳ ವರೆಗೆ ಕೇಳುತ್ತ ಕುಳಿತಿರಲು, ಅವಳಿಗೆ ಹೃದಯ ತುಂಬಿಬರುವಂತೆನ್ನಿಸುತ್ತಿತ್ತು. ಆ ಚಿಕ್ಕ ಹುಡುಗಿಯರೂ ಕೂಡ ಅವಳ ಆ ಮಾತಿನ ಜ್ಯೋತಿರ್ಲಿಂಗಕ್ಕೆ ಮಾರುಹೋಗುತ್ತಿದ್ದರು. ಅವಳ ಆ ತುಂಬುಹೃದಯದ ಮಮತೆಯ ಮಾಯೆ ಆ ಚಿಕ್ಕ ಜೀವಗಳ ತನುಮನಗಳನ್ನೆಲ್ಲ ಅಪರಿಮಿತವಾದ ಸ್ನಿಗ್ಧತೆಯೊಂದರಿಂದ ತುಂಬಿಬಿಡುತ್ತಲಿದ್ದಿತು. ಕೇವಲ ಹನ್ನೊಂದು ಹನ್ನೆರಡು ವರ್ಷಗಳ ಮುಗ್ಧ ಬಾಲಿಕೆಯರವರು ! ಅವರಿಗೆ ಆ ತಮ್ಮ ಅಕ್ಕಾವರೆಂದರೆ ಏನೆನಿಸುತ್ತಿದ್ದಿತೋ !

ಇಪ್ಪತ್ತೈದರ ತುಂಬು ಪ್ರಾಯದಲ್ಲಿಯೆ ಕಟುಬಾಳಿನ ಬುತ್ತಿಯನ್ನುಂಡ ಅಚಲೆಯ ಮುಖದ ಮೇಲೆ ಒಂದು ತರದ ವಿಷಾದ ಮಿಶ್ರಿತ ಗಾಂಭೀರ್ಯ ಗೆರೆಗಳನ್ನು ಮೂಡಿಸಿತ್ತು. ಅವಳ ಆ ಸಾದುಗಪ್ಪು ಬಣ್ಣದ ಮುಖದ ಮೇಲೆ ಅತಿವಿಚಾರದಿಂದಾಗಿ ಕಾಣಿಸಿಕೊಂಡಿದ್ದ ಗಾಂಭೀರ್ಯದ ಭವ್ಯತೆಯ ಮೇಲೆ ಚಿಕ್ಕ ಹುಡುಗಿಯರ ಸಹವಾಸದಲ್ಲಿ ಮೂಡುತ್ತಲಿದ್ದ

ವಾತ್ಸಲ್ಯದ ಮೃದುಹಾಸ್ಯ ಒಂದು ವಿಶೇಷವಾದ ಕಳೆಯಿಂದ ಒಪ್ಪುತ್ತಲಿತ್ತು. ನಗುನಗುತ್ತ ಅವಳು ಕಲಿಸುತ್ತಿರುವಾಗಲೆಲ್ಲ ಆ ಹುಡುಗಿಯರು ಉಲ್ಲಾಸ ಗೊಳ್ಳುತ್ತಿದ್ದರು. ಉತ್ಸಾಹದ ಕಮಲವೃಂತದಲ್ಲಿಯೇ ಶಿಕ್ಷಣದ ಆತ್ಮಬೀಜ ವಾಗಿರುವದುಂಟು. ಮೆಲುನಗೆ ನಗುತ್ತ ಲೀಲೆಯ ಬೆರಳುಗಳಿಂದ ಅವಳು ಆ ಕಮಲದ ಮೊಗ್ಗನ್ನು ಬಿಚ್ಚಿ ಅರಳಿಸುವಳು. ಆಟವಾಡುತ್ತ ಅವಳು ಎಂತಹ ಕಠಿಣ ವಿಷಯವನ್ನೂ ಆ ಹುಡುಗಿಯರಿಗೆ ಮನಹಿಡಿಯುವಂತೆ ತಿಳಿಸಿಕೊಡುವಳು. ಶಾಲೆಯಲ್ಲಿ ಚಿಗುರು ಮೊಗ್ಗುಗಳನ್ನು ನಗಿಸಿ ನಗಿಸಿ ಅರಳಿಸುವ ಕೆಲಸದಲ್ಲಿ ಅಚಲೆ ಮೈಮರೆತುಬಿಡುವಳು.

ಆ ಹುಡುಗಿಯರಿಗೆ ಅಚಲಾಬಾಯಿಯೆಂದರೆ ಸ್ವರ್ಗದಿಂದಿಳಿದ ದೇವತೆ ಯೆಂದೇ ಎನಿಸುತ್ತಿತ್ತು. ಅವಳು ಒಳಗೆ ಬಂದೊಡನೆ ಯಾವಳೊಬ್ಬ ಹುಡುಗಿ ನಸುನಾಚುತ್ತ ಮೆಲ್ಲಗೆ ಮುನ್ನಡೆದು ಬಂದು ಅವಳ ಮೇಜಿನ ಮೇಲೆ ಹೂಗಳನ್ನಿಡುವಳು. ಅಚಲಾಬಾಯಿ ಮುಗುಳುನಗೆ ಸೂಸುತ್ತ, ಅವು ಗಳನ್ನು ಕೈಯಲ್ಲಿ ತೆಗೆದುಕೊಂಡು ಮತ್ತೆ ಮೇಜಿನ ಮೇಲೆ ಒಂದು ಬದಿಗೆ ಇಡುವಳು. ಅವಳ ಸಸ್ಮಿತ ಸ್ವೀಕಾರದಿಂದ ಆ ಹುಡುಗಿಗೆ ಆನಂದ ಉಕ್ಕು ವದು. ಅವಳು ಸ್ವಲ್ಪ ಅಭಿಮಾನಪೂರ್ವಕವಾಗಿ ಉಳಿದೆಲ್ಲ ವರ್ಗದೊಳಗಿದ್ದ ತನ್ನ ಸಹಾಧ್ಯಾಯಿಗಳ ಕಡೆಗೆ ನೋಡುತ್ತ ನೋಡುತ್ತ ತನ್ನ ಸ್ಥಳದಲ್ಲಿ ಬೇಗನೆ ಹೋಗಿ ಕುಳಿತುಕೊಳ್ಳುವಳು. ಅನಂತರ ಪಾಠಕ್ಕೆ ಪ್ರಾರಂಭ. ಯಾವುದೊಂದು ಕತೆ ಅಥವಾ ಮನಹಿಡಿಯುವ ವಿಷಯದ ಪ್ರಸ್ತಾಪದಿಂದ ಪ್ರಾರಂಭಿಸಿ ಆ ಚಿಕ್ಕ ಜೀವಗಳ ಕುಣಿದಾಡುವ ಮನಗಳನ್ನಲ್ಲಿ ತನ್ನ ಮಾತಿನ ಮೋಹದಲ್ಲಿ ಬಂಧಿಸಿ ಅಂದಿನ ಪಾಠದ ವಿಷಯ ಅವರಿಗೆ ಸಲಿಲವಾಗಿ ಸಂಪೂರ್ಣವಾಗಿ ಮನದಟ್ಟಾಗುವಂತೆ ವಿವರಿಸುವಳು. ತಮ್ಮ ಅಕ್ಕನವರ ಸಂಗಡ ಸಾಧ್ಯವಿದ್ದಾಗಲೆಲ್ಲ ಮಾತನಾಡುವ ಸುಸಂಧಿಯೊದಗಬೇಕು, ಅವರು ತಮ್ಮ ಮನೆಗೆ ಬರಬೇಕು, ತನ್ನೊಡನೆ ಆಟವಾಡಬೇಕು, ಕೊನೆಗೆ ತಾವು ಆಟವಾಡುತ್ತಿರುವಾಗಲಾದರೂ ನೋಡುತ್ತ ನಿಲ್ಲಬೇಕು—ಎನಿಲ್ಲದ ಇಂಥ ನೂರೆಂಟು ಆಸೆಗಳು ಆ ಎಳೆಯ ಜೀವಗಳ ನಿಷ್ಪಾಪ ಮನಗಳನ್ನು ಅವಳ ಕಡೆಗೆ ಎಳೆಯುವವು. ಚೈತ್ರಮಾಸದ ಗೌರಿ, ಶ್ರಾವಣದ ಗೌರಿ, ಮಾನವಮಿಯ ಬನ್ನಿ ಮುಡಿಯುವ ಹಬ್ಬ, ಸಂಕ್ರಾಂತಿಯ ಎಳ್ಳುಬೆಲ್ಲ

ಕೊಡುವ ಹಬ್ಬ—ಹೀಗೆಲ್ಲ ಇನ್ನಿತರ ಏನಾದರೂ ಉತ್ಸವದ ದಿವಸಗಳಲ್ಲಿ ಆ ಹುಡುಗಿಯರು "ಅಕ್ಕನವರೇ, ಈ ಹೊತ್ತು ನಮ್ಮ ಮನೆಗೆ ಬರುವಿರಲ್ಲವೇ, ಅರಿಷಣ ಕುಂಕುಮ ತೆಗೆದುಕೊಳ್ಳುವದಕ್ಕೆ? ಈ ದಿನ ನಿಮ್ಮನ್ನು ಕರೆದು ಕೊಂಡೇ ಬರಬೇಕೆಂದು ಹೇಳಿದ್ದಾರೆ ಮನೆಯಲ್ಲಿ" ಎಂದು ಮನೆಯವರ ಆಮಂತ್ರಣದ ಸಮ್ಮಿಳಿತ ಶಕ್ತಿಯನ್ನು ಉಪಯೋಗಿಸಿ, ಆ ಕಿಶೋರಿಯರು ಬಾಲ್ಯದ ಮುಗ್ಧತೆಯನ್ನು ಬೀರುತ್ತ ಹಟಹಿಡಿದು ಕುಳಿತುಕೊಳ್ಳುವರು. ಅರಿಷಣ ಕುಂಕುಮಕ್ಕೆಂದ ಮೇಲೆ ಇಲ್ಲವೆಂದೆನ್ನುವದು ಹೇಗೆ. ಅವಳೂ ಇಲ್ಲವೆನ್ನುತ್ತಿರಲಿಲ್ಲ. ಆದರೆ ಅವಳ ಸೌಭಾಗ್ಯ ಅದಾವಾಗಲೋ ಅಳಿಸಿ ಹೋಗಿದ್ದುದರಿಂದ ಇಂತಹ ಉತ್ಸವಗಳಲ್ಲಿ ಭಾಗಿಯಾಗುವದಕ್ಕೆ ಅವಳ ಮನಸ್ಸು ಒಪ್ಪುತ್ತಿರಲಿಲ್ಲ ಅವಳೇನಾದರೂ ನೆವ ಹೇಳಿ ತಪ್ಪಿಸಿಕೊಳ್ಳು ವಳು. ಎಳ್ಳುಬೆಲ್ಲ ಕೊಡುವ ಹಬ್ಬದ ದಿನ ಬಣ್ಣಬಣ್ಣದ ಕಾಗದಗಳ ವಿವಿಧಾ ಕಾರದ ಬುಟ್ಟಿಗಳಲ್ಲಿ ಕುಸುರೆಳ್ಳುಗಳನ್ನಿಟ್ಟುಕೊಂಡು ಬಂದು ಶಾಲೆಯಲ್ಲಿ ಮೊದಲಿನ ಎರಡು ಗಂಟೆಗಳನಂತರದ ಬಿಡುವಿನ ವೇಳೆಯಲ್ಲಿ ಅಕ್ಕನವರಿಗೆ ಅವುಗಳನ್ನರ್ಪಿಸಲು ಆ ಚಿಕ್ಕ ಮಕ್ಕಳು ಪಡುವ ತವಕ ಹೇಳತೀರದು. ಎಳ್ಳಿನ ಚಿಕ್ಕ ಕಾಗದದ ಬುಟ್ಟಿಯನ್ನು ಅಕ್ಕನವರ ಕೈಯಲ್ಲಿ ಕೊಟ್ಟು ನಮಸ್ಕರಿಸಲು ಹುಡುಗಿ ಕೆಳಗೆ ಬಾಗಿದ ಕೂಡಲೆ ಅಚಲೆ ಆಶೀರ್ವಾದ ಮಾಡುತ್ತ ಚೇಷ್ಟೆಯಿಂದ ಹೇಳುವಳು: "ಭಂಗಾರದಂಥ ಗಂಡ ಸಿಗಲಿ."

"ಇಶ್" ಪರಕಾರದ ಲಾಡಿಗಳನ್ನು ಬಿಗಿ ಮಾಡುತ್ತ ಆ ಹುಡುಗಿ ನಾಚಿಕೆಯಿಂದ ಮುಖ ಕೆಂಪಾಗಿ ಆಚೆಗೆ ಓಡುವಳು. ಕೂಡಲೆ ಅವಳ ಸುತ್ತಲೆಲ್ಲ ಇತರ ಹುಡುಗಿಯರು ಗುಂಪಾಗಿ, ನೆರೆದು "ಏನೇ, ಏನೆಂದರು ಅಕ್ಕನವರು? ಅಕ್ಕನವರು ಏನೆಂದರು" ಎಂದು ಉತ್ಸುಕತೆಯುಕ್ಕುಕ್ಕಿ ಪ್ರಶ್ನಿಸುವರು. ಹುಡುಗಿಯರ ಗುಂಪಿನಲ್ಲಿ ತೀರ ಹಿಂದಿದ್ದ ಹುಡುಗಿಯರು ಮುಂದೆ ಬಂದು ಬಂದು, ಮತ್ತೆ ಮತ್ತೆ ಆತುರತೆ ಆನಂದಗಳ ಮಿಂಚು ಮಿಂಚುವ ಕಣ್ಣುಗಳಿಂದ ಅವಳನ್ನು ನೋಡುತ್ತ, ತಿರುಗಿ ಅವೇ ಅವೇ ಅಕ್ಕನವರ ಮಾತುಗಳನ್ನು ತಿಳಿಯಲಿಚ್ಛಿಸುವರು. "ಓ, ಅಕ್ಕನವರು ಹೀಗೆಂದರು!" ಎಂದು ಹೇಳಿಕೊಂಡು ಅವೆಲ್ಲ ಚಿಕ್ಕ ಜೀವಗಳು ನಕ್ಕು ಕುಣಿಯುವವು.

ಅಕ್ಕನವರ ಅಥವಾ ಅಕ್ಕಾವರ ವಿಷಯವಾದ ಯಾವದೇ ಮಾತನ್ನು ಕೇಳಲು ಆ ಹುಡುಗಿಯರು ಯಾವಾಗಲೂ ಉತ್ಸುಕರಾಗಿರುವದುಂಟು. ಹೀಗೆ ಒಂದು ಸಲ ಶಾಲೆ ಬಿಟ್ಟನಂತರ ಆ ಹುಡುಗಿಯರೆಲ್ಲ "ಅಕ್ಕನವರೆ, ನಾವು ಆಟವಾಡುತ್ತೇವೆ, ನೀವು ಸ್ವಲ್ಪ ನಿಲ್ಲಿರಲ್ಲ. ನಮಗೆ ಆಟ ಕಲಿಸಿರಲ್ಲ" ಎಂದು ಹುಡುಗತನದ ಹಟ ಹಿಡಿದು ಕುಳಿತುಬಿಟ್ಟರು. ಹುಡುಗಿಯರಿಗೆ ಅದರಿಂದ ಮನೆಗೆ ಹೋಗಲು ಹೊತ್ತಾಗದಿರುತ್ತಿರಲಿಲ್ಲ. ಅಲ್ಲದೆ, ಅಚಲೆಗೆ ಸ್ವಲ್ಪ ತಲೆನೋವಾದಂತೆನಿಸುತ್ತಿತ್ತು. ಅವಳೆಂದಳು: "ಇದು ನೋಡಿರಿ. ಈ ದಿನ ಬಹಳ ಹೊತ್ತಾಗಿಬಿಟ್ಟದೆ. ಮತ್ತೊಂದಾದರೂ ನಾನು ನಿಲ್ಲುತ್ತೇನೆ."

ಹುಡುಗಿಯರಿಗೆ ಅಸಮಾಧಾನವಾಯಿತು. ಅದನ್ನು ನೋಡಿ ಅವಳು ತನ್ನ ಸ್ವಭಾವಸಹಜವಾದ ಹಾಸ್ಯದ ಅಸ್ತ್ರವನ್ನು ಹೊರಗೆ ತೆಗೆದಳು. "ಈ ದಿನ ಬಹಳ ಹೊತ್ತಾಗಿಹೋಗಿದೆ. ಬಹಳ ಹೊತ್ತಾಗಿ ಹೋದರೆ ನನ್ನ ಅಣ್ಣ ಸಿಟ್ಟು ಮಾಡುವ ಮತ್ತೆ!" ಹುಡುಗಿಯರಿಗೆಲ್ಲ ನಗು ಬಂದಿತು; ಆ ಮಾತನ್ನು ಕೇಳಿ ಅವರಿಗೆ ಆಶ್ಚರ್ಯವಾಯಿತು. ಒಬ್ಬ ದಿಟ್ಟ ಹುಡುಗಿಯಂತೂ ಕೇಳಿಯೇಬಿಟ್ಟಳು. "ನಿಮಗೂ ಸಿಟ್ಟು ಮಾಡುತ್ತಾರೇನು— ಇಷ್ಟು ದೊಡ್ಡವರಿಗೂ?"

"ಹೌದು. ಅಲ್ಲವೇನು? ನಾನು ಹೊತ್ತಿಗೆ ಸರಿಯಾಗಿ ಮನೆಗೆ ಹೋಗದೆ ಆಟವಾಡುತ್ತ ನಿಂತರೆ ನನಗೂ ಸಿಟ್ಟುಮಾಡಿಯೇ ಮಾಡುವರು ಮತ್ತೆ."

ಹುಡುಗಿಯರಿಗೆ ಆ ಮಾತು ಬಹಳ ಮೋಜೆನಿಸಿತು. ಅವರು ತಮ್ಮ ಪುಸ್ತಕಗಳನ್ನು ಹೊಂದಿಸಿಕೊಂಡು ಮನೆಗೆ ಹೋದರು.

ಹೀಗೆ, ತನುಮನಗಳ ಶಕ್ತಿಯನ್ನು ಧಾರೆಯೆರೆದು ಆ ಮೃದು ಲತೆಗಳನ್ನು ಬೆಳೆಯಿಸುವಾಗ ಅಚಲೆಗೆ ಒಂದು ತರದ ವಿಲಕ್ಷಣ ಆನಂದವಾಗುತ್ತಿತ್ತು. ಅವಳು ಎಲ್ಲಿಯಾದರೂ ಊರಿನ ಬೀದಿಗಳಲ್ಲಿ ನಡೆದುಹೋಗುತ್ತಿರುವಾಗ ಅವಳನ್ನು ಕಂಡು ನಾಚಿಕೆಯಿಂದ ಬಾಗಿ ಬಳುಕಿ ಸಾಗಿಹೋಗುತ್ತಿದ್ದ ಆ ಎಳೆಯ ಹುಡುಗಿಯರನ್ನು ಅವಳು ದೂರದಿಂದಲೇ ಗುರುತಿಸುತ್ತಿದ್ದಳು. ಹತ್ತಿರ ಬಂದಾಗ ಅವರು ಸ್ಮಿತವದನೆಯರಾಗಿ ಅವಳನ್ನು ನೋಡುವದುಂಟು. ಅವಳೂ ಅದಕ್ಕೆ ಉತ್ತರ ಕೊಡುತ್ತಿದ್ದಳು. ತಮ್ಮ

ತಾಯಿ ಅಕ್ಕಂದಿರು ಸಂಗಡವಿದ್ದಲ್ಲಿ ಅವರಿಗೆ ಆ ಹುಡುಗಿಯರು ವೇಲ್ಲಗೆ ಭಯಭಕ್ತಿ ಪ್ರೀತಿ ತುಂಬಿದ ಸ್ವರದಿಂದ ಆ ತಮ್ಮ ಅಕ್ಕನವರ ಪರಿಚಯ ಮಾಡಿಕೊಡುತ್ತ ಆಚಲೆಯನ್ನು ತೋರಿಸುವದುಂಟು. ಹೀಗೆ ನಾನಾವಿಧ ವಾದ ಸುಖಪ್ರಸಂಗಗಳಿಂದ ಆವಳ ಬಾಳಿಗೆ ಕಳೆಕಟ್ಟಿತ್ತು. ಆದರೆ ಕಾಲ ಕ್ರಮದಲ್ಲಿ ಈ ಆನಂದವಾರಿಧಿಯ ಉಬ್ಬರ ಇಳಿಯದಿರಲಿಲ್ಲ. ಆದರಿಂದು ಸಂಭವಿಸಿದ ವಿಶೇಷ ಪ್ರಸಂಗವೊಂದರಿಂದ ಆ ಇಳಿತಕ್ಕೆ ಬರಹತ್ತಿದ ಶರಧಿಗೆ ಮತ್ತೆ ಉಕ್ಕು ಬಂದಿತ್ತು.

ಯಾವುದೋ ಒಂದು ಸಮಾರಂಭದ ನಿಮಿತ್ತವಾಗಿ ಪರಪ್ರಾಂತದವ ರಾದ ಸೆಶೆನ್ಸ ಜಜ್ಜರಾದ ಮಾಧವರಾಯರು ಶಾಲೆಯ ಸಭೆಯಲ್ಲಿ ಮಾತ ನಾಡುವವರಿದ್ದರು. ಇಂತಹ ಸಂದರ್ಭಗಳಲ್ಲಿ ಅತಿಥಿಗಳು ಮಾತನಾಡುವ ಒಂದು ವಿಶಿಷ್ಟ ರೀತಿಯೇ ಇದೆ. ಬಂದವರು ಅಗ್ರಾಸನದಲ್ಲಿ ಕುಳಿತನಂತರ ಮೊದಲು ಅವರ ಪರಿಚಯ ಸಮಾರಂಭ. ಆನಂತರ ಅವರು ಭಾಷಣಕಾರರ ರೀತಿಯಲ್ಲಿ, ತಮ್ಮನ್ನು ಆಮಂತ್ರಿಸಿ ಆದರಿಸಿದ ಆ ಸಂಸ್ಥೆಗೂ ತಮಗೂ ಒಂದಿಲ್ಲೊಂದು ರೀತಿಯಿಂದ ಬಾದರಾಯಣ ಸಂಬಂಧವನ್ನು ಜೋಡಿಸಿ ತೋರಿಸುವದುಂಟು. ಕೊನೆಗೆ, ಹೇಳತಕ್ಕ ಮಾತು: 'ಆದ್ದರಿಂದ ಇದನ್ನು ನಾವು ನಮ್ಮದೇ ಸಂಸ್ಥೆಯೆಂದು ತಿಳಿಯುತ್ತೇವೆ. ಇಲ್ಲಿಯ ಅತ್ಯುತ್ತಮ ಶಿಕ್ಷಣಕ್ರಮವನ್ನೂ ಶಿಸ್ತನ್ನೂ ಕಂಡು ನಮಗೆ ಅತ್ಯಂತ ಆನಂದವಾಯಿತು. ಇಂಥದೊಂದು ಸಂಸ್ಥೆಗೆ ಅತಿಥಿಯಾಗಿ ಬರುವ ಮಹತ್ ಭಾಗ್ಯವನ್ನು ನನಗೆ ಒದಗಿಸಿಕೊಟ್ಟದ್ದಕ್ಕಾಗಿ....' ಇತ್ಯಾದಿ. ಶ್ರೋತೃವರ್ಗಕ್ಕೂ ಕೂಡ ಅದೆಲ್ಲದರ ಅರ್ಥ ಎಷ್ಟರಮಟ್ಟಿಗೆಂಬುದು ತಿಳಿದೇ ಇರುತ್ತದೆ. ಆದರೆ ಮಾಧವ ರಾಯರು ತಾವು ಯೂರೋಪಿನಲ್ಲಿರುವಾಗ ತಮ್ಮ ಮಗಳಿಂದ ಬರುತ್ತಿದ್ದ ಪತ್ರಗಳನುಲ್ಲೇಖಿಸಿ, ಈ ರೀತಿ ಮಾತನಾಡಿದರು:

"ಇಲ್ಲಿ ಅಧ್ಯಕ್ಷಸ್ಥಾನ ಸ್ವೀಕರಿಸಬೇಕೆಂಬ ಅಕ್ಕರೆಯ ಆಮಂತ್ರಣ ನನಗೆ ತಲಪಿದಾಗ ನಾನು ಎಷ್ಟೂ ಹಿಂದುಮುಂದು ನೋಡದೆ ಆದನ್ನು ಸ್ವೀಕರಿಸಿದುದಕ್ಕೆ ಕಾರಣವೆಂದರೆ ನನ್ನ ಮೇಲಾದ ಈ ಶಿಕ್ಷಣಸಂಸ್ಥೆಯ ಉಪಕಾರವಲ್ಲದೆ ಬೇರೆಯಲ್ಲ. ನಾವು ನಮ್ಮ ಮಕ್ಕ ಳನ್ನು ಶಾಲೆಗೆ ಹಾಕುವಾಗ ನಮಗೊಂದು ಉದ್ದೇಶವಿಲ್ಲದಿರುವದಿಲ್ಲ.

ಆದರೆ ಸಾಮಾನ್ಯವಾಗಿ ಕಂಡುಬರುವ ಮಾತೇನೆಂದರೆ ಒಂದಿಲ್ಲೊಂದು ಕಾರಣಕ್ಕಾಗಿ ಶಿಕ್ಷಕಿಯರಿಗೆ ತಮ್ಮ ಹೊಣೆಗಾರಿಕೆಯನ್ನು ಸರಿಯಾಗಿ ನೆರವೇರಿಸುವದು ಸಾಧ್ಯವಾಗುವದಿಲ್ಲ. ಮತ್ತು ವಿದ್ಯಾರ್ಥಿಗಳಿಗೂ ಕೂಡ ಶಿಕ್ಷಕಿಯರ ವಿಷಯವಾಗಿ ಇರಬೇಕಾದಷ್ಟು ಆದರವಿರುವದಿಲ್ಲ. ಆದರೆ ಪ್ರತಿ ವಾರಕ್ಕೊಮ್ಮೆ ಬರುತ್ತಿದ್ದ ನನ್ನ ಮಗಳ ಪತ್ರಗಳಲ್ಲೆಲ್ಲ ಅವಳು ತನ್ನ ಶಾಲೆಯ ವಿಷಯವಾಗಿ ಬರೆಯುತ್ತಿದ್ದ ಮಾತುಗಳಲ್ಲಿ ತನ್ನ ಶಿಕ್ಷಕಿಯರಾದ ಶ್ರೀಮತಿ ಅಚಲಾಬಾಯಿ ಲೋಣಕರ ಅವರ ವಿಷಯವಾಗಿ ಪ್ರೇಮಾದರಗಳನ್ನು ಹೊರಸೂಸುವ ಮಾತಿಲ್ಲದೆ ಇರುತ್ತಿರಲೇ ಇಲ್ಲ. ಪ್ರತಿಸಲವೂ ಅವರು ತಮಗೆಲ್ಲ ಅಕ್ಕರೆಯ ನಗೆಯನ್ನು ಬೀರುತ್ತ ಪಾಠ ಕಲಿಸುವ ಅಪ್ರತಿಮ ರೀತಿಯ ಒಂದಾದರೂ ಉದಾಹರಣೆಯನ್ನು ಕೊಡದೆ ಇಲ್ಲ ಅವಳ ಆ ಎಲ್ಲ ಪತ್ರಗಳಲ್ಲಿಯ ಮಾತುಗಳನ್ನು ಓದಿದಾಗ ಸೌ|| ಲೋಣಕರ ಅವರು ಈ ಚಿಕ್ಕ ಬಾಲಿಕೆಯರ ಮನಸ್ಸಿನ ಮೇಲೆ ಪರಿಣಾಮ ಮಾಡುವದರಲ್ಲಿ ಅದೆಷ್ಟು ಸಮರ್ಥರೆಂದೂ ಮತ್ತು ಅವರ ಎಳೆ ಮನಗಳನ್ನೆಲ್ಲ ತಮ್ಮ ಕಡೆಗೆ ವೇಧಿಸಿಕೊಂಡು, ಅವರನ್ನು ಸರಿಯಾದ ದಾರಿಯಲ್ಲಿ ನಡೆಯುವಂತೆ ಮಾಡುವ ಈ ನಡತೆಯನ್ನು ಅದೆಂತಹ ಅದ್ಭುತ ರೀತಿಯಿಂದ ಸಾಧಿಸಿದವರೆಂದೂ ನನಗೆ ಮನವರಿಕೆಯಾಗದಿರಲಿಲ್ಲ. ಇದಕ್ಕೂ ಮಹತ್ವದ ಮಾತೆಂದರೆ, ನಾನು ವಿಲಾಯತಿಯಿಂದ ಬಂದನಂತರ ನನ್ನ ಮಗಳ ನಡತೆ ರೀತಿಗಳಲ್ಲಾದ ಮಾರ್ಪಾಟನ್ನು ಸರಿಯಾಗಿ ಕಂಡುಕೊಂಡೆ. ಮತ್ತು ಅದರ ಮೂಲ ಸೌ|| ಅಚಲಾಬಾಯಿಯವರೆಂದರಿತೆ. ಈ ರೀತಿ ನಾವು ತಮ್ಮಲ್ಲಿ ಠೇವು ಎಂದು ಇಟ್ಟ ಗಂಟು ನಮಗೆ ಬಡ್ಡಿ ಸಹಿತ ತಿರುಗಿ ದೊರೆತುದಾದರೆ ಶಿಕ್ಷಕಿಯರ ವಿಷಯವಾಗಿಯೂ ಶಾಲೆಯ ವಿಷಯವಾಗಿಯೂ ನಮಗೆ ಆದರವಷ್ಟೇ ಅಲ್ಲ, ಆತ್ಮೀಯತೆಯೂ ಎನಿಸಿದರೆ ಅದು ಅಸ್ವಾಭಾವಿಕವಲ್ಲ. ನನ್ನ ಯೂರೋಪಿಯನ್ ಗೆಳೆಯರ ಹತ್ತಿರ ನಮ್ಮಲ್ಲಿಯ ಶಾಲೆ ಮತ್ತು ಶಿಕ್ಷಣದ ವಿಷಯ ಪ್ರಸ್ತಾಪಿಸುತ್ತಿದ್ದಾಗಲೆಲ್ಲ ನಾನು ನನ್ನ ಮಗಳ ಪತ್ರಗಳ ಉಲ್ಲೇಖ ಮಾಡುತ್ತಿದ್ದುದುಂಟು...."

ತನ್ನ ಬಗ್ಗೆ ಆಡಿದ ಈ ಎಲ್ಲ ಗೌರವದ ನುಡಿಗಳನ್ನು ಕೇಳಿ ಅಚಲೆಯ ಅಂತಃಕರಣ ಆನಂದದಿಂದ ಬಿರಿವಂತಾಯಿತು. 'ಅಂತೂ ಮನುಷ್ಯ ಮಾಡುವ ಸತ್ಕೃತ್ಯಗಳು ವ್ಯರ್ಥವೆಂದೂ ಆಗಲಾರವೆಂದಂತಾಯಿತು.' ಇಂದು ಅವಳ ಮನದಲ್ಲಿದ್ದ ವಿಚಾರತರಂಗಗಳು ಅವಳ ಆಂತರಿಕ ಶಕ್ತಿಯನ್ನೆಲ್ಲ ಒಟ್ಟುಗೂಡಿಸುತ್ತಿದ್ದವು. 'ಬಾಬಾ ಅದೆಷ್ಟೇ ಸ್ನಿಗ್ಧ ಹೃದಯನಾಗಿರಲೊಲ್ಲನೇಕೆ, ಅವನಿಗೆ ತನ್ನ ಸಂಸಾರವುಂಟು. ತಂಗಿಯೂ ಕೂಡ ಅದೆಷ್ಟೇ ಸುಸ್ವಭಾವಿಯಾಗಿರಲಿ, ಅವಳ ಸಂಸಾರ ಅವಳ ಮನವನ್ನೆಳೆಯದೇ ಇರಲಾರದು. ಆದರೆ ನನ್ನ ಮನವನ್ನು ಸೆರೆ ಹಿಡಿಯುವ ಸಾಧನ ಯಾವುದು? ನನಗೆ ಯಾರುಂಟು?' ತನ್ನವರೆನ್ನುವವರು ಯಾರೂ ಇರಲಿಲ್ಲ, ನಿಜ. ಆದರೇನು? ನಿಸ್ವಾರ್ಥ ಬುದ್ಧಿಯಿಂದ ಮಾಡಿದ ಪ್ರೇಮದ ಫಲ ಅವಳಿಗೆ ದೊರೆಯುತ್ತಿತ್ತಲ್ಲ. ಯಾರ ಮೇಲೆಯೂ ತನ್ನ ಭಾರ ಹಾಕದೆ, ಸ್ವತಂತ್ರಳಾಗಿ, ಸ್ವಾವಲಂಬಿಯಾಗಿ ಅವಳು ಜೀವಿಸುತ್ತಿದ್ದಳು. ಆವಳಿಗೆ ಇಲ್ಲಿಯವರೆಗೆ ಈ ನಿಷ್ಪ್ರೇಮವಾದ ಜಗತ್ತಿನ ವಿಷಯವಾಗಿ ಭೀತಿಯುಂಟಾಗುತ್ತಿತ್ತು. ಆದರೆ ಇಂದು? ಇಂದು ಅವಳು ಅದೇ ಭೀತಿಯ ಕಡೆಗೆ ಉಪಹಾಸದಿಂದ ನೋಡುತ್ತಲಿದ್ದಳು. 'ಪ್ರೇಮ? ಕರುಳು? ತನ್ನವರು?' ಛೆ, ಛೆ. ಅವೆಲ್ಲ ಬಲಹೀನವಾದ, ಧೈರ್ಯಗುಂದಿದ ಹೃನ್ಮನಗಳು ಹುಡುಕುತ್ತ ಹೋಗುವ ಮಾತುಗಳು. ನಾನು?....ನಾನು ನನ್ನ ಕಾಲಮೇಲೆಯೇ ನಿಲ್ಲುವೆ. ಆತ್ಮವಿಶ್ವಾಸದ ಭದ್ರ ತಳಪಾಯದ ಮೇಲೆ ನನ್ನ ಮನಶ್ಶಕ್ತಿಯ ಗುಡಿ ಕಟ್ಟಿ ನನ್ನ ಹೃದಯದ ಗರ್ಭಗುಡಿಯಲ್ಲಿ ಅವ್ಯಕ್ತವಾಗಿ ವಾಸವಾಗಿರುವ ಅಪ್ರತಿಮ ಶಕ್ತಿಗಳನ್ನೆಲ್ಲ ಅರಳಿಸಿ ಜಗದೆದುರಿಗೆ ಹಿಡಿಯುವೆ. ಮನಸ್ಸಿದ್ದಲ್ಲಿ ಮಾರ್ಗವುಂಟು; ಮಾಡುವವನಿಗೆ ಕಾರ್ಯವುಂಟು. ಮತ್ತು ಸತತವಾದ ಕಾರ್ಯದಲ್ಲಿ ಜೀವನದ ಸಾರ್ಥಕತೆಯಡಗಿದೆ. ಅದೇ ನಾನು ನನ್ನ ಸಂಸಾರದಲ್ಲಿ ತೊಡಗಿಹೋಗಿದ್ದಲ್ಲಿ? ಇಂದು ಜಗತ್ತಿನೊಳಗಿನ ಇತರ ಯಾವ ಕ್ಷುದ್ರ ಪದಾರ್ಥದಷ್ಟೇ ನನ್ನ ಬೆಲೆಯಾಗಿರುತ್ತಿತ್ತು. ನಾನು ತೀರಿಹೋದನಂತರ ನನ್ನ ಎರಡು ಮಕ್ಕಳು ಮಾತ್ರ ನನ್ನನ್ನು 'ಅವ್ವಾ' ಎಂದು ನೆನಸಿಕೊಳ್ಳಬಹುದಾಗಿತ್ತು. ಆದರೆ ನಾನಿಂದು ಹರಿಯಿಸುತ್ತಿರುವ ಪ್ರೇಮಸುಧೆ ಈ ಎಲ್ಲ ಚಿಕ್ಕ ಬಾಲಿಕೆಯರ ಹೃದಯಭೂಮಿಯಲ್ಲೆಲ್ಲ ಹರಿದು ಅದನ್ನು

ಫಲವತ್ತಾಗಿಸುವದು. ನನ್ನೆಲ್ಲ ತ್ಯಾಗಗಳು ಅವರ ಹೃತ್ಪಟಲದ ಹಾಳೆಗಳಲ್ಲಿ ಅಚ್ಚೊತ್ತಿದಂತೆ ಮೂಡಿಕೊಂಡು ಉಳಿಯದಿರಲಾರವು. ವ್ಯಕ್ತಿ ತನಗಾಗಿ ಅಲ್ಲದೆ ಸಮಾಜಕ್ಕಾಗಿಯೂ ಬಾಳುವದಾಗಿದ್ದಲ್ಲಿ ಈ ಎಲ್ಲ ಚಿಕ್ಕ ಮಕ್ಕಳನ್ನು ಸನ್ಮಾರ್ಗಕ್ಕೆ ಹಚ್ಚಿದ ನಾನು ಸಮಾಜಕ್ಕೂ ಭಾರವೆನಿಸುವ ಕಾರಣವಿಲ್ಲ.'

ನೀರು! ಪಸರಿಸಿರುವ ನಿಷ್ಪ್ರಭ ನಿಷ್ಕಲಂಕ ನೀರು! ಅದಕ್ಕೆ ಬಣ್ಣ ಬಣ್ಣ ಮೆರುಗು ಇಲ್ಲ. ಶುದ್ಧ ಸರಸ್ವತಿ. ಆದರೆ ಅದಕ್ಕೊಂದು ಅಸೀಮ ಶೋಭೆಯುಂಟಾಗುವದೆದರಿಂದ? ದಡದ ಕರಿ ಕಲ್ಲುಗಳ ಮೇಲೆ ಬಂದು ಅಪ್ಪಳಿಸುತ್ತಿರುವಾಗ ಅದಕ್ಕುಂಟಾಗುವ ಶೋಭೆ ಎಂತಹ ಅವರ್ಣನೀಯ ವಾದುದು! ದಂಡೆಗುಂಟ ಬೆಳೆದ ಹಚ್ಚನೆ ಹಸುರು ಮುರಿಯುವ ವನಶ್ರೀಯ ಪ್ರತಿಬಿಂಬ, ಗಗನದೊಳಗಿನ ಚಿತ್ರವಿಚಿತ್ರವಾದ ಮೋಡಗಳ ಪ್ರತಿಬಿಂಬಗಳು ಎಲ್ಲೆಮೀರಿ ಹಾಯಾಗಿ ಪವಡಿಸಿದ ನೀಳವಾದ ಆಕಾಶದ ಒಡಲು—ಇವನ್ನೆಲ್ಲ ಅದು ತನ್ನೆದೆಯಲ್ಲಿ ಸೆರೆಹಿಡಿದು ತೋರುವದುಂಟು. ಆಗ ಆ ನೀರು ಅಸೀಮ ಶೋಭೆಯಿಂದ ಬೆಳಗುವದು ಮನುಷ್ಯನ ಅಂತರಂಗ ಕೂಡ ನಿರಾಕಾರವಾಗಿಯೂ, ನಿಷ್ಪ್ರಭವಾಗಿಯೂ ಇದ್ದುದಾದರೆ ಅದಕ್ಕೆಲ್ಲಿಯ ಶೋಭೆ? ಮತ್ತು ಅದು ಯಾರ ಲಕ್ಷ್ಯವನ್ನು ಸೆಳೆದೀತು? ಕಾಮ, ಕ್ರೋಧ ಮುಂತಾದ ವಿಕಾರಗಳ ಛಾಯೆ ಅದರಲ್ಲಿ ಬಿದ್ದಿರುವದರಿಂದಲೇ ಅದು ಅಷ್ಟು ಅತರ್ಕ್ಯವಾದರೂ ಚಿಂತನೀಯವಾದುದಾಗಿದೆ. ಪ್ರತಿಯೊಬ್ಬ ಮನು ಷ್ಯನ ಮನ ಚಿತ್ರಕಾರನ ಪಟದಂತೆ ತನ್ನ ಮತ್ತು ಹೆರವರ ಷಡ್ವಿಕಾರಗಳ ಕುಂಚಲಿಯಿಂದ ರಂಜಿತವಾಗಿರುತ್ತದೆ. ಆ ಬಣ್ಣ ತೆಳುವಾದುದಾರೆ ಸುಂದರವಾಗಿ ಕಾಣುವದುಂಟು. ಅದೇ ಕೆಲವೊಮ್ಮೆ ದಟ್ಟವಾಗಿದ್ದಲ್ಲಿ ಅಸಹ್ಯವಾಗಿ ಕಾಣಬಹುದು.

ಅಚಲೆಯ ವಿಷಯವಾಗಿ ವೈಯಕ್ತಿಕವಾಗಿ ನಡೆದ ಪ್ರಶಂಸೆಯನ್ನು ಕೇಳಿ ಅವಳ ಸಹ ಶಿಕ್ಷಕಿಯರ ಮನಸ್ಸುಗಳು ಕೆಲಮಟ್ಟಿಗೆ ಮತ್ಸರದಿಂದ ಕಲುಷಿತವಾಗದೆ ಇರಲಿಲ್ಲ. ಅದೇನೂ ಅಷ್ಟು ಸ್ಪಷ್ಟವಾಗಿರಲಿಲ್ಲ, ನಿಜ. ನೀರಿನಲ್ಲಿ ಪ್ರವೇಶಿಸಿದ ಹೊಲಸು ಬಳ್ಳಿ ಮೊದಲು ಅದು ಚಿಕ್ಕದೇ ಇರುವ ದುಂಟು. ಆದರೆ ಮುಂದೆ ಅದೇ ಹರವಾಗಿ ಬೆಳೆಯಿತೆಂದರೆ ನೀರಿನ ಶುದ್ಧವಾದ ಮೈಯೂ ಕಾಣದಾಗುವದುಂಟು. ಆ ದಿನದ ಸಭೆಯನಂತರ

ರಾಧಿಕೆಯಂತಹ ಒಂದಿಬ್ಬರು ಶಿಕ್ಷಕಿಯರು ಅವಳನ್ನು ಅಭಿನಂದಿಸುತ್ತ ನುಡಿದರು. 'ಅಮ್ಮಮ್ಮ, ಇನ್ನೇನು ಕೇಳುವುದು! ಹೊರದೇಶಗಳಲ್ಲಿಯೂ ಕೂಡ ಕೀರ್ತಿಯ ಶಿರೀಷ ಕುಸುಮಿಸಿ ಕಂಪು ಬೀರಿತೆಂದಮೇಲೆ' ಅವರ ಮನದಲ್ಲಿ ಆನಂದ ಆದರಗಳಿದ್ದವು. ಮತ್ತಿಬ್ಬರು 'ಹೂಂ, ಇನ್ನೇನು ಕೇಳುತ್ತೀರಿ!' ಎಂಬ ಯಾವುದೋ ಒಂದು ವಿಚಿತ್ರ ವ್ಯಂಗ್ಯಾರ್ಥದಲ್ಲಿ ಗೋಣು ಹೊರಳಿಸಿ, ಮುಖ ಸೊಟ್ಟ ಮಾಡಿ ತಲೆಯಲ್ಲಾಡಿಸುತ್ತ ಅವಳ ಕಡೆಗೆ ನೋಡಿದರು ಮಾತ್ರ. ಇವರ ಮನಸ್ಸನ್ನು ಅಭಿನಂದನೆಗಿಂತ ತಿರಸ್ಕಾರ ಮತ್ಸರಗಳೇ ಹೆಚ್ಚಾಗಿ ಆವರಿಸಿದ್ದವು. ಮತ್ತೆ ಕೆಲವರು ಅಂತಹದೇನೂ ಮಹತ್ವ ವಿಷಯ ನಡೆಯಲಿಲ್ಲವೇನೋ ಎಂಬಂತೆ ತಮ್ಮ ಪುಸ್ತಕಗಳನ್ನು ಜೋಡಿಸಿಕೊಂಡು ಬೇಗನೆ ನಡೆದುಬಿಟ್ಟರು. ಅವರ ಮನಸ್ಸೆಲ್ಲ ಮತ್ಸರದ ವಿಷಗಾಳಿಯಿಂದ ತುಂಬಿಹೋಗಿತ್ತು. ಜನಾದರದ ವೈಚಿತ್ರ್ಯವೇ ಹಾಗಿದೆ. ಅದು ದೊರೆತಂತೆನ್ನಿಸಿದರೂ ದೊರೆಯುವುದಿಲ್ಲ. ಆದರೆ ಇಷ್ಟು ಮಾತ್ರ ನಿಜ, ನಾಲ್ಕು ಜನರಿಗೆ ಬೇಕಾದವನೆನಿಸಿದವನ ನಾಶಕ್ಕಾಗಿ ಮತ್ಸರಗ್ರಸ್ತರು ತಿಳಿದೋ ತಿಳಿಯದೆಯೋ ಒಂದೆಸವನೆ ಹೊಂಚುಹಾಕುತ್ತಲೆ ಇರುತ್ತಾರೆ!

೧೦

ಆದರೆ ಅವರೀರ್ವರೂ ಇಂದು ಕೂಡಿ ಮಾತನಾಡಿದರು ನಿಜ.

ಪರಸ್ಪರರ ವಿಷಯವಾಗಿ ಅವರಿಬ್ಬರಲ್ಲಿಯೂ ಉತ್ಪನ್ನವಾಗಿದ್ದ ಕುತೂಹಲ ಮೈತ್ರಿಯ ಬೀಜ ಬಿತ್ತಲು ಅವರ ಮನಗಳನ್ನು ಹದಗೊಳಿಸಿಟ್ಟಿದ್ದಿತು. ಆದ್ದರಿಂದ ಅವರೀರ್ವರಿಗೂ ಪರಸ್ಪರರ ಭಾವನೆಯ ಅರಿವಾಗಲು ಬಹಳ ವೇಳೆ ಹಿಡಿಯಲಿಲ್ಲ. ತಮ್ಮಿಬ್ಬರಲ್ಲಿಯ ಕುತೂಹಲ ಪರಿಚಯವಾಗಿ, ಪರಿಚಯದಿಂದ ಆತ್ಮೀಯತೆಯ ಮಾತುಗಳಾಗಿ, ಪರಸ್ಪರರ ಸ್ನೇಹಬಂಧನ ದೃಢತರವಾಗುವಂತಹ ವಿಷಯಗಳನ್ನನೇಕ ಅವರು ಚರ್ಚಿಸಿದರು. ವಿಷಯ ವೇನಿತ್ತೋ? ಇರಲೊಲ್ಲದೇಕೆ, ಉಭಯತರೂ ತಮ್ಮ ತಮ್ಮ ವಿವಾಹದ ವಿಷಯವಾಗಿ, ವೈವಾಹಿಕ ಜೀವನದ ವಿಷಯವಾಗಿ ಮನಸ್ಸು ಬಿಚ್ಚಿ ಆಡುವ ಮಾತುಗಳಿಂದ, ಒಬ್ಬರೊಬ್ಬರಿಗೆ ತಮ್ಮ ಹೃದಯವನ್ನೆಲ್ಲ ಬಿಚ್ಚಿ ತೋರಿಸುವದರಿಂದ ಅವರ ಅಂತರ್ಜೀವನದ ಸೂಕ್ಷ್ಮವಾದ ಎಳೆಗಳು

ಒಂದಕ್ಕೊಂದು ಹೆಣೆದುಕೊಳ್ಳುವದುಂಟು. ಅವರಿಬ್ಬರೂ ಸ್ತ್ರೀಯರೆ ಇರಲಿ, ಪುರುಷರೆ ಇರಲಿ ಅಥವಾ ಸ್ತ್ರೀ-ಪುರುಷರೆ ಆಗಿರಲೊಲ್ಲರೇಕೆ, ಒಬ್ಬೊಬ್ಬರೂ ಮತ್ತೊಬ್ಬರಿಗೆ ತಮ್ಮ ಮನದೊಳಗಿನ ಸುಖದುಃಖದ ಮಾತುಗಳನ್ನು ಅತಿ ವಿಶ್ವಾಸದಿಂದ ಬಿಡಿಸಿ ಹೇಳದಿದ್ದಲ್ಲಿ ಅವರೆಂದೂ ಕೀರ ಸನಿಯದ ಸ್ನೇಹಿತ ರಾಗಲಾರರು. ಅಲ್ಲಿ, ಉಪಚಾರದ ಯಾವ ಮಾತಿಗೂ ಎಡೆ ಇರುವದಿಲ್ಲ. ಅಷ್ಟೇ ಅಲ್ಲ, ಉಪಚಾರದ ಮಾತುಗಳಿಂದ, ಅನವಶ್ಯಕ ಆದರೋಪಚಾರ ಗಳಿಂದ ಪರಕೀಯತೆಯ ಭಾವನೆಯುಂಟಾಗುತ್ತದೆ. ಹಾರ್ದಿಕ ಮೈತ್ರಿಗೆ ಅದರಿಂದುಂಟಾಗುವ ಹಾನಿ ಅಷ್ಟಿಷ್ಟಲ್ಲ. ಇಂತಹ ಸ್ನೇಹದ ಏಕರೂಪತೆ ಸಾಧಿಸಿದಾಗ, ಎರಡು ಬಿಚ್ಚುಮನದ ಜೀವಗಳು ಒಂದನ್ನೊಂದು ಅಷ್ಟು ಹತ್ತಿರ ಸಮೀಪಿಸಿದಾಗ ಅದರಲ್ಲಿ ಉಚ್ಚ-ನೀಚ ಭಾವಕ್ಕೆಡೆಯಿಲ್ಲ. ಹೃದಯದ ಅಂತರ್ಯದಲ್ಲಿ ವಾಸಿಸುವ ಕೇವಲ ಸತ್ಯವಾದ ಭಾವನೆಗಳ ಪ್ರದರ್ಶನ ಪ್ರತಿಗ್ರಹಗಳಿಂದ ಒಬ್ಬೊಬ್ಬರ ಹೃದಯಗಳಲ್ಲಿ ಪ್ರವೇಶಿಸಿ ಅಲ್ಲಿ ಒಂದು ಸ್ಥಾನ ದೊರಕಿಸಿದ ನಿಷ್ಕಲ್ಮಷ ಆನಂದವೊಂದೇ ಮೈತ್ರಿಯ ವಿಶ್ವವನ್ನೆಲ್ಲ ವ್ಯಾಪಿಸಿರುವದುಂಟು.

ಕೇವಲ ಬೌದ್ಧಿಕವಾದ ಮೈತ್ರಿಯಲ್ಲಿ ಈ ಜೀವಂತವಾದ ಏಕರೂಪ ತೆಯ ನಾಡಿ ಮಿಡಿಯುತ್ತಿರಲಾರದು. ಅಥವಾ ಕೇವಲ ಬೌದ್ಧಿಕವಾದ ಮೈತ್ರಿಯಾದರೂ ಎಂತಹದು? ಸರಿಸಮಾನವಾದ ಬುದ್ಧಿಶಕ್ತಿಯುಳ್ಳವರು ಸಮೀಪಕ್ಕೆ ಬರುವದೆಂದರೆ ಎರಡು ಉನ್ಮತ್ತ ಆನೆಗಳ ಧಕ್ಕೆಮುಕ್ಕೆಯೆ ಸರಿ! ಮತ್ಸರವನ್ನಳಿದು ಅವು ಒಂದನ್ನೊಂದು ನೋಡಲಾರವು. ಅಂಥವರಲ್ಲಿ ಚೆನ್ನಾಗಿಯೇ ತಾರತಮ್ಯ ಭೇದಗಳು ಕಾಣದಿರಲಾರವು. ಅಂತಹ ಸಂದರ್ಭ ಗಳಲ್ಲಿ ಹೆಚ್ಚುಕಡಿಮೆ ಜಾಣ ಮನುಷ್ಯರ ಸಂಬಂಧಗಳು ಸೇವ್ಯ-ಸೇವಕ ರಂತೆಯೇ ಆಗಿರುವದರಲ್ಲಿ ಸಂಶಯವಿಲ್ಲ. ಜೀವಂತ ಜರಿಗಳುಳ್ಳ ಬಾವಿ ಯಿಂದ ಎಷ್ಟೇ ನೀರನ್ನು ಹೊರಗೆ ತೆಗೆದರೂ ಅದು ಮತ್ತೆ ನೀರಿನಿಂದ ತುಂಬಿಹೋಗುವದರಲ್ಲಿ ಸಂಶಯವಿಲ್ಲ! ಜೀವಂತವಾದ ಮೈತ್ರಿಯ ಜುಳು ಜುಳು ಹರಿಯುವ ಜರಿಗಳೇ ಆ ಮೈತ್ರಿಯನ್ನು ಸದಾ ಸಜೀವವಾಗಿರಿಸುವವು. ಆದರಲ್ಲಿಯೂ ಬುದ್ಧಿ ಭಾವನೆಗಳೆರಡರಿಂದಲೂ ಆದ ಮೈತ್ರಿಯಂತೂ ಇದಕ್ಕಿಂತಲೂ ಬಲವತ್ತರವಾದದ್ದು. ನೀರಿನಿಂದ ತುಂಬಿರುವ ಕಪ್ಪು ಮೇಘ

ಗಳ ಧೀರಗಂಭೀರ ಗರ್ಜನೆಯಲ್ಲಿ ಒಂದು ತರದ ಒಲವಿನ ಬುಗ್ಗೆಯುಂಟು. ಅಂತಹವುಗಳ ತಾಕಲಾಟವಾಗಿ ವಿದ್ಯುತ್ತಿನ ಬೆಂಕಿ ಉರಿದೆದ್ದರೂ ಕೂಡ ಜೀವನದ ರಸವೇ ಧಾರೆಯಾಗಿ ಹರಿಯುವದುಂಟು. ಮೈತ್ರಿಯ ರೀತಿಯೂ ಅಂತಹದೇ.

ಹಿಂದಿನಿಂದ ಬರುತ್ತಲಿದ್ದ ಬೂಟಿನ ಸಪ್ಪಳದಿಂದ ಅಚಲೆ ಬೆಚ್ಚಿದಳು. ಇಷ್ಟು ದೂರ ಬಂದಿದ್ದೇನೆಂಬ ಅರಿವು ಆವಳಿಗೆ ಆಗ ಉಂಟಾಯಿತು. ಕತ್ತಲೆಯಂತೂ ಕಣ್ಣಿದ್ದವರನ್ನೂ ಕುರುಡರನ್ನಾಗಿಸುತ್ತ ನಡೆದಿತ್ತು. ಅವಳಿಗೆ ಸ್ವಲ್ಪ ಭೀತಿಯೆನಿಸಿತು. ಅವಳು ಎಚ್ಚರದಿಂದ ಬೇಗಬೇಗ ನಡೆಯಲಾರಂಭಿಸಿದಳು. ಹಿಂದೆ ಬರುತ್ತಿದ್ದ ವ್ಯಕ್ತಿಗೆ ದೊಡ್ಡ ದೊಡ್ಡ ಹೆಜ್ಜೆಗಳನ್ನಿಡುತ್ತ ಅವಳನ್ನು ಸರಿಗಟ್ಟಲು ಬಹಳ ವೇಳೆ ಹಿಡಿಯಲಿಲ್ಲ. ತೀರ ಸಮೀಪದಲ್ಲಿಯೆ ಕಾಲಿನ ಸಪ್ಪಳ ಕೇಳಹತ್ತಿದಾಗಂತೂ ಅಚಲೆ ಅತ್ಯಂತ ಎಚ್ಚರದಿಂದ ರಸ್ತೆಯ ಒಂದು ಅಂಚಿಗೆ ನಡೆಯಹತ್ತಿದಳು. ಕತ್ತಲೆಯಿಂದ ಅವಳ ಕಣ್ಣು ಕಟ್ಟಿದಂತಾಗಿದ್ದವು. ಅವಳು, ಬರುತ್ತಿದ್ದ ವಕ್ತಿಯ ಕಡೆಗೆ ಕತ್ತಲೆಯಲ್ಲಿ ದಿಟ್ಟಿಯಿಟ್ಟು ನೋಡತೊಡಗಿದಳು.

"ಯಾರು, ಅಚಲಾಬಾಯಿ?" ಆ ಸ್ವರ ಕೇಳಿ ಅಚಲೆ ಒಂದು ಕ್ಷಣ ಕಕ್ಕಾವಿಕ್ಕಿಯಾದಳು. ಆದರೆ ಆ ಸ್ವರದ ಪರಿಚಯವಿದ್ದುದರಿಂದ ಕೂಡಲೆ ಅವಳಿಗೆ ಹಗುರೆನಿಸಿತು.

"ವಿರಾಗ?"

"ಇಷ್ಟು ದೂರ, ಒಬ್ಬರೇ........ಇಷ್ಟು ವೇಳೆಯನಂತರ?"

"ಹಾಗೇ ಬಂದೆ, ಆಯಿತು, ಮೋಜಿಗೆಂದು. ಆದರೆ ನಾನಿಷ್ಟು ದೂರ ಹೀಗೆ ಬಂದುಬಿಟ್ಟದ್ದೇನೆಂಬುದು ನನ್ನ ಲಕ್ಷ್ಯಕ್ಕೇ ಬಂದಿರಲಿಲ್ಲ, ನೋಡಿರಿ!"

ವಿರಾಗ ಕೇವಲ ಒಂದು ನಗೆ ನಕ್ಕುಬಿಟ್ಟ.

"ಯಾಕೆ ನಗುತ್ತೀರಿ?"

"ಅಂಥದೇನಿಲ್ಲ. ಒಳ್ಳೇದು, ನಾನೇನು ನಿಮ್ಮ ಸಂಗಡ ಬರಲೋ, ಮುಂದೆ ನಡೆಯಲೊ?" ಬಾಹ್ಯವಾಗಿ ನಿರ್ವಿಕಾರ ಸಹಜತೆಯನ್ನು ತೋರಿಸುತ್ತ ಅವನೆಂದ.

ಅವಳೂ ಅದೇ ರೀತಿಯಿಂದ ಉತ್ತರವಿತ್ತಳು: "ಇಷ್ಟು ಹೆದರಿಕೆಯಾಗುತ್ತಿದ್ದಲ್ಲಿ ನೀವು ಮುಂದಾಗಬಹುದು."

ಅವರೀರ್ವರೂ ಕೂಡಿ ಮುಂದೆ ನಡೆಯಲಾರಂಭಿಸಿದರು. ಅವನ ಆ ಆಧ್ಯತೆಯ ಪ್ರಶ್ನೆಯೊಳಗಿಂದಲೂ ಕೂಡ ತನ್ನ ಸಂಗಡ ನಡೆಯಲು ಅವನ ಇಚ್ಛೆಯಿರುವದೆಂಬುದು ಅಚಲೆಯ ಲಕ್ಷ್ಯಕ್ಕೆ ಬಾರದಿರಲಿಲ್ಲ. ಇನ್ನು ಬೇರೆ ಯಾವ ಸ್ತ್ರೀಯಾಗಿದ್ದಲ್ಲಿ ಅವನು ಅವಳನ್ನು ಮಾತನಾಡಿಸಬಹುದಾಗಿತ್ತು. ಆದರೆ ಇಂತಹ ಸಹಜವೆನ್ನಿಸಬಹುದಾದ ತನ್ನ ಮಾತಿನ ಸ್ವರದಲ್ಲಿ ಅವಳೊಡನೆ ಹೋಗುವ ಇಚ್ಛೆಯನ್ನು ತೋರ್ಪಡಿಸುವದು ಅಸಾಧ್ಯವಾದ ಮಾತಾಗಿತ್ತು; ಒಂದು ವೇಳೆ ಅವಳೇ ಅಂತಹ ಇಚ್ಛೆಯನ್ನು ಪ್ರದರ್ಶಿಸಿದ್ದರೂ ಕೇವಲ ನಿರ್ವಾಹವಿಲ್ಲದೆ ಅವಳ ಸಂಗಡ ನಡೆಯಬಹುದಾಗಿತ್ತು.

ನಾಗಪುರಕ್ಕೆ ಬಂದಾಗಿನಿಂದಲೇ ರಾಧಿಕೆಯ ಮನೆಗೆ ಮೇಲಿಂದ ಮೇಲೆ ಹೋಗಿಬರುವವರಾದ ಅಚಲಾ–ವಿರಾಗರ ಪರಿಚಯವಾಗಿತ್ತು ವಿರಾಗನಲ್ಲಿ ತನ್ನ ವಿಷಯವಾಗಿ ಕುತೂಹಲವಿದೆಯೆಂಬುದನ್ನು ಅವಳು ಅವನ ದೃಷ್ಟಿಯೊಳಗಿನ ಒಂದು ಸೂಕ್ಷ್ಮತೆಯನ್ನು ನೋಡಿ ಕಂಡುಕೊಂಡಿದ್ದಳು. ಅವಳಿಗಾದರೂ ಅವನ ವಿಷಯವಾಗಿ ಕುತೂಹಲವಿರಲಿಲ್ಲವೆಂದಲ್ಲ. ಆದರೆ ಏಳೆಂಟು ತಿಂಗಳು ಕಳೆದುಹೋದರೂ ಅವರೀರ್ವರಲ್ಲಿ ಒಬ್ಬರಾದರೂ ಸಹೇತುಕವಾಗಿ ತಮ್ಮ ಪರಿಚಯವನ್ನು ಬೆಳೆಯಿಸುವ ಪ್ರಯತ್ನವನ್ನೆಷ್ಟೂ ಮಾಡಿರಲಿಲ್ಲ. ವಿರಾಗನೆಂದರೆ ಅವನೊಬ್ಬ ಸುಖವಸ್ತು, ಬುದ್ಧಿವಂತ, ಸ್ವಾಭಿಮಾನಿ ವ್ಯಕ್ತಿ; ಕೆಲಸಕಾರ್ಯಗಳಿಲ್ಲದೆ ವ್ಯರ್ಥವಾಗಿ ಪ್ರಲಪಿಸುವದೆಂದರೇನೆಂಬುದು ಗೊತ್ತೇ ಇರದ ಪ್ರಾಣಿ. ಇಷ್ಟನ್ನುಳಿದು ರಾಧಿಕೆಯ ಮನೆಯಲ್ಲಿ ಯಾರಿಗೂ ಅವನ ವಿಷಯವಾಗಿ ವಿಶೇಷ ಪರಿಚಯವಿರಲಿಲ್ಲ. ಅವನ ಗತಾಯುಷ್ಯ ಎಂತಹದಿದ್ದಿರಬಹುದೆಂಬ ಬಗ್ಗೆ ಇಲ್ಲದ ಕುತೂಹಲ ಅವನ ಬಗ್ಗೆ ಯಾರಿಗೂ ಉಂಟಾಗುವಂತಿರಲಿಲ್ಲ. ಅವನು ಮೊದಲಿನಿಂದಲೂ ಚೆನ್ನಾಗಿಯೇ ಬಾಳಿ ಬದುಕಿರಲು ಸಾಕು, ಅವನು ಸಿರಿವಂತರ ಮನೆಯಲ್ಲಿಯೇ ಹುಟ್ಟಿ ಬೆಳೆದಿರಬೇಕು ಎಂದೇ ಎಲ್ಲರ ನಿಶ್ಚಿತ ಗ್ರಹಿಕೆಯಾಗಿದ್ದಿತು.

"ಯಾರಾದರೂ ಗುರುತಿನವರು ಭೆಟ್ಟಿಯಾಗಬಹುದೆಂದು ನಾನೆಷ್ಟೂ ಎಣಿಸಿರಲಿಲ್ಲ" ಎಂದು ಅಚಲೆ ಎಂದಳು.

"ಗುರುತಿನವರು? ನೀವು ನನ್ನನ್ನು ಗುರುತಿಸಿದ್ದೀರೆಂದು ನಿಮಗೆ ತಿಳಿಯಿತೆ?"

"ಹಾಗೇನೋ ಎನ್ನಿಸುತ್ತದೆ."

"ಸರಿ. ನೀವು ತಪ್ಪು ಮಾಡುತ್ತಿದ್ದೀರಿ, ಅಷ್ಟೆ."

"ಅದು ಹೇಗೆ."

"ನಾನೊಬ್ಬ ವಕೀಲನಿದ್ದೇನೆ."

"ಅಂದರೆ? ಯಾರಿಗೂ ಎಂದೂ ಗುರುತು ತಿಳಿಯದ ಪ್ರಾಣಿಯೆಂದೋ ಏನು, ವಕೀಲನೆಂದರೆ?"

"ನಿಮಗೆ ಗೊತ್ತೇ ಇದೆಯಲ್ಲ—ಉತ್ತಮ ವಕೀಲನೆಂದರೆ ಉತ್ತಮ ನಟನೆಂಬುದು? ಅವನು ತನ್ನ ಮುಖದ ಮೇಲೆ ತೋರ್ಪಡಿಸುವ ಭಾವಗಳು ಅವನ ಹೃದಯದ ಭಾವನೆಗಳಿಗೆ ತೀರ ವಿರೋಧಿಯಾದವುಗಳೆಂಬುದು ನಿಮಗೆ ಗೊತ್ತಿರಲು ಸಾಕು"

"ಅಂತೂ ಇಷ್ಟು ಜನ ಜೀವಂತ ವ್ಯಕ್ತಿಗಳೊಡನೆ ವ್ಯವಹರಿಸುವ ನೀವು ನೂರಕ್ಕೆ ನೂರು ಪಾಲು ಸೋಗು ಮಾಡುವವರೆಂದಂತಾಯಿತು."

"ಆದರೆ ತನ್ನೊಡನೆಯೇ ನಿಷ್ಠುರಳಾಗಿದ್ದುಕೊಂಡೂ ಸುಳ್ಳು ನಟನೆ ಮಾಡುವ ನಿಸ್ಸೃಷ್ಟೇನೂ ನಾನು ಮೋಸಗಾರನಲ್ಲ ಮಾತ್ರ."

"ನನ್ನನ್ನು ಚೇಡಿಸುವ ಮನಸ್ಸಾಗಿದೆಯೆಂಬಂತೆ ತೋರುತ್ತದೆ, ನಿಮಗೆ."

"ಇಲ್ಲ, ಹಾಗೇನಿಲ್ಲ. ಆದರೆ ನೀವು ನನ್ನನ್ನೇ ಸೋಗು ಮಾಡುವವನೆಂದಿರಿ, ಆದ್ದರಿಂದ ಸತ್ಯವನ್ನೇ ನುಡಿದುಬಿಡೋಣವೆನ್ನಿಸಿತು. ಅದಕ್ಕಾಗಿ ಹೇಳಿದೆ, ಅಷ್ಟೆ."

"ವಿರಾಗ, ಹಾಗಾದರೆ, ನಾನೇ ಸೋಗು ಮಾಡುವವಳೆಂದೊ?"

"ಇಡೀ ದಿನವೆಲ್ಲ ನಕ್ಕು ಕೆಲೆದು, ನಿರಾಮಯ ಆನಂದದ ನಟನೆ ಮಾಡುವ ವ್ಯಕ್ತಿಯೊಂದು ಇಷ್ಟು ದೂರ, ಕತ್ತಲೆಯಲ್ಲಿ ಒಬ್ಬಳೇ ಹೋಗುವದಲ್ಲದೆ, ತಾನು ಇಷ್ಟು ದೂರ, ಹೀಗೆ ಇಷ್ಟು ಕತ್ತಲೆಯಾಗುವವರೆಗೂ ನಡೆ

ದಿದ್ದೇನೆಂಬ ಅರಿವು ಕೂಡ ಅದಕ್ಕಿರುವದಿಲ್ಲ. ಇದರ ಮೇಲಿಂದ ಯಾವ ಮಾತು ಸ್ವಯಂಸಿದ್ಧವಾಗಿದೆ ಹೇಳಿರಿ, ನೋಡುವಾ."

"ಹೂಂ ಒಳ್ಳೇಯವರೇ ಇದ್ದೀರಲ್ಲ."

"ಪುರಾವೆ ಇಲ್ಲದೆ ಮಾತನಾಡಲಿಲ್ಲ ನಾನು. 'ಹಾಗೇ ಬಂದೆ ಆಯಿತು ಮೋಜಿಗೆಂದು. ಆದರೆ ನಾನಿಷ್ಟು ದೂರ ಹೀಗೆ ಬಂದಿದ್ದೇನೆಂಬುದು ನನ್ನ ಲಕ್ಷ್ಯದಲ್ಲಿ ಕೂಡ ಬಂದಿರಲಿಲ್ಲ ನೋಡಿರಿ.' ಹೀಗೆ ನೀವೇ ಅನ್ನಲಿಲ್ಲವೇ?"

ಅಚಲೆಗೆ ನಗು ಬಂದಿತು. ಆದರೆ ಸೋತುಹೋಗಿದ್ದ ತನ್ನ ವಾದದ ಸೂತ್ರಗಳನ್ನು ಎತ್ತಿ ಸಜ್ಜುಗೊಳಿಸುತ್ತ ಅವಳೆಂದಳು. "ಆದರೆ ಒಮ್ಮೊಮ್ಮೆ ಯಾರಿಗಾದರೂ ಮೋಜಿಗೆಂದು ದೂರ ಹೋಗಬೇಕೆನಿಸುವದಿಲ್ಲವೇನು?"

"ಹೌದು. ಆದರೆ ಯಾವಾಗಲೂ ಹಾಗೆ ಆಗುವದಿಲ್ಲ. ಈ ದಿನ ನೀವು ಮೋಜಿಗೆಂದು ಬಂದಿರಬಹುದು."

"ಮತ್ತೆ ನಾನಾದರೂ ಯಾವಾಗಲೂ ಎಲ್ಲಿ ಹೋಗುವೆ?"

"ವಾರದಲ್ಲಿ ಐದು ದಿನವಾದರೂ ಹೋಗುತ್ತೀರಷ್ಟೇ?"

"ನೀವು ಯಾವಾಗ ನೋಡಿದಿರಿ?" ಅಚಲೆಗೆ ವಿಸ್ಮಯವಾಯಿತು.

"ಹೋಗಲಿ ಬಿಡಿರಿ. ನನಗೇನು ಮಾಡುವದಿದೆಯೆನ್ನಿರಿ, ಅದನ್ನೆಲ್ಲ ತೆಗೆದುಕೊಂಡು? ಆದರೆ ನನ್ನ ವಾದವಿಷ್ಟೇ—ನೀವೂ ಕೂಡ ಸೋಗಿನಲ್ಲಿ ನೂರಕ್ಕೆ ಒಂದು ಪಾಲು ಕಡಿಮೆಯಿಲ್ಲ." ನಗುನಗುತ್ತ ವಿರಾಗ ಉತ್ತರಿಸಿದ.

'ಅಂತೂ ಇವರ ನಿರೀಕ್ಷಣೆ ಸ್ವಲ್ಪ ಸೂಕ್ಷ್ಮವೆನ್ನಬೇಕು.' ಅಚಲೆ ತನ್ನಷ್ಟಕ್ಕೇ ಎಂದುಕೊಂಡಳು. ವಿರಾಗನೂ ಕೂಡ ತನ್ನ ವಿಶಿಷ್ಟವಾದ ಪದ್ಧತಿಯಿಂದ ಅದನ್ನವಳ ಲಕ್ಷ್ಯಕ್ಕೆ ತಂದುಕೊಟ್ಟ.

"ಆದರೂ ಅಚಲಾಬಾಯಿ, ಸೋಗು ಮಾಡುವದೂ ಒಂದು ಕಲೆಯೇ ಎನ್ನಬೇಕಲ್ಲವೆ?"

"ಹೌದು. ಮತ್ತೆ ನನಗೆನಿಸುವದೆಂದರೆ ಅದು ನಿಮ್ಮಂತಹ ವಕೀಲರಿಗೆ ಸರಿಯಾಗಿ ಸಾಧಿಸಿರುತ್ತದೆಯಲ್ಲವೆ?"

"ಆದರೆ ಜಗತ್ತಿನಲ್ಲಿ ಎಲ್ಲರಿಗೂ ಈ ಕಲೆ ಅಲ್ಪವಾದರೂ ಅವಶ್ಯಕವಾಗಿರುತ್ತದೆಯೆಂದು ನನಗೆನ್ನಿಸುತ್ತದೆ. ಈ ರೀತಿ ಸುಳ್ಳು ನಟನೆ ಮಾಡ

ಬಲ್ಲವರು ನನಗೆ ನಿಜವಾಗಿ ಮನಸ್ಸಿಗೆ ಬರುತ್ತಾರೆ." ಅದೇಕೋ ಏನೋ ಅವನ ಈ ಮಾತಿನಿಂದ ಅಚಲೆಗೆ ಸ್ವಲ್ಪ ಹಗುರೆನಿಸಿತು.

"ವಿರಾಗ, ಅನ್ಯಾಯದ ವಿರುದ್ಧವಾಗಿ ಒಂದೆ ಸವನೆ ಹೋರಾಡುತ್ತಿರುವಾಗ ನಿಮಗೆ ಬಹಳ ಉತ್ಸಾಹವೆನಿಸುತ್ತಿರಬಹುದಲ್ಲವೆ? ಇಡೀ ದಿನವೆಲ್ಲ ಒಂದು ತರಹದ ಸೆನ್ಸೇಶನ್ನಿನಲ್ಲಿ ಕಳೆದುಹೋಗುತ್ತಿರಬಹುದು."

"ಅಂಥದ್ದೇನೂ ಇಲ್ಲ. ನಿಮಗೆ ಕಲ್ಪನೆ ಕೂಡ ಬರಲಾರದು. ನ್ಯಾಯಾನ್ಯಾಯಗಳನ್ನೆಲ್ಲ ಒಂದೇ ಬುಟ್ಟಿಗೆ ತುಂಬಿಡುವದನ್ನು ನಾವು ಕಲಿತಿದ್ದೇವೆ. ನ್ಯಾಯದ ವಿಷಯವಾಗಿ ಸಹಾನುಭೂತಿಯಿಲ್ಲ; ಅನ್ಯಾಯದ ವಿಷಯವಾಗಿ ದ್ವೇಷವಿಲ್ಲ. ನ್ಯಾಯದ ಜಯಘೋಷ ಮಾಡುತ್ತಲೇ ಅದೇ ನ್ಯಾಯದ ಕುತ್ತಿಗೆ ಕೊಯ್ಯುವಾಗ ನಮ್ಮ ಕೈ ನಡುಗುವದಿಲ್ಲ. ನಾವು ಒಂದು ಮಾತನ್ನು ಸರಿಯಾಗಿ ಗುರುತಿಸಿದ್ದೇವೆ—ಕೋರ್ಟಿನ ಕಟ್ಟೆಯನ್ನೇರುವ ಜಗಳಗಳೆಲ್ಲ ಕನ್ಸರಿನ (Cancer) ರೋಗದಂತೆಯೇ ಇರುತ್ತವೆ ಕನ್ಸರಿನ ಆಪರೇಶನ್ ಮಾಡಿದರೂ ಕೂಡ ರೋಗದ ಮೂಲ ನಿಶ್ಚಯವಾಗಿ ನಾಶವಾಗುತ್ತದಂತಲ್ಲ. ಆ ಕ್ರಿಮಿ ರೋಗಿಯ ದೇಹದ ಬೇರೊಂದು ಭಾಗದಲ್ಲಿ ಮಾಂಸವನ್ನು ತಿನ್ನುತ್ತಲಿರುತ್ತದೆ. ಈ ಮಾತು ಡಾಕ್ಟರರಿಗೆ ಗೊತ್ತಿರುವದಿಲ್ಲವೆಂತಲ್ಲ. ಆದರೂ ಅವರು ಆಪರೇಶನ್ ಮಾಡುವರು; ಫೀ ತೆಗೆದುಕೊಳ್ಳುವರು. ಒಂದು ಜಗಳವನ್ನು ಬಗೆಹರಿಸುವಾಗಲೇ ಹತ್ತು ಜಗಳಗಳು ಹೇಗೆ ಉದ್ಭವಿಸುವವು ಅಥವಾ ಅವುಗಳನ್ನು ಹೇಗೆ ಹುಟ್ಟಿಸಬೇಕು ಎಂಬುದು ವಕೀಲನಿಗೆ ಗೊತ್ತಿದ್ದೇ ಇರುತ್ತದೆ. ಆದರೂ ಅವನು ಕೇಸು ನಡೆಯಿಸುತ್ತಾನೆ; ಹಣ ತೆಗೆದುಕೊಳ್ಳುತ್ತಾನೆ."

"ನಿಮಗೆ ವಕೀಲವೃತ್ತಿ ಸೇರುವದಿಲ್ಲ ಹಾಗಾದರೆ?"

"ಛೆ, ಛೆ. ಬಡವರನ್ನು ಹಿಂಡಿ ಹಿಪ್ಪೆಮಾಡಿ ಅವರ ರಕ್ತಶೋಷಣೆಯಾಗುವ ವರೆಗೂ ಅವರಿಂದ ಫೀ ತೆಗೆದುಕೊಳ್ಳುವದರಲ್ಲಿ ನನಗೆ ಅತ್ಯಂತ ಆನಂದವೆನ್ನಿಸುತ್ತದೆ!"

"ನಡೆಯಿರಿ, ಏನಾದರೂ ಹೇಳುತ್ತೀರಿ ಆಯಿತು. ನನಗೆ ಗೊತ್ತಿದೆ, ನೀವು ಬಡವರ ಕಡೆಯಿಂದ ಹಣವನ್ನೇ ತೆಗೆದುಕೊಳ್ಳುವದಿಲ್ಲ."

"ಇದನ್ನಾರು ಹೇಳಿದರು?"

"ನಾನು ದಿನಾಲೂ ಇಷ್ಟು ದೂರ ತಿರುಗಾಡಲು ಬರುತ್ತೇನೆಂಬುದನ್ನು ನಿಮಗಾರು ಹೇಳಿದರು ?"

ಈರ್ವರೂ ನಕ್ಕುಬಿಟ್ಟರು.

"ಇಷ್ಟೊತ್ತಿನ ವರೆಗೂ ಬಚ್ಚಿಟ್ಟದ್ದಿರಲ್ಲವೆ ನೀವು ?"

"ಹೌದು. ನೀವೇನೆಂದು ತಿಳಿದಿದ್ದಿರಿ? ಸ್ತ್ರೀಯರು ಕೂಡ ಧೂರ್ತರಿರುವದುಂಟು ಮತ್ತೆ." ಆಚಲೆ ನಕ್ಕಳು.

"ಕೊನೆಯ ಪಕ್ಷ ಅವರಿಗೆ ಹಾಗೆನಿಸುವದುಂಟೆನ್ನಿರಿ."

"ನೀವು ನನ್ನ ಸಲುವಾಗಿ ಸಾವಕಾಶ ನಡೆಯುತ್ತೀರಿ ಎಂದು ಕಾಣುತ್ತದೆ."

"ಅದೇನೂ ಸುಳ್ಳಲ್ಲ. ಆದರೇನು, ಹೋಗಲಿ ಬಿಡಿರಿ. ಅದರ ವಿಷಯ ಯೋಚಿಸಬೇಡಿರಿ. ನಿಮ್ಮಿಂದ ಎರಡನೆಯವರಿಗೆ ಯಾವ ತೊಂದರೆಯಾದೀತೆಂದು ಒಂದೆ ಸವನೆ ವಿಚಾರ ಮಾಡಿ ಮಾಡಿ, ಅದನ್ನೇ ಅನುಸರಿಸಿ ನೀವು ನಡೆಯಲಾರಂಭಿಸಿದರೆ ಹೆರವರಿಗೆ ನಿಮ್ಮಿಂದ ಹೆಚ್ಚು ತೊಂದರೆಯಾಗುವ ಸಂಭವವುಂಟು. ನಿಮಗೆ ಬೇಗ ಮನೆ ತಲಪುವ ಅವಸರವಿಲ್ಲವಷ್ಟೆ? ನನ್ನ ನಿಮಿತ್ತವನ್ನೆ ಮುಂದೆ ಮಾಡಿ ಬೇಗ ನಡೆಯುವದಾದ ಪಕ್ಷದಲ್ಲಿ ಆ ಮಾತು ಬೇರೆ" ಎಂದ.

"ನನಗೇತರ ಅವಸರ? ಒಂಡೇ ಒಂದು ಜೀವ. ಯಾರ ಎಳೆತವಿದೆಯೆಂದು ಬೇಗನೆ ಮನೆಗೆ ಹೋಗಬೇಕು ?"

"ಆದರೆ ನನಗಂತೂ ಬೇಗನೆ ಹೋಗಲೇ ಬೇಕು. ನನಗೆ ಎಳೆತ ಹತ್ತಿದೆ."

"ಯಾರದು ?"

"ಮೋಹನನದು" ಗಂಭೀರವಾದ ಮುಖ ಮಾಡಿ ಅವನೆಂದ.

"ಇವನ್ಯಾರು ಮೋಹನ ಮತ್ತೆ ?"

"ನನ್ನ ಅಡಿಗೆಯವ."

ಇಬ್ಬರೂ ನಕ್ಕರು.

"ಓಹೊ. ಹೀಗೋ. ಹೌದಲ್ಲ. ವಿರಾಗ, ನೀವೊಮ್ಮೆ ಲಗ್ನವಾಗಿ ಬಿಡಿರಿ ನೋಡುವ."

"ಏನು, ನನ್ನ ಕಾಲಿಗೊವ್ಮೆ ಬೇಡಿ ಬಿದ್ದಿತೆಂದರೆ ನಿಮಗೆ ಸಮಾಧಾನ ವಾಗುತ್ತದೆಂಬಂತೆ ಕಾಣುತ್ತದೆ."

"ಹೌದು, ಮತ್ತೆ; ಇಷ್ಟೆಲ್ಲ ಹೆಣ್ಣು ಬರುತ್ತವೆ ಎಲ್ಲರಿಗೂ ಇಲ್ಲವೆಂದು ಏತಕ್ಕೆ ಹೇಳುತ್ತೀರಿ. ಒಂದು ಒಳ್ಳೇ ಹುಡುಗಿಯನ್ನು ಹುಡುಕಿ ಕೊಡ ಲೇನು, ಹೇಳಿರಿ."

"ಒಳ್ಳೆಯ ಹುಡುಗಿಯೇ! ಒಂದು ಒಳ್ಳೆಯ ಜಪಾನೀ ಆಟಿಗೆ ಹುಡುಕಿ ಕೊಡಿರಲ್ಲ."

"ಹಾಗಾದರೆ ನಿಮಗೆ ಬೇಕಾದವಳಾದರೂ ಎಂತಹಳು?"

"ನಾನಿನ್ನೂ ವಿಚಾರ ಮಾಡಿಲ್ಲ."

"ಓಹೊ! ಹೀಗೋ. ನನ್ನಂತಹ ತಂಗಿಯಿರಬೇಕಿತ್ತು ನೋಡಿರಿ, ನಿಮ್ಮನ್ನು ದಿನಾಲೂ ಪೀಡಿಸುವದಕ್ಕೆ."

"ತಂಗಿಯಲ್ಲದಿದ್ದರೇನು, ಈಗೇನು ಕಡಿಮೆ ತೊಂದರೆ ಕೊಡು ತ್ತೀರಾ?"

ಅವನ ಈ ಶಬ್ದಗಳಲ್ಲಿ ಅಡಗಿದ್ದ ತನ್ನ ಬಗೆಗಿದ್ದ ಆತ್ಮೀಯತೆ ಯನ್ನು ಕಂಡು ಅಚಲೆಗೆ ಸಮಾಧಾನವಾಗದೆ ಇರಲಿಲ್ಲ ಯಾಕೆಂದರೆ ವಿರಾಗನ ಯಾವದೇ ಒಂದು ಮೃದು ಭಾವ ಅವನ ಶಬ್ದಗಳ ಮುಖಾಂತರ ವ್ಯಕ್ತವಾಗುವದು ಅಸಾಧಾರಣವಾದ ಮಾತೇ ಆಗಿದ್ದಿತು.

ಅವರಿಬ್ಬರೂ ಮೆಲ್ಲನೆ ಮುನ್ನಡೆದಿದ್ದರು. ಕೆಲಹೊತ್ತಿನಮೇಲೆ ವಿರಾಗನೇ ಮೌನವನ್ನು ಮುರಿದ. "ಬಂಗಾರದ ಕಣಿಗಳಲ್ಲಿ, ಮಣ್ಣಿನೊಡನೆ ಬೆರೆತಿರುವ ಸೂಕ್ಷ್ಮವಾದ ಬಂಗಾರದ ಕಣಗಳನ್ನು ಅತ್ಯಂತ ಕಷ್ಟದಿಂದ ಬೇರ್ಪಡಿಸಬೇಕಾಗುವದು. ಹಾಗೆಯೆ, ಜೀವನದುದ್ದಕ್ಕೂ ಮನುಷ್ಯ ಸುವರ್ಣ ಕಣಗಳನ್ನು ಸಂಗ್ರಹಿಸುವದಕ್ಕಾಗಿ ಒಂದೆ ಸವನೆ ಧಡಪಡಿಸು ತ್ತಾನೆ."

"ನಿಮಗೆ ಅವು ದೊರೆತಂತೆ ಕಾಣುತ್ತವೆ, ಅಲ್ಲವೆ?"

"ಆದರೆ ಅವೆಲ್ಲ ಸುವರ್ಣ ಕಣಗಳೇ ಇರಲಾರವೆಂದು ನನಗನಿಸುತ್ತದೆ."

"ಯಾಕೆಂದರೆ ನೀವು ಬಹಳ ಮಹತ್ವಾಕಾಂಕ್ಷಿಗಳಾಗಿದ್ದೀರಿ."

"ಛೆ, ಛೆ. ಮಹತ್ವವೆಂದರಾದರೂ ಏನು? ಷಾ (Shaw) ಹೇಳುವಂತೆ

'Greatness is only a sensation of littleness'—ದೊಡ್ಡಸ್ತಿಕೆ ಯೆಂದರೆ ತನ್ನ ಅಲ್ಪತೆಯ ಅರಿವಲ್ಲದೆ ಮತ್ತೇನೂ ಅಲ್ಲ."

"ಹಾಗಾದರೆ ಏತಕ್ಕಾಗಿ ಈ ನಿಮ್ಮ ಧಡಪಡ?"

"ನನಗೆ ಯಾವುದರಲ್ಲಿಯೂ ಆತ್ಮೀಯತೆಯ ಭಾವನೆಯೇ ಉಂಟಾಗುವದಿಲ್ಲ. ನೀವೇನೋ ಹೇಳುತ್ತೀರಿ. ಆದರೆ ಲಗ್ನದಲ್ಲಿಯೂ ನನಗೆ ಅದೇ ಭೀತಿಯುಂಟಾಗುತ್ತದೆ. ಯಾವದೊಂದು ವಸ್ತುವಿನ ವಿಷಯವಾಗಿ ಆಸಕ್ತಿ ವಹಿಸುವದೆಂದರೆ ಮೊದಲಿಂದಲೇ ನನಗೆ ಅದರ ನಿಃಸಾರತೆ ವ್ಯಕ್ತವಾಗುತ್ತ ಹೋಗುತ್ತದೆ."

"ನೀವು ಬಹಳ ವಿಚಾರ ಮಾಡುತ್ತೀರಿ, ವಿರಾಗ."

"ಆಸಕ್ತಿಯಿಂದ ಸುಖ ಸಿಗುವದೇನು ಹೇಳಿರಿ."

"ಯಾಕಿಲ್ಲ ಅಂತಿಮ ಸುಖ ದೊರೆಯಲಿಕ್ಕಿಲ್ಲ, ಒಂದು ವೇಳೆ. ಹಾಗೆಂದು ಒಣಗಿದ ಕಟ್ಟೆಗೆ ನಿಂತಿರುವ ತೋಟದಲ್ಲಿ ಮಾತ್ರ ತಿರುಗಾಡುವದೇ ಅದರಿಂದ ಮನುಷ್ಯ ಹೆಚ್ಚೆಚ್ಚು ಉದಾಸೀನನಾಗುತ್ತಾನೆಂಬುದಷ್ಟೇ ನಿಜ, ಅದಕ್ಕಿಂತ, ಪಲ್ಲವಿಸಿ ಕುಸುಮಿಸಿದ ವನಶ್ರೀಯ ಶೋಭೆಯಲ್ಲಿ ಆತ್ಮನನ್ನು ತೇಲಿಬಿಟ್ಟು ಆ ಕ್ಷಣಭಂಗುರವಾದ ಹೂಗಳನ್ನೇ ಕಿತ್ತು ಕೈಯಲ್ಲಿ ಹಿಡಿಯುವದರಿಂದ ದೊರೆಯುವ ಕ್ಷಣಿಕ ಆನಂದವೇ ಬೆಲೆಯುಳ್ಳದ್ದೆಂದು ನನಗೆನಿಸುತ್ತದೆ. ಆ ಕ್ಷಣದ, ಮೈಮರೆಸುವ ಸುಖಸ್ಪರ್ಶದಿಂದಲೇ ಜೀವನದ ಮೊಗ್ಗೆ ಮಾಲೆ ಹೆಣೆಯಲ್ಪಡುತ್ತದೆ."

"ಆದರೆ ಆ ಸುಖವನ್ನು ಅನುಭವಿಸುವಾಗಲೇ ಅದು ಕ್ಷಣಿಕವಾದುದು, ನಿರರ್ಥಕವಾದುದೆಂದು ಯಾರಿಗೆ ಎನಿಸುತ್ತದೋ ಅವರ ಅರ್ಧ ಆನಂದ ಆಗಲೇ ಕಡಿಮೆಯಾಯಿತೆಂದು ಹೇಳಬೇಕು. ನನಗೆ ಯಾವ ಮಾತಿನಿಂದಲೂ ಮೈಮರೆಸುವಂತಹ ಸುಖವಾಗಲಿ, ದುಃಖವಾಗಲಿ ಆಗುವದೇ ಇಲ್ಲ."

"ಹಾಗಾದರೆ, ನಿಮಗೆ ಅಂತಹ ಕಟು ಅನುಭವಗಳು ಬಂದಿರಲು ಸಾಕು."

ಅವನೇನೂ ಮಾತನಾಡಲಿಲ್ಲ.

"ಯಾಕೆ, ನಾನು ಕೇಳಬಾರದ ಪ್ರಶ್ನೆಗಳನ್ನೆಲ್ಲ ಕೇಳುತ್ತಿಲ್ಲವಷ್ಟೆ?"

"ಅದು ನೋಡಿರಿ, ಊರು ಬಂದೇಬಿಟ್ಟಿತು."

"ಎಷ್ಟು ಬೇಗ ಬಂದೆವು ನಾವು?"

ವಿರಾಗ ಮತ್ತು ಅಚಲಾ ಇಬ್ಬರೂ ತಮ್ಮ ಮನೆಗಳಿಗೆ ತೆರಳಿದರು— ದೂರವಾಗಿ ಹೋದರು. ಆದರೆ ಅದೇಕೋ ಏಳೆಂಟು ತಿಂಗಳಿನ ಅವರ ಪರಿಚಯದಲ್ಲಿ ಎಂದೂ ಇಲ್ಲದಷ್ಟು ಒಬ್ಬರೊಬ್ಬರ ಸಮೀಪ ತಾವು ಬಂದಿದ್ದರೆಂದು ಅವರಿಗೆನಿಸುತ್ತಿತ್ತು. ಇಷ್ಟೇ ಅಲ್ಲ, ಆ ಭಾವನೆಯಿಂದ ಇಬ್ಬರಿಗೂ ಆನಂದವುಂಟಾಗಿತ್ತು. ಅಂತಹದೊಂದು ಪ್ರಸಂಗ ಬೇಕೆಂದು ಸಾಧಿಸಬೇಕೆಂದಿದ್ದರೂ ಸಾಧಿಸಲಸಾಧ್ಯವಾಗಿತ್ತು. ತನ್ನ ಸ್ವಂತದ ವಿಷಯುವಾಗಿ ವಿರಾಗನನ್ನು ಇಷ್ಟಾದರೂ ಮಾತನಾಡಹಚ್ಚುವದು ಅಚಲೆಗೆ ಸಾಮಾನ್ಯ ಮಾತಾಗಿರಲಿಲ್ಲ!

೧೧

'ಮನುಷ್ಯನ ದೊಡ್ಡಸ್ತಿಕೆ! ಅದೆಂತಹ ಸಾಪೇಕ್ಷವಾದ ವಿಚಾರ. ವಿಶಾಲವಾದ ಜಗತ್ತಿನ ದೃಷ್ಟಿಯಿಂದ ಮನುಷ್ಯರ ದೊಡ್ಡಸ್ತಿಕೆ—ಅದೆಂತಹ ಸಂಕುಚಿತವಾದ ಮಾತು! ಯಾವನೊಬ್ಬ ಡಾಕ್ಟರ್ ಹೆಸರು ಗಳಿಸುತ್ತಾನೆ. ಅವನಿಗೆನ್ನಿಸುವದುಂಟು—ನಾನು ದೊಡ್ಡವ ಎಂದು. ಆದರೆ ಕೇವಲ ಒಂದು ಚಿಕ್ಕ ಸಮಾಜದಲ್ಲಿಯೇ ಅವನ ಹೆಸರು ಮತ್ತು ದೊಡ್ಡಸ್ತಿಕೆ. ಬೇರೆಯವರನ್ನು ಕೇಳಿ ನೋಡಿರಿ. ಬಹುಶಃ ಅವರು ಅವನ ಹೆಸರನ್ನು ಕೂಡ ಕೇಳಿರುವದಿಲ್ಲ. ಎಲ್ಲ ದೊಡ್ಡ ಮನುಷ್ಯರ ಹಾಡೂ ಅಷ್ಟೇ. ಯಾವನೊಬ್ಬ ದೊಡ್ಡ ವಕೀಲನನ್ನು, ಸಾವುಕಾರನನ್ನು ತೆಗೆದುಕೊಳ್ಳಿರಿ, ಗಿರಣಿ ಮಾಲಕನನ್ನು ತೆಗೆದುಕೊಳ್ಳಿರಿ, ಸಟ್ಟಾ ವ್ಯಾಪಾರಿಯನ್ನು ತೆಗೆದುಕೊಳ್ಳಿರಿ, ಅಥವಾ ವಾಙ್ಮಯ ಸೇವಕನ ಹೆಸರನ್ನು ತೆಗೆದುಕೊಳ್ಳಿರಿ. ಎಲ್ಲರಿಗೂ ಈ ನಿಯಮ ಅನ್ವಯಿಸುವದುಂಟು. ಎಲ್ಲರ ದೊಡ್ಡಸ್ತಿಕೆಯೂ ಅಷ್ಟೇ—ಎಲ್ಲರೂ ತಮ್ಮ ತಮ್ಮ ಆ ಮರ್ಯಾದಿತ ಗುಬ್ಬಚ್ಚಿಯ ಜಗತ್ತಿನಲ್ಲಿಯೇ ದೊಡ್ಡವರೆನಿಸಿಕೊಳ್ಳುವವರು. ಕೇವಲ ಅಷ್ಟರ ಮೇಲೆ ಕ್ಷುದ್ರನಾದ ಈ ಮನುಷ್ಯ ಜಂತುವಿಗೆ ಮಹದಾನಂದವಾಗುವದುಂಟು. ಶೇಅರ್ ಮಾರ್ಕೆಟ್ಟಿನಲ್ಲಿ ಲಕ್ಷಾವಧಿ ರೂಪಾಯಿಗಳ ವ್ಯವಹಾರ ಮಾಡುವ ಯಾವನೊಬ್ಬ ಸಾವುಕಾರನನ್ನು ಕೇಳಿನೋಡಿರಿ, ಮರಾಠೀ ಸಾಹಿತ್ಯದಲ್ಲಿ ಯಾರ ಹೆಸರಿನ ನಗಾರಿ ಕಿವಿ

ಗಡಚಿಕ್ಕುವಂತೆ ಪ್ರತಿಧ್ವನಿಸಿದೆಯೋ ಅಂತಹ ವಾಙ್ಮಯಾಚಾರ್ಯರಾದ 'ಹರಿ ನಾರಾಯಣ ಆಪ್ಟೆ'—ಛೆ! ಅವನು ನಕ್ಕು ಬಿಡಬಹುದು. ಅವನ ಆಯುಷ್ಯದಲ್ಲೆಲ್ಲಿಯೂ ಆ ಹೆಸರು ಅವನ ಕಿವಿಗೆ ಕೂಡ ಬಿದ್ದಿರಲಿಕ್ಕಿಲ್ಲ. ಜಗತ್ತಿನ ಕಲ್ಯಾಣಕ್ಕೆಂದು ವ್ಯಾಸಪೀಠದ ಮೇಲಿಂದ ಒಂದೇ ಸವನೆ ಕಂಠ ಶೋಷಮಾಡುವ ಪ್ರಖ್ಯಾತ ಮುಂದಾಳಿನ ಹೆಸರನ್ನುಚ್ಚರಿಸಿ—ಕೋಟಿಗಟ್ಲೆ ಜನತೆಯೆನ್ನಬಹುದು 'ಇವನಾರು? ನಮಗೆ ಅವನಾರೋ ಗೊತ್ತಿಲ್ಲ!' ಹೀಗೆಯೇ ಎಲ್ಲರ, ಎಲ್ಲ ತರದ ದೊಡ್ಡಸ್ತಿಕೆಯೂ ಕೂಡ. ಅದಕ್ಕೊಂದು ಮರ್ಯಾದೆಯುಂಟು. ಎಂದ ಮೇಲೆ ನನಗೆ ನನ್ನದೇ ಆದ ವಿಶ್ವವನ್ನು ನಿರ್ಮಿಸಲು ಬಾರದೇಕೆ? ಆ ನನ್ನ ಜಗತ್ತಿನಲ್ಲಿ ನಾನು ದೊಡ್ಡವನೆಂದು ಗಣ್ಯನಾಗದಿರುವೆನೆ? ಆಗದೇನು?' ಅವನಿಗೆ ಒಮ್ಮೆಲೆ ನೆನಪಾಯಿತು. ಆಗ ಅವನು ಸಾಧಾರಣ ಇಂಗ್ಲಿಷ್ ಒಂದನೇ ತರಗತಿಯಲ್ಲಿದ್ದಿರಬಹುದು. ಅವನ ಶಿಕ್ಷಕರು ಬೋಧವಾಕ್ಯಗಳ ಪಟಗಳಿಂದ ಶಾಲೆಯ ಗೋಡೆಗಳನ್ನು ಶೃಂಗರಿಸಿದ್ದರು. 'ಸತ್ಯಂ ವದ', 'ಧರ್ಮಂ ಚರ', 'ವಿದ್ಯಾ ಏವ ಧನಂ', 'ಸ್ವರ್ಗ ಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿರೋ', 'ವಿದ್ಯಾ ವಿನಯೇನ ಶೋಭತೆ'....ಇತ್ಯಾದಿ ಅನೇಕ ಬೋಧವಾಕ್ಯಗಳಿಂದ ಕ್ಲಾಸಿನ ಗೋಡೆಗಳೆಲ್ಲ ತುಂಬಿ ಹೋಗಿದ್ದವು. ಶಿಕ್ಷಕರೂ ತಮ್ಮ ಕರ್ತವ್ಯವನ್ನು ಸ್ಮರಿಸಿ ಸಾಧ್ಯವಿದ್ದಷ್ಟೆಲ್ಲ ನೀತಿಯ ಸೂತ್ರಗಳನ್ನು ವಿದ್ಯಾರ್ಥಿಗಳ ಮನದ ಮೇಲೆ ಎರೆಯುತ್ತಿದ್ದರು. ಮುಂದೆ ಅದೇ ಶಿಕ್ಷಕನು ಶಿಕ್ಷಣದ ಉದ್ಯೋಗವನ್ನು ಬಿಟ್ಟು ಬಹಳ ಘನತೆಗೇರಿದ. ಶಾಲೆಯ ಸಮ್ಮೇಲನದ ಸಮಯವೊಂದರಲ್ಲಿ ಅವರನ್ನೇ ಅಧ್ಯಕ್ಷರೆಂದು ಆರಿಸಲಾಗಿತ್ತು. ಆಗ ಅವರು ಹುಡುಗರಿಗೆ ಉಪದೇಶ ಮಾಡಿದ್ದರು: 'ಮಕ್ಕಳೆ, ಆರು ವರ್ಷಗಳ ಹಿಂದೆ ನಾನು ಇಲ್ಲಿ ಶಿಕ್ಷಕನೆಂದು ಇದ್ದಾಗ ಈ ವಾಕ್ಯಗಳನ್ನು ಇಲ್ಲಿ ಹೀಗೆಯೇ ಹಚ್ಚಲಾಗಿತ್ತು. ಆದರೆ ನಾನು ನಿಮಗೆ ಹೇಳಬಯಸುವದೆಂದರೆ, ಈ ಎಲ್ಲ ಉನ್ನತ ಸ್ಥಳಗಳಲ್ಲಿ ವಿರಾಜಿಸುತ್ತಿರುವ ಸದ್ವರ್ತನೆಯ ಸೂತ್ರಗಳಿಗೆ ಈ ಶಾಲೆಯ ಗೋಡೆಗಳೊಳಗೇ ಅರ್ಥ ಮತ್ತು ಬೆಲೆಯುಂಟು. ಶಾಲೆಯ ನಾಲ್ಕು ಗೋಡೆಗಳ ಹೊರಗೆ ಜಗತ್ತಿನಲ್ಲಿ ಕಾಲಿಡುವದೊಂದೇ ತಡ, ಈ ಎಲ್ಲ ನೀತಿ-ತತ್ವಗಳೂ ಆಚರಣೆಯಲ್ಲಿ ಬದಲಾಗುವವೆಂಬುದನ್ನು ನೀವು ಮನ

ಗಾಣುವಿರಿ. ಇಷ್ಟೇ ಅಲ್ಲ, ಅವು ಬದಲಾಗುವದರಲ್ಲಿಯೇ ವ್ಯವಹಾರದ ಯಶಸ್ಸಡಗಿದೆಯೆನ್ನುವುದು ಕೂಡ ನಿಮಗೆ ಕಂಡುಬಂದೀತು.'

ವಿರಾಗನಿಗೆ ಆ ಮಾತುಗಳ ಅನುಭವ ಬಂದಿತ್ತು. ಆ ಶಿಕ್ಷಕ ಮಹಾಶಯರು ಪ್ರಾಂಜಲವಾಗಿ ವ್ಯವಹಾರದ ಯಶಸ್ಸಿನ ಮೂಲ ಸೂತ್ರವನ್ನು ಹುಡುಗರಿಗೆ ತೋರಿಸಿಕೊಟ್ಟಿದ್ದರು. ಬಡತನದ ದವಡೆಗಳೊಳಗೆ ಸಿಲುಕಿ ನುಚ್ಚು ನುರಿಯಾಗಿ ಹೋಗುತ್ತಲಿದ್ದ ತನ್ನ ಶಕ್ತಿಗಳ ಸ್ಥಾನವನ್ನು ಕಂಡುಕೊಂಡದ್ದ ಅವನು ಮನಸ್ಸಿನಲ್ಲಿ ಒಂದು ಮಾತನ್ನು ಗಂಟು ಹಾಕಿಕೊಂಡಿದ್ದ. ಯಾನಾಗಲೂ ಧೈರ್ಯಗೆಡದಿರುವ ವ್ರತವನ್ನೊಂದು ಅವನು ಕೈಕೊಂಡ. ಅವನ ವೃತ್ತಿಯೇ ಅಂತಹ ನಿಶ್ಚಯಾತ್ಮಕವಾದುದಾಗಿತ್ತು. ಇಂತಹದೊಂದನ್ನು 'ಮಾಡುವೆ' ಎಂದೆನಲು ಅವನಿಗೆ ವೇಳೆ ಹಿಡಿದರೂ ಒಮ್ಮೆ ಹಾಗೆಂದಮೇಲೆ ಅದನ್ನವನು ಮಾಡಿಯೇ ತೀರುತ್ತಿದ್ದ.

ದೊಡ್ಡಸ್ತಿಕೆಯ ಮೇಲೆ ಅವನ ವಿಶ್ವಾಸವಿರಲಿಲ್ಲ. ಆದರೂ ಅವನು ವ್ಯವಹಾರದಲ್ಲಿ ಯಶಸ್ಸು ಗಳಿಸುವ ನಿಶ್ಚಯ ಮಾಡಿದ. ತನ್ನದೇ ಆದ ವಿಶ್ವವನ್ನು ನಿರ್ಮಿಸಿ ಅದರಲ್ಲಿ ಹೆಸರು ಗಳಿಸುವ ನಿಶ್ಚಯವನ್ನವನು ಮಾಡಿದ. ಯಾವ ಸಂಕಟವೂ ಅವನನ್ನು ಈ ನಿಶ್ಚಯದಿಂದ ಪರಾವೃತ್ತನನ್ನಾಗಿಸಲು ಸಮರ್ಥವಾಗಲಿಲ್ಲ. ಆದ್ದರಿಂದಲೆ ಅವನು ಎಲ್ಲ ಅಭಿಮಾನವನ್ನು ಕಿತ್ತೊಗೆದಿದ್ದ.

ವ್ಯವಹಾರದಲ್ಲಿ ಯಶಸ್ಸಿಗೂ ಮತ್ತು ಸುಖ, ಮಾನ, ಸನ್ಮಾನಗಳಿಗೂ ಮೂಲಕಾರಣ ಧನವಾಗಿದೆ. ಸುವರ್ಣದ ಪ್ರಭಾವವೇ ಅಂತಹದಿದೆ. ಅದರ ಪ್ರಭಾವಲಯದಲ್ಲಿದ್ದ ಎಂತಹ ಅಷ್ಟಾವಕ್ರ ಮಾನವ ಶ್ವಾಪದವೂ ಮದನ ಮನ್ಮಥನಾದಾನು; ದುಷ್ಟ ವ್ಯಾಘ್ರನೂ ಸಂಪನ್ನನೆಂದೇ ಮೆರೆದಾನು; ಅಕ್ಷರಶತ್ರುವೂ, ವ್ಯವಹಾರಶೂನ್ಯನೂ ಸಾಲೊಮನ್ನನ ಪುನರವತಾರವೆಂದೇ ಗಣಿಸಲ್ಪಡುವುದುಂಟು. ವ್ಯವಹಾರದಲ್ಲಿಯ ಯಶಸ್ಸೆಂಬುದಾದರೂ ಇದನ್ನು ಬಿಟ್ಟು ಬೇರೆ ಯಾವುದು? ಅದು ಸತ್ಯ, ಸತತೋದ್ಯೋಗ ಮತ್ತು ಉತ್ಸಾಹಗಳ ಆಧಾರದ ಮೇಲೆಯೇ ನಿಂತಿದೆಯೆಂದು ಸಮಾಜದ ಮುಂದಾಳುಗಳು, ಸಾಮಾಜಿಕ ಸ್ವಾಸ್ಥ್ಯ ಮತ್ತು ಬೆಳವಣಿಗೆಯ ಜವಾಬುದಾರಿಯನ್ನು ತಾವಾಗಿಯೇ ಹೋರಲು ಮುಂದೆ ಬಂದ ಈ

'ಸಮಾಜೋದ್ಧಾರಕರು' ವ್ಯಾಸಪೀಠಗಳಿಂದ ಅದೆಷ್ಟೇ ಗರ್ಜಿಸಲಿ, ಅಸತ್ಯ, ಮೋಸ ಮತ್ತು ಡಬಡ್ಡಾಳಿಕೆಗಳ ಸಮೃದ್ಧವಾದ ಆಸನದ ಮೇಲೆ ಈ ವ್ಯವಹಾರಿಕ ಯಶಸ್ಸಿನ್ನವದರ ಮಜಲುಗಳು ಏಳುತ್ತಿರುವುದನ್ನು ಅವನು ತನ್ನ ಕಣ್ಣಿಂದಲೇ ಕಂಡವನಾಗಿದ್ದ.

ಅವನ ಬಡತನದ ನಾಚಿಗೆಗೇಡನ್ನು ನೋಡಿ ಉಪಹಾಸಾತ್ಮಕವಾಗಿ ನಗುತ್ತಲಿದ್ದ, ಅವನ ಮತ್ತು ಅವನಂಥವರ ಹೆಸರುಗಳನ್ನು ತನ್ನ 'ಸನ್ಮಾನೀಯರ' ಪಟ್ಟಿಯಿಂದ ಕಿತ್ತು ಹಾಕುವ ಉಚ್ಛೃಂಖಲತೆಯನ್ನು ತೋರ್ಪಡಿಸಿದ ಅದೇ ಸಮಾಜದ ಗೋಣು ಹಿಡಿದು ಬಗ್ಗಿಸಿ ಅದನ್ನು ತನ್ನ ಅಡಿಗಳಿಗೆರಗುವಂತೆ ಮಾಡುವದಕ್ಕಾಗಿ ಅವನಿಗೆ ಒಂದೇ ಒಂದು ವಸ್ತುವಿನ ಆವಶ್ಯಕತೆಯಿತ್ತು—ಹಣ!

ಅದಕ್ಕಾಗಿ ಅವನು ತನ್ನೆಲ್ಲ ಆಸೆ ಆಕಾಂಕ್ಷೆಗಳನ್ನೂ ಇಚ್ಛೆಗಳನ್ನೂ ತಡೆಹಿಡಿದ. ಒಂದೊಂದು ದುಡ್ಡನ್ನೂ ಉಳಿಸಿ ಕೂಡಿಹಾಕಲಾರಂಭಿಸಿದ. ನಿರಕ್ಷರ ಹಳ್ಳಿಗರಿಗೆ ಪತ್ರ ಬರೆದು ಕೊಟ್ಟರೆ ದೊರೆಯುವ ಒಂದು ದುಡ್ಡನ್ನೂ ಅವನು ತೆಗೆದುಕೊಳ್ಳುತ್ತಿದ್ದ, ಒಂದು ಊಟದ ಹಣವನ್ನುಳಿಸುವದಕ್ಕಾಗಿ ಖಾನಾವಳಿಯೊಳಗಿನ ಎಂಜಲವನ್ನೂ ಅವನು ಮೌನವಾಗಿ ಬಳಿದೊಗೆಯುತ್ತಿದ್ದ. 'ಜಾದೂ, ಜಾದೂ' ಎಂದು ಕಣ್ಣುಕಟ್ಟಿನ ಆಟವಾಡಿ ಚಿಕ್ಕ ಮಕ್ಕಳ ತಂಡಗಳ ಮನರಂಜನೆ ಮಾಡುವ ಜಾದುಗಾರನೂ ಆಗೀಗ ಆಗುತ್ತಿದ್ದ. ಯಾವದೊಂದು ಸಂಶೋಧಕಮಂಡಳದ ಒಂದು ಹಳೆಯ ಕರಡಿನ ಮೋಡೀ ಅಕ್ಷರಗಳನ್ನು ತಾಸುಗಟ್ಟಲೆ ಕಣ್ಣಲ್ಲಿ ಕಣ್ಣಿಟ್ಟು ನೋಡಿ ಓದಿ, ಅದರಿಂದ ಬರುವ ಹತ್ತು ರೂಪಾಯಿಗಳನ್ನೂ ಗಳಿಸುತ್ತಿದ್ದ. ಯಾವನೊಬ್ಬ ಕಂಟ್ರ್ಯಾಕ್ಟರನ ಕೈಯಲ್ಲಿ ಆಳಿನಂತೆ ದುಡಿಯುತ್ತಿದ್ದ. ಹುರುಪಿನ ಕಾಲೇಜ್ ಹುಡುಗ ಹುಡುಗಿಯರಿಗೆ ಸಿನೆಮಾ, ನಾಟಕದ ಟಿಕೆಟ್ಟುಗಳನ್ನು ಮಾರಿ ಅದರಿಂದ ಬರುವ ದಲಾಲಿಯನ್ನೂ ಪಡೆಯುತ್ತಿದ್ದ. ಕೆಲಸಕ್ಕೆ ಬಾರದ ಅವರ ಟೆನಿಸ್ ಆಟದ ಹಳೆಯ ಚೆಂಡುಗಳನ್ನು ತಂದು ನಾಲ್ಕಾಣೆಗೆ ಅವುಗಳನ್ನು ಮಾರಿ ಆ ಹಣವನ್ನೂ ಸಂಪಾದಿಸುತ್ತಿದ್ದ. ಹೀಗೆ, ಒಂದಲ್ಲ ಎರಡಲ್ಲ, ಕ್ಷಣಕ್ಷಣಕ್ಕೂ ತನ್ನ ಬುದ್ಧಿಗೆ ಹೊಳೆದ ಅನೇಕ ಮಾರ್ಗಗಳಿಂದ ಅವನು ಹಣ ಗಳಿಸಿ ಕೂಡಿಡದೆ ಇರುತ್ತಿರಲಿಲ್ಲ. ಯೋಗ್ಯ ಸ್ಥಳದಲ್ಲಿ ಮುಖ

ಸೊಟ್ಟ ಮಾಡಿ ಬೇಡುವದಕ್ಕೂ ಅವನು ಹಿಂದುಮುಂದೆ ನೋಡುತ್ತಿರಲಿಲ್ಲ.

ಈ ಎಲ್ಲ ಉಪದ್ವ್ಯಾಪಗಳನ್ನು ನಡೆಸಿ ಅವನು ತನ್ನ ಅಭ್ಯಾಸವನ್ನು ಸಾಗಿಸಿದ್ದ. ದೊಡ್ಡಸ್ತಿಕೆಯ ಕಿರೀಟಕ್ಕೆ ಪದವಿಯ ಪುಚ್ಚ ಚುಚ್ಚಿದ್ದರೆ ಅದೆಷ್ಟೋ ಚೆನ್ನೆಂಬುದನ್ನು ಅವನು ಅರಿಯದಿರಲಿಲ್ಲ ಇದರಿಂದ ಅವನಿಗೆ ಒಮ್ಮೊಮ್ಮೆ ಒಂದೆರಡೇ ತಾಸು ನಿದ್ರೆ ದೊರೆಯುವದುಂಟು. ಆದರೆ ಆ ಉರಿ ಯುವ ಕೆಂಗಣ್ಣುಗಳಿಗೆ ಸೊಪ್ಪು ಹಾಕದೆ, ಅವನು ಹಾಗೇ ಕಷ್ಟುಪಟ್ಟು ಓದುತ್ತಿದ್ದ. ತೀಕ್ಷ್ಣಬುದ್ಧಿಯ ವಿರಾಗನಿಗೆ ಪರೀಕ್ಷೆಗಳನ್ನು ಪಾಸಾಗುವ ದೆಂದರೇನೂ ಕಠಿಣ ಮಾತಾಗಿರಲಿಲ್ಲ.

ದಿನವೆಲ್ಲ ನಡೆದಿರುತ್ತಿದ್ದ ಅವನ ಈ ಭಯಂಕರವಾದ ಕಾರ್ಯವ್ಯಾಪ್ತಿ, ಈ ಧಡಪಡಿಕೆ ಅವನ ಸಹಾಧ್ಯಾಯಿಗಳ ದೃಷ್ಟಿಗೆ ಬೀಳುತ್ತಿರಲಿಲ್ಲ. ಅವರು ಮಹಾ ಉದ್ಯೋಗಿ ಎಂಬುದಷ್ಟು ಮಾತ್ರ ಅವರಿಗೆ ಗೊತ್ತಿದ್ದ ಮಾತು. ಅವನ ಆ ಸತತೋದ್ಯೋಗ ಅವರಲ್ಲಿ ಅವನ ಬಗ್ಗೆ ಆದರವನ್ನುಂಟು ಮಾಡಿತ್ತು. ಅದು ಅವನಿಗೂ ಗೊತ್ತಿತ್ತು. ಆದರೆ ಅಷ್ಟರ ಮೇಲೆ ತನ್ನ ಸುತ್ತಲೂ ಸ್ತುತಿಪಾಠಕರ ಗುಂಪೊಂದನ್ನು ನೆರೆಯಿಸಿಕೊಂಡು ಮೋಜು ಮಾಡುವ ಹವ್ಯಾಸ ಅವನಿಗೆ ಉಂಟಾಗಿರಲಿಲ್ಲ. ಅವನು ಅವರಿಂದ ದೂರ ವಾಗಿಯೇ ಇರುತ್ತಿದ್ದ. ಅವರ ಸಂಗಡ ಬೆರೆಯುವ ವೇಳೆ ಇನ್ನೂ ಬಂದಿರ ಲಿಲ್ಲ. ತನ್ನ ವಿಷಯವಾಗಿ ಯಾರಲ್ಲಿ ಮಾತ್ರ ಅನುಕಂಪವನ್ನುಂಟುಮಾಡ ಬೇಕೆಂಬುದನ್ನು ಅವನು ಪೂರ್ಣವಾಗಿ ಅರಿಯುತ್ತಿದ್ದ. ಸಿಕ್ಕಿದವರ ಮುಂದೆಲ್ಲ ತನ್ನ ಕರುಣಕತೆಯನ್ನು ತೋಡಿಕೊಂಡು, ತನ್ನಂತರಂಗದ ಅಶಕ್ತತೆಯನ್ನು ವ್ಯಕ್ತಗೊಳಿಸಿ, ಅವರಿಂದ ನಿಷ್ಫಲವಾದ ಕನಿಕರವನ್ನವನು ಯಾಚಿಸಲಿಲ್ಲ. ಯಾರಲ್ಲಿ ತನ್ನ ವಿಷಯವಾಗಿ ಅನುಕಂಪವುಂಟಾಗುವುದ ರಿಂದ ತನ್ನ ಆಯುಷ್ಯದ ವಿಘ್ನಮಯ ಮಾರ್ಗದಲ್ಲಿ ತನಗೆ ಸಹಾಯವಾ ದೀತೋ ಅಂತಹ ಸರಿಯಾದ ವ್ಯಕ್ತಿಗೇ ಅವನು ತನ್ನ ಅಸಮ ಸಾಹಸ ಜೀವನದ ರುದ್ರ ಸತ್ಯದ ತೆರೆಯನ್ನು ಯೋಗ್ಯವಾದಷ್ಟೇ ಓಸರಿಸಿ ತೋರುವ. ಆದ್ದರಿಂದಲೆ ಮಾರವಾಡಿಯೊಬ್ಬ ಅವನಿಗೆ ತಿಂಗಳಿಗೆ ಐದು ರೂಪಾಯಿ ಕೊಡಮಾಡಿದ. ಪ್ರಿನ್ಸಿಪಾಲರು ಮೆಹರಬಾನಿಗೆಯಿಂದ ಫ್ರೀಶಿಪ್ ಕೊಟ್ಟರು. ಪ್ರೊಫೆಸರರು ಪುಸ್ತಕಗಳನ್ನು ಕೊಟ್ಟರು—ಅಷ್ಟೇಕೆ, ಅವನ ಚುರುಕು ಬುದ್ಧಿ

ಯನ್ನೂ ಸತತೋದ್ಯೋಗವನ್ನೂ ಕಂಡು, ಪ್ರೀತಿಯಿಂದ ಸಕಲ ಸಹಾಯ ವನ್ನೂ ನೀಡಿ ಉತ್ತೇಜಿಸಿದರು.

ತಾನು ಏನೇನು ಮಾಡುತ್ತಿದ್ದ, ಅದೆಷ್ಟು ತರದ ಉದ್ಯೋಗಗಳನ್ನು ಮಾಡುತ್ತಿದ್ದ—ಇದಾವದರ ವಿಷಯವಾಗಿ ಅವನು ತನ್ನ ಸಹಾಧ್ಯಾಯಿ ಗಳಲ್ಲಿ ಒಂದಕ್ಷರವನ್ನೂ ಉಚ್ಚರಿಸುತ್ತಿರಲಿಲ್ಲ. ತಾನು ಸಹಿಸಬೇಕಾಗುವ ವಿಧಿಯ ಪ್ರಹಾರಗಳನ್ನು ತನ್ನಲ್ಲಿಯೇ ಬಚ್ಚಿಟ್ಟುಕೊಳ್ಳುವ ಮಟ್ಟಿಗೆ ಅವನ ಮನಸ್ಸು ಗಟ್ಟಿಯಾದುದಾಗಿತ್ತು. ಅವನ ಮನದ ಅಸಂಖ್ಯ ಆಸೆ ಆಕಾಂಕ್ಷೆ ಗಳು, ವೇದನೆಗಳು ಒಂದನ್ನೊಂದು ತೊಡಕಿಕೊಂಡು ಆದ ಅವನ ಮನದ ಹೆಣಿಕೆಯನ್ನು ಯಾರಿಗೂ ಬಿಡಿಸಿ ನೋಡುವದು ಸಾಧ್ಯವಿರಲಿಲ್ಲ. ತನ್ನ ಒಡಲಿನಲ್ಲಿ ನಡೆದ ಅನಂತವಾದ, ಮಹದ್ಭಯಂಕರವಾದ ಶಕ್ತಿಗಳ ತುಮುಲ ಯುದ್ಧದ ತಾಂಡವವನ್ನು ಮುಚ್ಚಿ, ಆದರ ಮೇಲೆ ತನ್ನ ತೆರೆಗಳನ್ನು ಹಾಯಿ ಸುವ ಗಂಭೀರ ಶರಧಿಯ ಹೊರ ನೋಟವನ್ನೇ ಹೋಲುತ್ತಿತ್ತು—ವಿರಾಗನ ಸಾಮಾಜಿಕ ಜೀವನ.

ಯಾವ ಗುರಾಣಿಯಿಂದ ತನ್ನೆಲ್ಲ ಸಂಕಟಗಳನ್ನು ಅವನು ಎದುರಿಸು ತ್ತಿದ್ದನೋ, ಅದು ಜನರಿಗೆ ಕಾಣುವ ಆ ಭಾಗಕ್ಕೆ ಕಳೆಯೇರಿ, ಅದು ಮೋಹಕವಾಗಿ ಹೊಳೆಯಲಾರಂಭಿಸಿತ್ತು. ಕಷ್ಟ ತಾಪತ್ರಯಗಳಿಂದ ಕಾಯ್ದು ಹುರುಪಳಿಸಿ ಕರಿಬಿದ್ದ ಅದರ ಇನ್ನೊಂದು ಮುಖವನ್ನು ಜನರು ಮರೆಯಲಾರಂಭಿಸಿದ್ದರು. ವಿರಾಗನ ಹೋರಾಟ ಅವಿಶ್ರಾಂತವಾಗಿ ಸಾಗಿತ್ತು. ಅವನ ಬುದ್ಧಿಗೆ ಬೆರಗಾದ ಅವನ ಸಹಾಧ್ಯಾಯಿಗಳು ಅವನ ಕಡೆಗೆ ಪ್ರೇಮಾ ದರಗಳಿಂದ ನೋಡುತ್ತಿದ್ದರು. ಅಧ್ಯಾಪಕರು ಆಸೆ ಪ್ರೇಮಗಳು ತುಂಬಿದ ನೋಟಗಳನ್ನು ಅವನೆಡೆಗೆ ಬೀರುತ್ತಿದ್ದರು. ಅವನು ಮೈಮರೆತು ಮುನ್ನಡೆ ದಿದ್ದ. ಕೊನೆಗೆ ಬಿ.ಎ. ಆಯಿತು.....ಎಲ್‌ಎಲ್.ಬಿ.ಯೂ ಆಯಿತು. ಅವನು ಕೆಲವೊಂದು ಹಣವನ್ನೂ ಕೂಡಿಟ್ಟಿದ್ದ. ಮತ್ತು ಅವನ ಈ ಅಸಂಖ್ಯ ಉದ್ಯೋಗಗಳ ಮುಖಾಂತರ ಅವನಿಗೆ ಬಂದ ಅನುಭವದ ಸಂಪತ್ತಿಯೇನೂ ಕಡಿಮೆ ಬೆಲೆಯದಾಗಿರಲಿಲ್ಲ. ಅವನು ಅನೇಕ ತರದ, ಅನೇಕ ಜಾತಿ ರೀತಿ ಗಳ, ಅನೇಕ ವರ್ಗದ ಜನರನ್ನು ಕಂಡು ನೋಡಿದ್ದ—ತೀರ ಹತ್ತಿರದಿಂದ ನಿರೀಕ್ಷಿಸಿದ್ದ. ಜಗತ್ತನ್ನವನು ಸರಿಯಾಗಿ ಅರಿತಿದ್ದ. ಯಶಸ್ಸು ಪಡೆಯಲು,

ಸುಖವಾಗಿ ಬಾಳಿ ಬದುಕಲು ಬೇಕಾಗುವ ಸಾಧನವಾವುವೆಂಬುದನ್ನು ಅವನು ಅರಿತಿದ್ದ, ಸಂಪೂರ್ಣವಾಗಿ ಅರಿತಿದ್ದ—ಕೇವಲ ಹದಿನಾರಾಣೆಯ ಮೋಸ, ಸೋಗಲಾಡಿತನ! ಅದೇ ಬೇಕು. ಬದುಕಿ ಬಾಳುವದಾದರೆ ಮನುಷ್ಯ ಎರಡು ಮುಖವಾಡಗಳನ್ನು ಧರಿಸಲೇಬೇಕು. ವಿರಾಗನೂ ಜಗತ್ತಿಗಾಗಿ ಬೇರೊಂದು ಮುಖವಾಡವನ್ನು ಧರಿಸಿದವನಾದರೂ ಅವನ ನಿಷ್ಕಲಂಕ ಹೃದಯದೊಳಗಿನ ಸೌಜನ್ಯ ರತಿಮಾತ್ರವಾದರೂ ಕಡಿಮೆಯಾಗಿರಲಿಲ್ಲ. ದುಃಖಿತರ ಬವಣೆಯನ್ನು ಕಣ್ಣಿಟ್ಟು ನೋಡಿಯೂ ಎದೆಗುಂದದಿರುವ ಧೈರ್ಯವನ್ನು ಪ್ರಕಟಿಸುವಾಗಲೇ ಅವನ ಹೃದಯ ದಯಾದ್ರ್ರವಾಗದಿರುತ್ತಿರಲಿಲ್ಲ.

ಬಣ್ಣ ಬಳಿದುಕೊಂಡು, ಬಣ್ಣದ ಮಾತುಗಳನ್ನಾಡುತ್ತ ರಂಗಭೂಮಿಯ ಮೇಲೆ ಪ್ರವೇಶಿಸುವ ನಟನಿಗೆ ರಂಗದ ಪರದೆಯ ಹಿಂದಿರುವ ಎಲ್ಲ ವಿಕೃತ ವ್ಯಾಪಾರಗಳನ್ನೂ, ಕೃತಕವನ್ನೂ ಪ್ರೇಕ್ಷಕರಿಂದ ಬಚ್ಚಿಡುವ ಸಂಪೂರ್ಣ ಮುತುವರ್ಜಿ ವಹಿಸಬೇಕಾಗುತ್ತದೆ. ವಿರಾಗನ ಕಾಲೇಜ ಜೀವನ ಮುಗಿಯಿತು. ವಿಸ್ತೃತವಾದ ಜಗದ ಜೀವನದಲ್ಲಿ ತನ್ನ ಸ್ಥಾನವನ್ನಾಕ್ರಮಿಸಲು ಬೇಕಾಗುವಷ್ಟು ಹಣವನ್ನು ಅವನು ಸಂಗ್ರಹಿಸಿದ. ಈ ಹಿಂದೆ ಮಾಡಿದ ದೃಶ್ಯಗಳನ್ನೆಲ್ಲ ಮರೆ ಮಾಡಿ ತನ್ನ ಹೊಸ ಭೂಮಿಕೆಯ ಅಭಿನಯದ ಆರಂಭದ ನಾಂದಿಯಾಗಿ ಅವನು ಸ್ಥಾನತ್ಯಾಗ ಮಾಡಿದ. ಅವನು ಮುಂಬಯಿಯನ್ನು ಬಿಟ್ಟು ನಡೆದ. ಯುರೋಪಿಯನ್ ಪ್ರಿನ್ಸಿಪಾಲನ ಶಿಫಾರಸಿನ ಉಪಯೋಗವಾಗಿ ಕೊನೆಗೊಮ್ಮೆ ಅವನಿಗೆ 'ಪಬ್ಲಿಕ್‌ಪ್ರಾಸಿಕ್ಯೂಟರನ' ಸ್ಥಳ ದೊರೆಯಿತು.

ಜನ್ಮಿಸಿದಾಗಿನಿಂದಲೂ ಒಂದೆ ಸವನೇ ಹೊಡೆದಾಡಿ ಹೊಡೆದಾಡಿ ಇಂದೇನೋ ಅವನ ಜೀವನದ ನೌಕೆ ಅಲೆದಾಟವನ್ನು ನಿಲ್ಲಿಸಿ ನಿದಾನವಾಗಿ ತೇಲಲಾರಂಭಿಸಿತ್ತು. ನಾಗಪೂರಿನಲ್ಲಿ ಅವನು ತಕ್ಕುದಾದ ಹಣವಂತಿಕೆಯ ಸಕಲ ಸುಖೋಪಭೋಗದಿಂದೊಡಗೂಡಿದ ಸುಸಜ್ಜಿತವಾದ ಜೀವನವನ್ನು ಆರಂಭಿಸಿದನು. ಆ ಹೊರನೋಟವನ್ನು ನೋಡಿದ ಯಾರಿಗೂ ಅವನ ಸಾಮಾಜಿಕ ದರ್ಜೆ ಬಹಳ ಉಚ್ಚವಾದುದೇ ಇತ್ತೆಂದು ಎನ್ನಿಸುವಹಾಗಿತ್ತು. ಅವನ ಸುತ್ತುಮುತ್ತಲೂ ಕೂಡಲೆ ದೊಡ್ಡ ಜನರ ಸಂಬಂಧಗಳ ರಿಂಗಣವೇ

ಉಂಟಾಗಲಾರಂಭಿಸಿತು. ಅವನ ಸಿರಿವಂತಿಕೆಯೊಡನೆ ಅವನ ಕುಶಾಗ್ರ ಬುದ್ಧಿಯ ಕಾರ್ಯದಕ್ಷತೆಯ ಮೂಲಕವಾಗಿಯೂ ಅವರೆಲ್ಲ ಅವನಲ್ಲಿ ಆಕರ್ಷಿತರಾಗಿದ್ದರು. ಆದರೆ ವಿರಾಗನ ಸಂಗಡಲೇ ಇರುತ್ತಿದ್ದವರಿಗೂ ಕೂಡ, ವಿರಾಗ ಎಂತಹ ಮನುಷ್ಯ, ಅವನ ಅಂತರಂಗದ ಭಾವನೆಗಳು ಯಾವವು, ಅವನ ಸ್ವಭಾವವೆಂತಹದು ಎಂಬುದರ ಸರಿಯಾದ ಪರಿಚಯ ವಾಗಿರಲೇ ಇಲ್ಲ.

೧೨

ವಿರಾಗನಿಗೆ ಸ್ತ್ರೀ ಜಾತಿಯ ಪರಿಚಯವೆಂದರೆ ಅವನ ತಾಯಿ ಮತ್ತು ಅವನ ತಾಯಿಯಂತಹರೇ ಇನ್ನಿತರ ಸ್ತ್ರೀಯರು; ಇವರಲ್ಲದೆ, ಅವನಿಗೆ ಮತ್ತಾರ ಪರಿಚಯವೂ ಇರಲಿಲ್ಲ. ಆದರೆ ಅನೇಕ ಸಂಕಟಗಳನ್ನೆದುರಿಸಿ ಮುಂದಕ್ಕೆ ಬಂದಿದ್ದ ವಿರಾಗ ಸ್ತ್ರೀಯರಿಂದ ವ್ಯಾಪಿಸಲ್ಪಟ್ಟ ವಿಶ್ವದ ಅರ್ಧ ಭಾಗವನ್ನು ಪೂರ್ಣವಾಗಿ ಉಪೇಕ್ಷಿಸಿ ಬಿಟ್ಟಿದ್ದನೆಂತಲ್ಲ. ಅವನೂ ಈ ಸ್ತ್ರೀಯರ ಜಗತ್ತಿನ ಕಡೆಗೆ ನೋಡುತ್ತಲಿದ್ದ. ಅವರ ವಿಷಯವಾಗಿ ಅವನ ಗ್ರಹಿಕೆ ಅಷ್ಟು ಚೆನ್ನಾಗಿರಲಿಲ್ಲ. ಸ್ತ್ರೀಯರೆಂದರೆ ಅವನಿಗೆ ಅಕ್ಷರಶಃ ಆಟಿಕೆ ಗಳೇ ಎಂದೆನಿಸಿದ್ದರು. ಕೇವಲ ಮೋಜುಮಾಡಬೇಕೆಂದು ಯಾರಿಗೆನ್ನಿಸು ವದೋ ಅವರು ಬೇಕಾದರೆ ಅವರ ಕಡೆಗೆ ಲಕ್ಷ್ಯಕೊಡಬೇಕೆಂದು ಅವನಿಗೆ ನ್ನಿಸುತ್ತಿತ್ತು. ಆ ಸ್ತ್ರೀಯರ ವಿಶ್ವ! ಅಬ್ಬಬ್ಬಾ, ಅದೆಲ್ಲ ಹೂವಿಗಿಂತ ಕೋಮಲ, ಗಾಳಿಗಿಂತ ತೆಳ್ಳಗೆ, ಮುಟ್ಟಿದರೆ ಮುರಿಯುವಂತಹದು. ಛೆ.... ಅಂತಹ ಆ ಸುಕೋಮಲ ಪುಷ್ಪಗಳಿಗೆ ಪುರುಷರ ಗಾಳಿಯೇ ಅಪಮಾನಾ ಸ್ಪದವಾದುದು, ತಮ್ಮೊಳಗೇ ತಾವು ಬದುಕುವ, ಸಂಕುಚಿತ ಮನೋ ವೃತ್ತಿಯ, ಸಂಕುಚಿತ ಜಗತ್ತಿನಲ್ಲಿಯೇ ವಿಹರಿಸುವ ಈ ಐದು ಮಲ್ಲಿಗೆಯ ತೂಕದ ನಾಜೂಕು ರಾಣಿಯರ ಸಂಗಡ ಪರಿಚಯ ಮಾಡಿಕೊಳ್ಳುವ ದೆಂದರೆ ಕೆಲಸವಿಲ್ಲದೆ ಹೊತ್ತುಗಳೆಯುವ ಸುಖಪುರುಷರ ವಿಲಾಸಸಾಧನ ವೆಂದೇ ಅವನ ಅಭಿಪ್ರಾಯವಾಗಿತ್ತು.

ಆದರೆ ಈ ಮೋಜು ಮಾಡುತ್ತ ಕೂಡ್ರುವದಕ್ಕೆ ಅವನಿಗೆಲ್ಲಿಯ ವ್ಯವ ಧಾನವಿದ್ದಿತು? ಆದರೆ ಸ್ತ್ರೀದಾಕ್ಷಿಣ್ಯವವನಲ್ಲಿರಲಿಲ್ಲವೆಂತಲ್ಲ. ಅವನಿಗೆ ಅವರ ವಿಷಯವಾಗಿ ಸಹಾನುಭೂತಿಯೂ ಇತ್ತು—ಅಬಲೆಯರೆಂದು. ಆದರೆ

ಸರ್ವ ವಸ್ತು ಜಾತಿಗಳಲ್ಲಿ ಶ್ರೇಷ್ಠವಾದ, ಅತ್ಯಂತ ಆದರಣೀಯವಾದ ಸಂಗತಿ 'ಸ್ತ್ರೀ' ಎಂದು ಅವನಿಗೆಂದಿಗೂ ಎನ್ನಿಸಿರಲಿಲ್ಲ. ಮನೆಯ ಆವಾರದ ಗೋಡೆಗಳೊಳಗೇ ಮಡಿಮಾಡಿ ನೀರು ಹೂಸಿ ಬೆಳಸಿದ ಈ ಕೋಮಲವಾದ ಹೂಬಳ್ಳಿಗಳ ಶೋಭೆಯನ್ನೇ ಸಂತತವಾಗಿ ನೋಡುತ್ತ ಕುಳಿತಿರುವ ಆನಂದವನ್ನನುಭವಿಸಬೇಕೆಂದು ಅವನಿಗೆಂದೂ ಎನ್ನಿಸಿರಲ್ಲಿಲ್ಲ. ಅವನು ಸೌಂದರ್ಯ ಸುಕೋಮಲತೆಗಳ ಅರ್ಥವನ್ನು ಸರಿಯಾಗಿ ತನ್ನಲ್ಲಿ ತಾನೇ ವಿಭಜಿಸಿ ನೋಡಿದ್ದ. ಅವುಗಳ ವಿಷಯದಲ್ಲಿ ಸಾಮಾನ್ಯವಾಗಿ ಉಂಟಾಗುವ ಭ್ರಮೆಯ ಪರದೆಯನ್ನವನು ಹರಿದೊಗೆದಿದ್ದ. ಯಾವಳೊಬ್ಬ ಸುಂದರ ಯುವತಿಯನ್ನು ನೋಡಿದಾಗ ಅವನ ಮನಸ್ಸು ಒಂದು ಕ್ಷಣ ಅವಳೆಡೆಗೆ ಜಗ್ಗದಿರುತ್ತಿರಲಿಲ್ಲ. ಆದರೆ ಒಮ್ಮೆಲೆ ಅರಿವಾಗುತ್ತಿತ್ತು. 'ಸುಂದರ ವಸ್ತುವೇನೋ ದೊರೆಯಿತು. ಆದರೆ ಬಹು ದಿನಗಳ ಸಹವಾಸದಿಂದ ಅದು ಹಳೆಯದಾಗದಿಲಾರದು. ಅದು ಕೊನೆಯವರೆಗೂ ಹಾಗೆಯೇ ಮೊದಲಿನಂತೆಯೇ ಆಕರ್ಷಕವಾಗಿರಲಾರದು. ಈ ಸೌಂದರ್ಯ ಸಂತತವಾಗಿ ನನ್ನ ಮನಸ್ಸನ್ನು ಸೆರೆಹಿಡಿದಿರಲಾರದು. ಸೌಂದರ್ಯವೊಂದಲ್ಲದೆ ಇದೆಯಾದರೂ ಏನು ಅದರಲ್ಲಿ ಅಂಥದು?' ಸ್ತ್ರೀತ್ವದ ಮೋಹಿನಿ ಇತರರಂತೆ ಅವನ ಮೇಲೆಯೂ ಬೀಳದಿರುತ್ತಿರಲಿಲ್ಲ; ಆದರೆ ಸಂಸಾರದ ಹಳಸಿದ ವಾಸನೆಯಿಂದುಂಟಾಗುವ ನಿರ್ಗತಿಕ ಅಸಹಾಯತೆಗೆ ತನ್ನ ಮನಸ್ಸನ್ನು ಒಳಗು ಮಾಡುವುದಕ್ಕಿಂತ ದೂರವಿರುವದೇ ಲೇಸೆಂದು ಅವನಿಗೆನ್ನಿಸುತ್ತಿತ್ತು.

ಅವನೂ ಈ ಸ್ತ್ರೀಯರ ವಿಶ್ವದ ಕಡೆಗೆ ನೋಡುತ್ತಲಿದ್ದ—ಉತ್ಸುಕತೆಯಿಂದ, ಕುತೂಹಲದಿಂದ. ತನ್ನ ಸಾಹಸೀ ವೃತ್ತಿಗೆ ತಕ್ಕಂತೆ ಅವನ್ನು ಒಂದು ಸಾಹಸವನ್ನು ಬೇಕಿದ್ದರೆ ಸಹಜವಾಗಿ ಮಾಡಿ ನೋಡಬಹುದಾಗಿತ್ತು; ಆದರೆ ಪರಿಶ್ರಮವಿಲ್ಲದ ಗಳಿಕೆಯಿಂದ ಅವನಿಗೆ ಯಾವಾಗಲೂ ಸಮಾಧಾನವಾಗುವದು ಶಕ್ಯವಿರಲಿಲ್ಲ. ಅವನ ಬಡತನದ ಸ್ಥಿತಿಯನ್ನು ನೋಡಿ ಅವನೆಡೆಗೆ ಉಪಹಾಸಾತ್ಮಕವಾಗಿ ನಕ್ಕಿದ್ದವರೇ ಈಗ ತಮ್ಮ ಮಗಳನ್ನು 'ಮಾಡಿಕೊಳ್ಳುವದಕ್ಕೆ' ಅವನ ದುಂಬಾಲು ಬಿದ್ದಿದ್ದರು. ಅವನು ಹುಡುಗಿಯರನ್ನೂ 'ನೋಡಿದ್ದ'. ಆದರೆ ಅವರೆಲ್ಲ ಅವನಿಗೆ ಆಟದ ಗೊಂಬೆಗಳಂತೆ ಕಾಣುತ್ತಿದ್ದರು. ಈ ಗೊಂಬೆಗಳ ಸಂಗಡ ಅಕ್ಷರಶಃ ಮೋಜು ಮಾಡುವಾಗ

ಅವನ ಬುದ್ಧಿ ಬಧಿರವಾಗದಿರುತ್ತಿರಲಿಲ್ಲ; ಇಷ್ಟೇ ಅಲ್ಲ, ಅವರು ಅವನಿಗೆ ಕಾಲೊಳಗೆ ಭಾರವಾದ ಬೇಡಿಗಳಾಗಬಹುದಾಗಿತ್ತು. ಸಂತತವಾದ ಪರಿಶ್ರಮದಿಂದ ಗಳಿಸಿದ ವಸ್ತುವನ್ನಲ್ಲದೆ ಬೇರೆಯದನ್ನು ತೆಗೆದುಕೊಳ್ಳಲು ಒಪ್ಪದ ಅವನ ಮನಸ್ಸು ಅಂಥದರಿಂದ ಸುಖ ಹೊಂದುವದು ಎಂದಿಗೂ ಸಾಧ್ಯವಿರಲಿಲ್ಲ.

ರಾಧಿಕೆಯ ಅಣ್ಣನ ಪರಿಚಯವಿದ್ದುದರಿಂದ ಮೇಲಿಂದ ಮೇಲೆ ಅವರ ಮನೆಗೆ ಹೋಗಿ ಬರುವ ಪರಿಪಾಠ ವಿರಾಗನಿಗೆ ಇದ್ದಿತು. ಇತರ ಅನೇಕ ಸರ್ವ ಸಾಧಾರಣ ಹುಡುಗಿಯರಂತೆಯೇ ರಾಧಿಕೆಯೂ ಒಬ್ಬಳು. ರಾಧಿಕೆಯ ಸುಂದರ, ಸುಕುಮಾರ ಹಾವಭಾವಗಳೂ, ಮೆಚ್ಚಿನ ಮಾತುಕತೆಗಳೂ ಅವನ ಮನರಂಜನೆ ಮಾಡಬಹುದಾಗಿತ್ತು. ಆದರೆ ಅದು ಕೆಲ ಹೊತ್ತು ಮಾತ್ರ. ಆಗಲೇ ಅವನಿಗೆ ಅಚಲೆಯ ಪರಿಚಯವೂ ಆಯಿತು. ಅವಳನ್ನು ಪ್ರತ್ಯಕ್ಷವಾಗಿ ನೋಡುವುದಕ್ಕೆ ಮೊದಲು ಅವಳ ವಿಷಯವಾಗಿ ಅವನ ಕಲ್ಪನೆ ಏನಿದ್ದಿತೋ ಏನೋ! ಆದರೆ ಅವಳ ಆ ನಿಶ್ಚಲ ನಿಶ್ಚಿಂತತೆಯ ನಟನೆ, ಅವಳ ಹೃದಯದಲ್ಲಿ ಪಂಜಿನಂತೆ ಉರಿಯುತ್ತಲಿದ್ದ ಜ್ವಾಲೆ—ಅವನಿಗೆಲ್ಲ ಸರಿಯಾಗಿ ಕಂಡಿತ್ತು. ಬುದ್ಧಿ ಮತ್ತು ಭಾವನೆಯೊಂದರ ಪ್ರಖರತೆಯಿಂದಲೂ ಬಾಳುವ ಜೀವಂತಳಾದ ಸ್ತ್ರೀ ಅವನ ದೃಷ್ಟಿಪಥದಲ್ಲಿ ಇಲ್ಲಿಯವರೆಗೂ ಬಂದಿರಲಿಲ್ಲ. ಆದರೆ ಅಚಲೆಯಲ್ಲಿ ಏನೋ ಒಂದು ಬೇರೆ ತರಹೆಯಿದ್ದಿತು. ಜೀವನದುದ್ದಕ್ಕೂ ಹೋರಾಡುತ್ತಿರುವಾಗ ಧೈರ್ಯವಾಗಿರುವ ವ್ಯಕ್ತಿ—ಅದರಲ್ಲಿಯೂ ಸ್ತ್ರೀ—ಅವಳಲ್ಲಿಯೂ ತನ್ನಲ್ಲಿಯೂ ಯಾವುದೋ ಒಂದು ತರದ ಸಾಮ್ಯವಿತ್ತು. ಜೀವನದ ಈ ಹೋರಾಟಕ್ಕೆ ಕೇವಲ ಅಸಹಾಯತೆಯಿಂದಲ್ಲದೆ ಸಹೇತುಕವಾಗಿ ತನ್ನೆಲ್ಲ ಶಕ್ತಿಯನ್ನು ಉಪಯೋಗಿಸಿ ಬಾಳುವ ಪಣ ತೊಟ್ಟು ಸಿದ್ಧಳಾಗಿದ್ದ ಅಚಲೆ ಅವನ ಲಕ್ಷ್ಯವನ್ನು ಸೆಳೆದಿದ್ದಳೆಂಬುದರಲ್ಲಿ ಆಶ್ಚರ್ಯವಿರಲಿಲ್ಲ.

೧೩

ನಡುವಿನ ರಜೆಯಲ್ಲಿ ಚಹಕ್ಕೆಂದು ಎಲ್ಲ ಶಿಕ್ಷಕಿಯರೂ ಒಂದೆಡೆಗೆ ಕೂಡಿದ್ದರು. ಹನ್ನೊಂದು ಜನ ಶಿಕ್ಷಕಿಯರಲ್ಲಿ ಇಬ್ಬರು ವಿಧವೆಯರು, ಲಗ್ನ

ನಿಶ್ಚಯವಾದ ರಾಧಿಕೆ, ಅಚಲಾ ಮತ್ತು ಏಳು ಜನ ಕುಮಾರಿಕೆಯರೇ ಇದ್ದರು. ೨೬ರಿಂದ ೩೦ರ ವಯಸ್ಸಿನಲ್ಲಿದ್ದ ಈ ಹೆಣ್ಣು ಮಕ್ಕಳಲ್ಲಿ ನಾನಾ ತರದ ಚೇಷ್ಟೆ ವಿನೋದದ ಮಾತುಗಳು ನಡೆಯುತ್ತಿದ್ದವು ಅವರಲ್ಲಿ ಮತ ಭೇದಗಳಿದ್ದುದೂ ಅವೆಷ್ಟೋ! ಆ ಮತಭೇದಗಳಲ್ಲಿ ತೀವ್ರತೆಯೂ ಇದ್ದಿತು. ಆದರೂ ಬಿಡುವಿನ ಚಹಾಪಾನದ ಈ ಸಂದರ್ಭದಲ್ಲಿ ಮೇಲೆ ಯಾರೂ ಅವನ್ನು ತೋರಗೊಡದೆ ಚೇಷ್ಟೆ ವಿನೋದಗಳಲ್ಲಿ ತಮ್ಮನ್ನು ತೇಲಿಸಿಬಿಡುತ್ತಿದ್ದರು. ಚೇಷ್ಟೆಯಲ್ಲಿಯೂ ಕೂಡ ಪ್ರಕಾರಗಳುಂಟು. ಅದು ನಿರುಪದ್ರವಿಯಾದುದಾಗಿರಬಹುದು. ಅದರಂತೆ ಚೇಷ್ಟೆಗೆಂದು ಪ್ರಾರಂಭಿಸಿ ಇತರರ ಮರ್ಮಕ್ಕೆ ತಗಲುವಂತಹ ಮಾತನ್ನು ಆಡಬಯಸುವ ಚೇಷ್ಟೆಯ ಪ್ರಕಾರವೂ ಒಂದುಂಟು. ಅವರಲ್ಲಿ ಏನೆಲ್ಲ ಮಾತುಗಳೂ ನಡೆದಿರುತ್ತಿದ್ದವು. ಎಲ್ಲರೂ ತಮ್ಮ ಸ್ವಭಾವಕ್ಕೆ ತಕ್ಕಂತೆ ಸೌಮ್ಯವೋ ತೀಕ್ಷ್ಣವೋ ಆದ ವಾಕ್ ಶಸ್ತ್ರಗಳಿಂದ ಸನ್ನದ್ಧರಾಗಿ ಇನ್ನೊಬ್ಬರ ಮೇಲೆ ಏರಿ ಹೊರಟಿರುತ್ತಿದ್ದರು. ಟ್ರೇನಿಂಗ ಕಾಲೇಜಿನಿಂದ ಹೊರಬಿದ್ದ ಹಳೆಯ ಪದ್ಧತಿಯ ವಿಧವೆಯರಾದ ಶಿಕ್ಷಕಿಯರು ಗಂಭೀರರಾಗಿಯೇ ಇರುತ್ತಿದ್ದರು. ಮತ್ತೆ ಆಗೀಗ ಚೇಷ್ಟೆ ಮಾಡಿದರೂ ಯಾರಾದರೊಬ್ಬರ ಲಗ್ನದ ವಿಷಯವಾಗಿಯೇ ಒಂದು ಹಾಸ್ಯದ ಮಾತು ಬರುವದುಂಟು. ಅಚಲೆಯ ಹೃದಯದಲ್ಲಿ ಹೊತ್ತಿದ್ದ ಬೇಗೆ ಅವರ ಭಗ್ನಜೀವನದ ಹೃದಯಗಳಲ್ಲಿದ್ದುದಕ್ಕಿಂತ ಕಡುತರವಾಗಿದ್ದಿತಾದರೂ ಅವಳ ದುರ್ದಮ್ಯ ವೃತ್ತಿಯ ಮೂಲಕವಾಗಿ ಅವಳು ಕೇವಲ ನಿರುಪದ್ರವಿಯಾದ ಮೃದುಹಾಸ್ಯ ಮಾಡುವಳು. ಇನ್ನೊಂದು ವಾರದೊಳಗೇ ರಾಧಿಕೆಯ ಲಗ್ನವಾಗುವದಿದ್ದುದರಿಂದ ಅವಳೇ ಈಗ ಸಾಧಾರಣವಾಗಿ ಅವರಿಗೆ ಮನರಂಜನೆಯ ಸಾಧನವಾಗಿದ್ದಳು. ಅವಳ ವಿಷಯವಾಗಿ ಮಾತು ನಡೆದಿತ್ತು.

"ಏನೇ, ಚಹಾ ಚೆಲ್ಲಿಬಿಟ್ಟೆಯಲ್ಲ? ಮನಸ್ಸನ್ನೆಲ್ಲಿಟ್ಟಿರುವಿ?"

"ಅಲ್ಲ, ಹೀಗೇನು ಮತ್ತೆ? ನಮಗೆ ಗೊತ್ತೇ ಇರಲಿಲ್ಲ."

"ಇದು ನೋಡಿರಿ. ಈ ಮುದುಕಿಯನ್ನು ಇನ್ನಾರು ಕೇಳುವರು! No chance for me. ನಿಮ್ಮದನ್ನು ನೀವೇ ನೋಡಿಕೊಳ್ಳಿರಿ."

"ಅಮ್ಮಮ್ಮಾ, ಇಷ್ಟೇಕೆ ಆಸೆ ಬಿಟ್ಟೆ ಈಗಾಗಲೇ. ಹೇಳಲೇನು ಒಂದು ಉತ್ತಮ ಸ್ಥಳ ನೋಡಿ?" ವಿಧವೆಯೊಬ್ಬಳು ಅರ್ಧ ಚೇಷ್ಟೆ ಮತ್ತು ಅರ್ಧ ಗಂಭೀರತೆಯಿಂದ ಎಂದಳು.

"ಆಯಿತು, ಗಂಗಾತಾಯಿಯಂತೂ ಕೂಡಲೇ ಸ್ಥಳಗಳ ಯಾದಿಯನ್ನೇ ಹಿಡಿದು ಸಿದ್ಧ!"

"ಯಾಕೆ, ನಿಮಗೇನೂ ಬೇಡವೇ ಆಗಿದೆಯಲ್ಲವೆ?"

"ಹೌದು, ಬೇಡವಲ್ಲವಾದರೇನು? ಎದ್ದಾಗ ಕುಳಿತಾಗಲೆಲ್ಲ ಲಗ್ನದ ವಿಚಾರವನ್ನೇ ನಾವು ಮಾಡುತ್ತಿರುವೆವೋ ಏನು?"

"ಎದ್ದಾಗ ಕುಳಿತಾಗ ಒಮ್ಮೆಯಲ್ಲ, ಆದರೆ ಒಮ್ಮೊಮ್ಮೆ ತಲೆ ತಿರುಗುವ ವರೆಗೂ ಮಾಡುತ್ತೀರಷ್ಟೇ?" ಅಚಲೆ ನಗುತ್ತಲೆಂದಳು.

"ನನ್ನ ಮನಸ್ಸಿನಲ್ಲಿಯಂತೂ ಎಂದೂ ಲಗ್ನದ ವಿಚಾರವೇ ಬರುವದಿಲ್ಲ." ಮೂವತ್ತು ವರುಷದ ಕುಮಾರಿಕೆಯೊಬ್ಬಳೆಂದಳು.

"ನಿಜವಾಗಿಯೂ?"

"ಅತ್ಯಂತ ನಿಜವಾಗಿ" ಕೇವಲ ಸತ್ಯವನ್ನೇ ನುಡಿಯುವ ಆವಿರ್ಭಾವದೊಡನೆ ಅವಳೆಂದಳು.

"ಅಮ್ಮಮ್ಮಾ, ಅನಂತರ Something must be wrong with you."

"What do you mean?"

"ನನ್ನ ಮತವೆಂದರೆ ನಿಮ್ಮ ಬೆಳವಣಿಗೆ ನಾರ್ಮಲ್ ಸ್ತ್ರೀಯರಂತೆ ಇರಲಾರದೆಂದು."

"ನಾರ್ಮಲ್ ಸ್ತ್ರೀಯರೆಂದರೆ? ಎಲ್ಲರ ತಲೆಯಲ್ಲಿಯೂ ಇಂತಹ ವಿಚಾರಗಳಿದ್ದೇ ತೀರಬೇಕೆಂಬ ಶಾಸ್ತ್ರವಿದೆಯೋ ಏನು?"

"ಹೌದು. ಮಾನಸಶಾಸ್ತ್ರದ ಸಿದ್ಧಾಂತವೇ ಹಾಗಿದೆ. ಈ ರೀತಿ ವಿಚಾರಗಳಿಲ್ಲದ ಮೆದುಳಿನಲ್ಲಿ ಏನಾದರೂ ವಿಕೃತಿಯಿರಲೇಬೇಕು."

"ಅಬ್ಬಾ, ನೀವು ಸ್ವಲ್ಪ ಪರಮಜ್ಞಾನಿಗಳೇ ಕಾಣುತ್ತೀರಲ್ಲ—ನಮ್ಮ ಮನಸ್ಸಿನೊಳಗೆ ನಡೆಯುವ ವಿಚಾರಗಳನ್ನು ತಿಳಿಯುವ ಧಾರ್ಷ್ಟ್ಯವನ್ನು ತೋರುತ್ತೀರೆಂದಮೇಲೆ?"

" ಛೆ, ನಮ್ಮವ್ವಾ, ಈ ಲಗ್ನವಾದವರಿಗಂತೂ ಮನಸ್ಸಿನಲ್ಲಿ ಬೇರೆ ವಿಚಾರಗಳೇ ಇರುವದಿಲ್ಲ—ಲಗ್ನ, ಲಗ್ನ—ತೀರಿತು " ಮತ್ತೊಬ್ಬಳೆಂದಳು.

" ಸುಮ್ಮನೆ ಯಾಕೆ ಇಂತಹ ವಂಚನೆ ಮಾಡುತ್ತಿದ್ದೀರಿ ? ಹೌದು, ನಾವು ಇಂತಹ ವಿಚಾರಮಾಡುತ್ತೇವೆ ಎಂದು ಒಪ್ಪಿಕೊಂಡರೆ ಅದರಲ್ಲಿ ತಪ್ಪೇನು ? "

" ಅಲ್ಲ, ನಾವೆಂದೂ ಹಾಗೆ ವಿಚಾರ ಮಾಡುವದೇ ಇಲ್ಲವಲ್ಲ." ಆ ಏಳರಲ್ಲಿ ಆರು ಜನ ಕುಮಾರಿಕೆಯರು ಕೂಗಿಕೊಂಡರು.

" You are fools ! " ಏಳನೆಯವಳು ಧೈರ್ಯವಾಗಿ ಹೇಳಿದಳು. " ನನ್ನ ಮನಸ್ಸಿನಲ್ಲಿ ಇಂಥ ವಿಚಾರಗಳು ಬರುತ್ತವೆಯೋ, ತಾಯಿ."

" ಆದರೆ ಅದರಲ್ಲಿ ತಪ್ಪೇನೂ ಇಲ್ಲವಲ್ಲ. ಅದು ಸ್ವಾಭಾವಿಕವೇ ಆಗಿದೆ " ಎಂದು ಅಚಲೆಯೆಂದಳು.

" ಥತ್, ಅದೆಲ್ಲ ಸುಳ್ಳು. ಕಾಮಪೂರ್ತಿಗೆ ಲಗ್ನವೊಂದು ಸಮಾಜ ನಿರ್ಮಿಸಿದ ಸಾಧನ ಮಾತ್ರ. ಹಾಗೆ ನೋಡಿದರೆ ಲಗ್ನವಿಲ್ಲದೆ ಯಾರು ಇರಬಲ್ಲರೋ ಅಂಥವರ ಮನೋಧೈರ್ಯ ನಿಜವಾಗಿ ಕೊಂಡಾಡಬೇಕಾದ ಮಾತು."

" ಯಾಕೆ, ಯಾತಕ್ಕೆ ಸುಮ್ಮನೆ ಶಾಬ್ದಿಕ ವಾದದ ಆಡಂಬರ ಮೆರೆಯಿಸುತ್ತಿದ್ದೀರಿ ? " ಅಚಲೆಯೆಂದಳು.

" ಇರಲಿ ಬಿಡಿರೀ. ಬರೀ ವಾದವ್ಯಾತರದು ? ನೋಡೋಣ. ನಾವೂ ಇದ್ದೇವೆ, ನೀವೂ ಇರುತ್ತೀರಲ್ಲ " ಗಂಗಾತಾಯಿಯವರೆಂದರು.

ಅಷ್ಟೊತ್ತಿಗೆ ಸಮೀಪದ ಒಂದು ಚಹದ ಕಪ್ಪಿನ ಮೇಲಿನ ಬಣ್ಣ ಬಣ್ಣದ ಚಿತ್ರದ ಕಡೆಗೆ ನೋಡುತ್ತ ಒಬ್ಬಳು ಗಟ್ಟಿಯಾಗಿ ನುಡಿದಳು ; " Love me."

" No one is going to love you " ಮತ್ತೊಬ್ಬಳೆಂದಳು.

ಎಲ್ಲರೂ ನಗಲಾರಂಭಿಸಿದರು.

"ಈಗ ನೋಡಿರಿ. ಚೇಷ್ಟೆಯ ಸೋಗು ಹಾಕಿ ನೀವು ಮನಸ್ಸಿನಲ್ಲಿ ಬಚ್ಚಿಟ್ಟ ಇಚ್ಛೆಗಳು ಹೇಗೆ ಹೊರಬರುತ್ತಲಿವೆ? ಹಾಗಿದ್ದರೆ ಸರಳವಾಗಿ ಅದನ್ನೇ ಒಪ್ಪುವದಿಲ್ಲವೇಕೆ?"

"ಅಲ್ಲ, ನಾನು ಈ ಕಪ್ಪಿನ ಮೇಲೆ ಬರೆದದ್ದನ್ನು ಮಾತ್ರ ಓದಿದೆ."

"ಆದರೆ ಇಲ್ಲಿರುವ ವರ್ತಮಾನಪತ್ರದ ತುಂಡಿನ ಮೇಲೆ ದೊಡ್ಡಕ್ಷರಗಳನ್ನು ಬರೆದುದನ್ನು ನೀವು ಯಾಕೆ ಓದಲಿಲ್ಲ? ಅದನ್ನೇ ಏಕೆ ಓದಿದಿರಿ? 'Love me' ಎಂದು ಒದರಿ ಓದುವದರಿಂದುಂಟಾಗುವ, ಕಟ್ಟಾಡಿಸಿದಂತಾಗುವ ಆನಂದವನ್ನು ಚೇಷ್ಟೆಯ ನೆವ ಮಾಡಿ ಅನುಭವಿಸುವದರಲ್ಲಿ ಮೋಜೆನಿಸುತ್ತದೆಂದಲ್ಲವೆ?" ಅಚಲೆಯೆಂದಳು.

"ಹೌದು. ಆದರೆ ಅದರ ಬೆಲೆ ಇಷ್ಟಕ್ಕಿಷ್ಟೇ."

"ಅಲ್ಲ, ಅಲ್ಲ. ಅದರದೇ ಬೆಲೆ ಹೆಚ್ಚು. ಯಾವದು ಮನಸ್ಸನ್ನೆಲ್ಲ ಆವರಿಸಿ ಒಳಗೆ ನಿಲ್ಲಲಾರದೆ ಹೊರಬರುತ್ತಿರುವದೋ, ಮತ್ತೆ ಯಾವುದನ್ನು ಹೊರಗೆ ಕಾಣಬಾರದೆಂದು ಬಹಳ ಕಷ್ಟಪಟ್ಟು ಒಳಗಿಂದೊಳಗೇ ಬಚ್ಚಿಡಲು ಪ್ರಯತ್ನಿಸುತ್ತಿದ್ದೀರೋ, ಅದೇ ಹೀಗೆ ಹೊರಕ್ಕೆ ಬಂದು ಬಿಡುವದುಂಟು!" ಎಲ್ಲರಿಗೂ ಬಾಯಿಕಟ್ಟಿದಂತಾಯಿತು. ಇದಕ್ಕೇನೆಂದು ಉತ್ತರ ಕೊಡುವದು? ಕೊನೆಗೆ ಒಬ್ಬಳೆಂದಳು:

"ಹಾಗಾದರೆ ವಿಧವೆಯರ ಮನಸ್ಸಿನಲ್ಲಿಯೂ ಬರುತ್ತಿರಬಹುದಲ್ಲ ಇಂತಹ ವಿಚಾರ?"

ಗಂಗಾ ತಾಯಿಯವರಿಗೆ ಅವಮಾನವಾದಂತೆನಿಸಿತು. ಕೂಡಲೆ ಅವರು ನುಡಿದರು:

"ಎಂದಿಗೂ ಇಲ್ಲ. ಅವರ ಹಣೆಯಬರಹ ಕಟ್ಟಿಟ್ಟದ್ದೇ ಇರುತ್ತದೆ."

"ಯಾಕೆ, ಈಗ ಉಂಟಲ್ಲ ಪುನರ್ವಿವಾಹದ ಮುಕ್ತದ್ವಾರ?"

"ಅದು ಬೇರೆ. ಅವೆಂದರೆ ತೀರ ಕೊನೆಯ ಮಾರ್ಗ."

"ಹಾಗಾದರೆ ನಾವೂ ಕೂಡ ನಮ್ಮ ವಿಷಯವಾಗಿ ಅದೇ ಮಾತನ್ನೇ ಹೇಳಬಯಸುತ್ತೇವೆ."

"ಆದರೆ ಸಾಮಾನ್ಯವಾಗಿ ವಿಧವೆಯರ ಮನಸ್ಸಿನಲ್ಲಿ ಇಂಥ ವಿಚಾರ ಗಳೇ ಏಳಲಾರವು." ವಿಧವೆಯರ ಪಕ್ಷ ಸಂರಕ್ಷಣೆ ಮಾಡುತ್ತ ಗಂಗಾತಾಯಿ ಯವರೆಂದರು.

"ಯಾಕೆ, ಅಚಲಾತಾಯಿಾ, ಈಗ ಇವರ ಮಾತಿಗೇನು ಹೇಳುವಿರಿ ನೀವು? ಇವರದು ಆತ್ಮ-ಪರ-ವಂಚನೆಯೆಂದೆನ್ನಿಸುವದಿಲ್ಲವೇನು ನಿಮಗೆ?"

ಅಷ್ಟರಲ್ಲಿ ಗಂಟೆಯಾಯಿತು. ಎಲ್ಲರೂ ತಮ್ಮ ತಮ್ಮ ವರ್ಗಗಳಿಗೆ ಹೋಗುವದಕ್ಕೆಂದು ಎದ್ದರು. ಹೋಗುತ್ತಿರುವಾಗಲೆ ಅಚಲೆಯೆಂದಳು: "ಅಲ್ಲವೆಂದಾರು ಹೇಳುವರು? ಎಲ್ಲ ಹೀಗೇ ಮೋಸದ ಕಂತೆ ಆಯಿತು." ಗಂಟೆಯಾದ್ದರಿಂದ ಅವರೆಲ್ಲ ಬೇರೆ ಬೇರೆ ವರ್ಗಗಳ ಕಡೆಗೆ ನಡೆದರು. ಅವಳು ತನ್ನಲ್ಲಿಯೇ ಎಂದುಕೊಂಡಳು. 'ಎಲ್ಲವೂ ಮೋಸದ ಜೀವನವಲ್ಲದೆ ಬೇರೆಯಲ್ಲ. ಸಾಮಾಜಿಕ ಸಂಕೇತಗಳಿಗೆ ಒಳಗಾಗಿ ನಡೆಯುವವರೆಲ್ಲರೂ ಒಂದಿಲ್ಲೊಂದು ರೀತಿಯಿಂದ ವಂಚಕರೇ ಸರಿ. ನಾನಾದರೂ ಕೂಡ ಈ ತರದ ವಂಚನೆಯಿಂದ ಅದೆಲ್ಲಿ ದೂರವಾಗಿದ್ದೇನೆ?'

ನಡುವಿನ ಬಿಡುವಿನಲ್ಲಿಯ ನಗೆ ಮಾತುಗಳೆಲ್ಲ ಗಾಳಿಯಲ್ಲಿ ತೇಲಿ ಹೋದವು. ವರ್ಗಗಳೆಲ್ಲ ಪ್ರಾರಂಭವಾದವು. ಒಂದೆರಡು ತಾಸುಗಳಾದವು, ಶಾಲೆ ಬಿಟ್ಟಿತು. ದಿನದಂತೆ ರಾಧಿಕೆ ಅಚಲೆಯರಿಬ್ಬರೂ ಕೂಡಿ ಮನೆಯ ಕಡೆಗೆ ನಡೆದರು.

"ಈ ದಿನ ನಡುವಿನ ರಜೆಯಲ್ಲಿ ಏನದೆಲ್ಲ ವ್ಯರ್ಥವಾಗಿ ಹರಟೆ ಹೊಡೆದೆವಲ್ಲವೆ?"

"ವ್ಯರ್ಥವಾಗಿಯಲ್ಲ, ರಾಧಿಕೆ. ನನಗೆನಿಸುತ್ತದೆ, ಇಂತಹ ಚರ್ಚೆಗಳೇ ನಮ್ಮನ್ನು ವಿಚಾರ ಮಾಡಹಚ್ಚುತ್ತವೆಂದು."

"ಅದೇನೋ ನಿಜ. ಆದರೆ ಒಮ್ಮೊಮ್ಮೆ ಹುರುಳಿಲ್ಲದ ಹುಚ್ಚುಚ್ಚು ಮಾತಿನಿಂದ ಕೂಡ ಸಲ್ಲದ ಘಟನೆಗಳು ಸಂಭವಿಸುವವಲ್ಲ?"

"ಯಾಕೆ, ಈ ದಿನವೇನಾದರೂ ಆಯಿತೋ ಹೇಗೆ?"

"ಛೆ, ಹಾಗೇನಿಲ್ಲ ನಮ್ಮ ಉದ್ದೇಶವಿರುವದೊಂದು. ಆದರೆ, ಜನರು ಅದಕ್ಕೆ ಒಮ್ಮೊಮ್ಮೆ ವಿಚಿತ್ರವಾದ ಅರ್ಥವನ್ನೇ ಕಲ್ಪಿಸುವದುಂಟು."

"ಏನು? ಆದದ್ದಾರೂ ಏನು?"

"ಅಂಥದೇನಿಲ್ಲ ಬಿಡು  ಆದರೆ ನಿನಗೆ ಆ ಚಂಪಾ ಗೊತ್ತುಂಟಲ್ಲ—ಅವಳೆಂತಹಳೆಂಬುದು? ನೀನು ಸ್ವಲ್ಪ ಅತ್ತ ಮುಖ ತಿರುಗಿಸುವದರಲ್ಲಿಯೇ ಅವಳೆಂದಳು—'ನಿಜವಾಗಿಯೆಂದರೆ ವಿಧವೆಯರು ಮತ್ತು ಕುಮಾರಿಕೆಯರಿಗಿಂತ ಈ ಗಂಡ ಬಿಟ್ಟವರೇ ಬಹಳ ಕುಕ್ಸಿತರಾಗಿರುವದುಂಟು. ಅವರಿಗೆಂದರೆ ಯಾರಾದರೊಬ್ಬರ ಮದುವೆ ಜೋಡಿಸುತ್ತಿರದಿದ್ದರೆ ಮನಸ್ಸಿಗೆ ಸಮಾಧಾನವೇ ಇರುವದಿಲ್ಲ. ಮತ್ತೆ ಜಗತ್ತಿನ ಕಡೆಗೆ ನೋಡುವ ಅವರ ದೃಷ್ಟಿಯೂ ಇಂಥದೇ—ತೀರ ಹೊಲಸು."

"ಯಾಕೆ, ನಾನೇನು ಯಾರ ಮೇಲಾದರೂ ಅಂಥ ಆರೋಪ ಹೊರಿಸಿದೆನೇನು?"

"ಅದೇ ಹೇಳುವೆನಲ್ಲ ಮತ್ತೆ—ಈ ದಿನ ಎಲ್ಲ ಮಾತೂ ತನ್ನನ್ನೇ ಕುರಿತು ನಡೆದಿತ್ತೆಂದು ಅವಳಿಗನಿಸುತ್ತದೆ."

"ಅದೇಕೆ ಹಾಗೆ?"

"ಅಲ್ಲ, ನಿನಗೆ ಗೊತ್ತೇ ಇಲ್ಲವೇನು—ಇಬ್ಬರು ಮೂವರ ಸಂಗಡ ಅವಳ ಮದುವೆ ಮುರಿದು ಹೋಯಿತೆಂಬುದು?"

"ಹೀಗೋ, ನನಗೆ ಗೊತ್ತೇ ಇರಲಿಲ್ಲ ಬಿಡು."

"ಹುಂ, ಮತ್ತೆ ಇನ್ನೇನಾದರೂ ಮಾತಾಡಲೇ ಬೇಕಾಯಿತಲ್ಲ? ಅಂತೇ ಅವಳು ಎಲ್ಲಾ ಸೇಡನ್ನು ನಿನ್ನ ಮೇಲೇ ತೀರಿಸಿಕೊಂಡಳು"

"ಅದೇನೆ ಇರಲಿ, ನಾನು ಮಾತ್ರ ಯಾವ ದಾರಿಗೂ ಹೋಗುವದಿಲ್ಲ."

"ಆದರೆ ನೀನು ಎಲ್ಲರಿಗೂ ಪ್ರಿಯಳೆನಿಸುವಂತೆ ನಡೆದುಕೊಳ್ಳುತ್ತೀಯಲ್ಲ. ಅದನ್ನು ಕಂಡೇ ಅವಳಿಗೆ ಹೊಟ್ಟೆಕಿಚ್ಚಾಗುತ್ತದೆ. ಅನಂತರ ನಿನ್ನ ನಡತೆಗೆಲ್ಲ ಹೀಗೆ ವಿಪರೀತ ಬಣ್ಣ ಬಳೆಯುವದು ಅವಳ ಕಣ್ಣಲ್ಲಿ."

"ಅವಳಿಗೆ ಹಾಗೆನಿಸಿದರೆ ಅದಕ್ಕೆ ನಾನಾದರೂ ಏನು ಮಾಡಲಿ, ನನ್ನ ತಾಯೀ?"

"ಆದರೆ ಆಕೆ ಎಲ್ಲ ಅಳತೆ ಬಿಟ್ಟೇ ಮಾತನಾಡುತ್ತಾಳೆ. ಅಮ್ಮಮ್ಮಾ, ಅವಳಿಷ್ಟು ಹೊಲಸು ಮಾತನಾಡಬಲ್ಲಳೆಂಬ ಕಲ್ಪನೆ ನನಗಿಂದೇ ಆಯಿತು."

"ಮತ್ತೆ ಏನೆನ್ನುತ್ತಿದ್ದಳು ಹಾಗಾದರೆ?"

" ಹೋಗಲಿ ಬಿಡು. ಅದೆಲ್ಲಾ ಹೊಲಸು ಯಾತಕ್ಕೆ ಸುಮ್ಮನೆ ? "

" ಇಲ್ಲಿ ನೋಡು ರಾಧಿಕೆ, ಈ ರೀತಿ ಅರ್ಧಕ್ಕೆ ಚೂರಿ ನೆಟ್ಟು ನೋಡುತ್ತಿರುವದೇನೂ ಒಳ್ಳೆಯದಲ್ಲ."

" ಅಲ್ಲ, ಹೀಗೇಕೆ ಮಾತಾಡುತ್ತೀಯೆ, ಅಚಲಾ ತಾಯಿ ? ನಿನಗೆ ವ್ಯರ್ಥವಾಗಿ ಮನಸ್ಸಿಗೆ ಕೆಡಕೆನಿಸೀತೆಂದು ಸುಮ್ಮನಿದ್ದೆ."

" ಹಾಗಾದರೆ ಹೀಗೆ ಅರ್ಧವನ್ನಷ್ಟೇ ಯಾತಕ್ಕೆ ಹೇಳಿದೆ ನನ್ನನ್ನು ಕೆಣಕುವದಕ್ಕೆ ? ಎಲ್ಲ ಬಿಡಿಸಿ ಹೇಳಿಬಿಡು."

" ಅವಳೆನ್ನುತ್ತಿದ್ದಳು, ಅಚಲೆಯನ್ನು ಅವಳ ಗಂಡನೇನು ಸುಮ್ಮನೆ ಬಿಟ್ಟುಬಿಡಲಿಲ್ಲ. ಅವಳ ನಡತೆ ಅಂತಹದು; ಮತ್ತೆ....ಮತ್ತೆ ನಿನ್ನ ಮತ್ತು ಆ ವಿರಾಗ ಇದ್ದಾರಲ್ಲ—ಅವರ ವಿಷಯಕ್ಕೆ ಏನೋ ಕತೆ ಹೆಣೆದು ಹೇಳುತ್ತಿದ್ದಳು."

ಅಚಲೆಯ ಮೈ ಒಮ್ಮೆಲೆ ನಡುಗಿತು. ' ಹೂಂ, ಅಂತೂ ಸುರುವಾಯಿತು.' ಆದರೆ ಅವಳು ಹೊರಗೆ ನೋಡುವದಕ್ಕೆ ಶಾಂತಳಾಗಿಯೇ ಉತ್ತರವಿತ್ತಳು. " ನಡೆಯುತಕ್ಕದ್ದೇ ಜಗತ್ತಿಂದಮೇಲೆ...." ಮಾತನಾಡುತ್ತಿರುವಾಗಲೆ ರಾಧಿಕೆಯ ಮನೆ ಬಂದಿತು. ಒಳಗೆ ಬರಲು ಅವಳು ಅಚಲೆಗೆ ಆಗ್ರಹಪಡಿಸಿದಳು. ಆದರೆ ಅಚಲೆ ಬಾರದೆ ಮುಂದೆ ನಡೆದಳು. ಇಂದು ಅವಳ ಮನದಲ್ಲಿ ನಟ್ಟಿದ್ದ ಶಲ್ಯ ಅವಳಿಗೆ ಅಸಹ್ಯ ವೇದನೆಯನ್ನುಂಟುಮಾಡಿದ್ದಿತು.

ಅಚಲೆ ಮನೆಗೆ ಬಂದಳು. ಸಕಾರಣವಾಗಿ ಆದ ನಿಂದೆಯಿಂದಲೂ ಮನುಷ್ಯನಿಗೆ ಸಂತಾಪವಾಗುವದುಂಟು. ಆದರೆ ನಿಷ್ಕಾರಣವಾಗಿ ಆದ ನಿಂದೆಯಿಂದಂತೂ ಕೇಳುವದೇನು ? ಇಲ್ಲಿಯ ವರೆಗೆ ಈ ಸಹ ಶಿಕ್ಷಕಿಯರ ಸಂಗಡ ತಾನು ನಡೆದುಕೊಂಡ ರೀತಿಯನ್ನು ಅವಳು ನೆನಸಿಕೊಂಡಳು. ಸೌಜನ್ಯದಿಂದ ಯಾವಾಗಲೂ ಒಳ್ಳೆಯದೇ ಆಗುತ್ತದೆಂದಲ್ಲ. ಅವಳು ಸುತ್ತಲಿನ ಜಗತ್ತನ್ನು ಕಂಡವಳಾಗಿದ್ದಳು. ಆ ಪ್ರೌಢ ಕುಮಾರಿಕೆಯರ ಕಡೆಗೆ ನೋಡಿ ಅವಳು ತನ್ನೊಳಗೇ ಎಂದುಕೊಂಡಿದ್ದಳು, ' ನಾನೇ ನಿಜವಾಗಿ ಎಲ್ಲರಿಗಿಂತ ಹೆಚ್ಚಾಗಿ ಸಂಸಾರಿಕ ಜೀವನಕ್ಕೆ ಹಾತೊರೆಯುತ್ತಿರುವೆನೋ

ಏನೋ? ನನ್ನಲ್ಲಿಯೇ ಏನಾದರೂ ಮಾನಸಿಕ ದೌರ್ಬಲ್ಯವಿರಬೇಕು. ಈ ಹುಡುಗಿಯರಿಗೆ ಆ ಸುಖ ಸಹಜಸಾಧ್ಯವಾಗಿದೆ. ಆದರೆ ಅದನ್ನವರು ಸ್ವೀಕರಿಸುವದಿಲ್ಲ. ಅದರ ವಿಷಯವಾಗಿ ಅವರೂ ಉದಾಸೀನರಾಗಿದ್ದಾರೆ. ಅದರಿಂದ ಅವರು ದೂರ ಓಡುತ್ತಿದ್ದಾರೆ. ಆದರೆ ನಾನು? ನಾನೇ ಕೀಳು ಅಭಿರುಚಿಯುಳ್ಳವಳಾಗಿರಬಾರದೇಕೆ?' ಅವಳು ಆಶ್ಚರ್ಯದಿಂದ ಆ ಕುಮಾರಿಕೆಯರನ್ನು ನಿರೀಕ್ಷಿಸುತ್ತಿದ್ದಳು. ಅವರನ್ನು ನೋಡಿಯಾದರೂ ತನ್ನ ಅಸ್ಥಿರತೆಗೆ ಚಂಚಲತೆಗೆ ಒಂದು ಕಟ್ಟುನಿಟ್ಟಾಗಬಹುದೆಂದು ಅವಳು ಹಾರೈಸಿದಳು. ಆದರೆ ಅವರನ್ನು ಸೂಕ್ಷ್ಮವಾಗಿ ನಿರೀಕ್ಷಿಸಿದಂತೆಲ್ಲ ಅವಳಿಗೆ ನಿರಾಶೆಯಾಗುತ್ತ ನಡೆಯಿತು. ಅವರು ನಿಜವಾಗಿಯೂ ಲಗ್ನಕ್ಕೆ ಹೆದರುತ್ತಿದ್ದರು. ಅದರಿಂದ ತಮ್ಮ ಸ್ವಾತಂತ್ರ್ಯಕ್ಕೆ ಅಡ್ಡಿಯಾಗುವದೆಂದು ಅವರಿಗೆನ್ನಿಸುತ್ತಿತ್ತು. ಅವಿವಾಹಿತರಾಗಿದ್ದುಕೊಂಡೇ ಸಾಮಾಜಿಕ ನೀತಿಯ ಬಂಧನಗಳನ್ನು ಪಾಲಿಸಬಹುದೆಂದು ಅವರಿಗೆನ್ನಿಸುತ್ತಿತ್ತು; ಈ ಧ್ಯೇಯವನ್ನು ಸಾಧಿಸುವದಕ್ಕಾಗಿ ಅವರು ತಮ್ಮ ಮನಗಳನ್ನು ಕೊಂದುಕೊಳ್ಳುವ ಹವ್ಯಾಸ ನಡೆಸಿದ್ದರು. ಆದರೆ ಅವರ ಮನದ ಈ ಹೋರಾಟದಲ್ಲಿ ಅವರು ಭಯಭೀತರಾಗುತ್ತಿದ್ದುದನ್ನು ಅವಳು ಕಾಣುತ್ತಿದ್ದಳು. ಅನಿರ್ಬಂಧಿತ ಸ್ವತಂತ್ರ ವಿಚಾರಗಳಿಗೆ ಹೆದರಿಕೊಂಡು ಅವರು ತಮ್ಮ ಮನವನ್ನು ಕೊಳೆಯಗೊಟ್ಟಿದ್ದರು; ಇಂಥ ಬಲಹೀನವಾದ ತಮ್ಮ ಮನಸ್ಸನ್ನು ಹೇಗೋ ಗಟ್ಟಿಯಾಗಿರಿಸುತ್ತ, ಹೆದರುತ್ತ ಹೆದರುತ್ತ ಹೊರಗಿನ ಜಗತ್ತಿನೆಡೆಗೆ ದೃಷ್ಟಿಕ್ಷೇಪ ಮಾಡುತ್ತಿರುವಾಗ ತಮಗೆ ದೊರೆಯದೆ ಹೋದ ಸುಖವನ್ನು ಮತ್ತೊಬ್ಬರು ಅನುಭವಿಸುತ್ತಿರುವದನ್ನು ಅವರು ಕಾಣುತ್ತಿದ್ದರು. ಆಗ ಅವರಲ್ಲಿ ಸುಪ್ತವಾಗಿದ್ದ ಮತ್ಸರಬುದ್ಧಿ ಹೆಡೆಯಾಡಿಸಿ, ಅವರ ಸಹಾಯಕ್ಕೆ ಹೊರಬರುತ್ತಲಿದ್ದಿತು. ಅಂಥವರನ್ನು ಅನೀತಿವಂತರೆಂದು ಕರೆದು ಟೀಕಿಸಿ ಜರೆದು ಹಳಿದು ಅತೃಪ್ತ ಆಸೆಗಳಿಂದ ತುಂಬಿತುಳುಕುವ ತಮ್ಮ ಮನಗಳಿಗೆ ಅವರು ಹೇಗಾದರೂ ಸಮಾಧಾನ ತಂದುಕೊಳ್ಳುತ್ತಿದ್ದರು; ತೀರ ಸಾಮಾನ್ಯವಾದ ಮಾತುಗಳು ಕೂಡ ಅವಳಿಗೆ ಕೀಳ್ತನದ ಕುರುಹುಗಳಾಗಿ ತೋರುತ್ತಿದ್ದವು. 'ಮನದ ಈ ವಿಪರೀತಾವಸ್ಥೆ, ಈ ಹಳಸಿದ ವಾಸನೆಯೆಂದರೆ ನೀತಿಯೇ? ಇಂಥ ನೀತಿ ಮನುಷ್ಯತ್ವದ ಬೆಳವಣಿಗೆಗೆ ಸಹಾಯಕವಾದೀತೆ?' ಇಂಥ

ನೀತಿಯ ಮೇಲೆ ಅವಳ ವಿಶ್ವಾಸ ಕೂಡದಾಯಿತು! 'ಇವರ ನೀತಿ ಇಂತಹದು! ಮತ್ತೆ ನನ್ನಲ್ಲಿ ಯಾವ ಅನೀತಿಯನ್ನಿವರು ಕಂಡುಕೊಂಡರು?....'

ಸಂಜೆಯ ಮಂದ ಪ್ರಕಾಶವನ್ನು ಬೆನ್ನಟ್ಟಿ ಮೆಲ್ಲಗೆ ಕತ್ತಲೆ ಏರಿ ಬರುತ್ತಲಿತ್ತು. ಅಚಲೆಯ ಹೃದಯದಲ್ಲಿಯೂ ದುಃಖದ ವಿಚಾರಗಳು ಆನಂದದ ದೀಪ್ತಿಯನ್ನು ನಿಷ್ಪ್ರಭಗೊಳಿಸುತ್ತ ನಡೆದಿದ್ದವು. ಅವಳು ಒಮ್ಮೆಲೇ ಬೆಚ್ಚಿಬಿದ್ದು ನೋಡಿದಳು.

"ಯಾರು, ವಿರಾಗರೇನು? ಈಗ? ಹೀಗೆ ಬಂದಿರಿ?"

"To lighten the darkness." ನಗುನಗುತ್ತ ವಿರಾಗನೆಂದ.

"ಓಹೊ, ಹೀಗೊ?" ಅವಳು ಕಿಟಕಿ ಬಿಟ್ಟು ಸರಿದಳು. ಕತ್ತಲೆಯಲ್ಲಿ ಕಣ್ಣೊರೆಸಿಕೊಂಡು ದೀಪ ಹಚ್ಚುವದಕ್ಕೆಂದು ಕೋಣೆಯ ಆಚೆಬದಿಗೆ ನಡೆದಳು. ಒಬ್ಬಳೇ ಕತ್ತಲೆಯಲ್ಲಿ ಎಡವುತ್ತ ಮುಗ್ಗರಿಸುತ್ತಿರುವ ಅಚಲೆಯ ಕಡೆಗೆ ವಿರಾಗ ನೋಡುತ್ತಲಿದ್ದ. ಅವಳು ಅವಸರವಸರವಾಗಿ ಒರೆಸಿಕೊಂಡಿದ್ದ ಕಣ್ಣೀರು ಅವನ ತೀಕ್ಷ್ಣ ದೃಷ್ಟಿಯ ಅಳವಿನೊಳಗಿಂದ ತಪ್ಪಿಸಿಕೊಂಡಿರಲಿಲ್ಲ. ಅವಳ ಕಣ್ಣು ನೀರೂರಿದ್ದವೆಂಬುದಾದರೂ ಏಕೆ? ಆ ದೀಪವಿಲ್ಲದ ಕೋಣೆಯಲ್ಲಿ ಅಂತಹ ಮೂರುಸಂಜೆಯಲ್ಲಿ ಉದಾಸೀನತೆಯಿಂದ ನಿಶ್ಶಬ್ದಳಾಗಿ ಕೇವಲ ಉಸಿರಾಡುತ್ತ ಮಾತ್ರ ಕುಳಿತಿದ್ದ ಅಚಲೆಯ ಮನದ ಸ್ಥಿತಿ ತಿಳಿವಳಿಕೆಯುಳ್ಳ ಯಾರಿಗೂ ಸಹಜವಾಗಿ ಹೊಳೆಯುವಂತಹದಾಗಿತ್ತು. ವಿರಾಗ ಅಚಲೆಯನ್ನು ಪೂರ್ಣವಾಗಿ ಅರಿತವನಾಗಿದ್ದ. ಅವನು ಅವಳನ್ನು 'ಏನಾಯಿತು?' ಅಥವಾ 'ಏನಾಗಿದೆ?' ಎಂದು ಕೇಳಿದ್ದರೆ ಅವಳು ಇಲ್ಲದ ನಟನೆ ಮಾಡಿ, ಹುಸಿ ನಗೆ ನಕ್ಕು, ಏನೇನೋ ಮಾತನಾಡಿ, ಅವನನ್ನು ಆ ವಿಷಯ ಮುಂದೆ ಮಾತನಾಡದಂತೆ ಮಾಡದಿರುತ್ತಿರಲಿಲ್ಲ. 'ಅವಳು ತಾನಾಗಿಯೇ ಮಾತನಾಡಬೇಕು. ಅವಳಿಗೆ ತಿಳಿಯದಂತೆಯೇ ಅವಳನ್ನು ಮಾತನಾಡಹಚ್ಚಬೇಕು' ಎಂದು ಅವನು ಈ ದಿನ ನಿಶ್ಚಯಮಾಡಿಯೇ ಬಂದಂತಿತ್ತು.

"ಇದೇನು? Conquest of Happiness?" ಅಚಲೆ ಕುರ್ಚಿಯ ಮೇಲಿಟ್ಟಿದ್ದ ಪುಸ್ತಕವನ್ನು ಕೈಯಲ್ಲಿ ತೆಗೆದುಕೊಳ್ಳುತ್ತ ವಿರಾಗನೆಂದ.

" ಹುಂ."

" ಅಂತೂ ನೀವು ಅತ್ಯಂತ ಸುಖಿಗಳು."

" ಮತ್ತೆ ನಿಮಗೇನು ಕಡಿಮೆಯಾಗಿದೆ ? "

" ಅಲ್ಲವೆನ್ನುವವರಾರು ? ನನಗೆನ್ನಿಸುತ್ತದೆ, ನನ್ನಂತಹ ಸುಖಿಗಳೇ ಯಾರೂ ಇರಲಾರರೆಂದು."

" ಹೌದು, ನಿಮ್ಮನ್ನು ನೋಡಿದರೆ ನನಗೆ ಹೊಟ್ಟೆಕಿಚ್ಚಾಗುತ್ತದೆ."

" ನಿಮಗೆ? ಅದೇಕೆ ನಿಮಗೆ? ನೀವು ಈಗಾಗಲೇ ಸುಖದ ಮಾರ್ಗವನ್ನು ಕಂಡುಕೊಂಡಿರುವಿರಿ—Conquest of Happiness ! " ಎಂದು ವಿನೋದವಾಗಿ ಮಾತಾಡುತ್ತ ಅವನು ಅಚಲೆಯ ಮನಸ್ಸಿನ ಒಳಗಂಟು ಬಿಚ್ಚಲಾರಂಭಿಸಿದ.

" ಅಲ್ಲ, ಇಂಥ ಪುಸ್ತಕ ಓದಿ ಸುಖ ದೊರಕಿಸಲು ಸಾಧ್ಯವಿದ್ದಲ್ಲಿ ಮತ್ತೇನು ಬೇಕಾಗಿತ್ತು ? "

" ಆದರೆ ನೀವು ದುಃಖಿಗಳಾಗಿರುವದು ಯಾತಕ್ಕೆ ಎಂಬುದೇ ನನಗೆ ತಿಳಿಯದ ಮಾತಾಗಿದೆ." ಏನೂ ಅರಿಯದವನಂತೆ ಸೋಗು ಮಾಡುತ್ತ ವಿರಾಗ ಮಾತನಾಡಲಾರಂಭಿಸಿದ.

" ನೀವು ನನ್ನನ್ನು ಸುಖಿಯೆಂದು ತಿಳಿಯುತ್ತಿರುವದು ಯಾತಕ್ಕೆಂಬುದೇ ನನಗೆ ತಿಳಿಯದಾಗಿದೆ."

" ನಿಮಗೆ ದುಃಖಪಡುವ ಕಾರಣವಿಲ್ಲೆಂದು."

" ನೀವೇ ಆ ದಿವಸ ಅನ್ನಲಿಲ್ಲವೆ ? "

" ಏನನ್ನು ? "

" ಜೀವನದಲ್ಲಿ ಸತತವಾಗಿ ಚೈತನ್ಯವುಳಿಯಲಾರದೆನಿಸಿದರೆ ಅದು ಇಲ್ಲದಿದ್ದುದರ ದುಃಖವೆನಿಸುವ ಕಾರಣವೂ ಇಲ್ಲ. ನನಗಂತೂ ದುಃಖವೆನಿಸುವದಿಲ್ಲ....ಹೀಗೇ ಏನೇನೋ ಎಂದಿದ್ದಿರಲ್ಲವೇ ? "

" ಹೌದು. ಅದೂ ನಿಜವಾದುದೇ."

" ಆಯಿತು ಹಾಗಾದರೆ. ನಿಮಗೆ ಸಂಸಾರವಿಲ್ಲವೆಂದು ಆಗುವ ದುಃಖವೂ ಇಲ್ಲವೆಂದು ನೀವೇ ಒಮ್ಮೊಮ್ಮೆ ಎನ್ನುತ್ತೀರಿ. ಸ್ವಾವಲಂಬಿಗಳಾಗಿ, ಯಾವ ತೊಂದರೆಯೂ ಇಲ್ಲದೆ ಸ್ವತಂತ್ರವಾಗಿ ಬಾಳುವದರಲ್ಲಿ ನಿಮಗೆ

ಸುಖವೆನಿಸುತ್ತದೆ; ಆ ಸುಖವನ್ನು ನೀವು ಸೂರೆಗೊಳ್ಳುತ್ತಿದ್ದೀರಿ ಅಲ್ಲವೆ?"

"ವಿರಾಗ, ನಿಮಗದು ತಿಳಿಯಲಾರದು." ಇಂದು ಅವಳ ಮನದ ಸಂಯಮ ಇಲ್ಲದಾಗಿತ್ತು. ಅವಳ ಇಚ್ಛೆಯಿಲ್ಲದೆಯೆ ಅವಳ ಕಣ್ಣುಗಳು ಮತ್ತೆ ತುಂಬಿ ಬಂದವು. ವಿರಾಗ ಗಂಭೀರನಾಗಿ ನುಡಿದ:

"ಅಚಲಾಬಾಯಿ, ನಿಮ್ಮ ಮನಸ್ಸಿಗೆ ತೊಂದರೆ ಕೊಡಬೇಕೆಂದೇನೂ ನನ್ನ ಉದ್ದೇಶವಿರಲಿಲ್ಲ." ಕೆಲಹೊತ್ತು ಇಬ್ಬರೂ ನೀರವವಾಗಿದ್ದರು. ಅನಂತರ ಅಚಲೆಯೆಂದಳು: "ನಿಮಗಷ್ಟೇ ಏಕೆ, ಯಾರಿಗೂ ತಿಳಿಯುವಂತಿಲ್ಲ. ಯಾರೂ ತಿಳಿದುಕೊಳ್ಳುವಂತಿಲ್ಲ." ಅಚಲೆಯ ದುಃಖಾವೇಗ ಮಾತಿನ ಸ್ವರೂಪ ಪಡೆದು ಇಂದು ಹೊರಬೀಳುತ್ತದೆಂಬುದು ಅವನಿಗೆ ನಿಶ್ಚಿತವಾಯಿತು. ಅವನು ಏನನ್ನೂ ಮಾತನಾಡದೆ ಅವಳ ಕಡೆಗೆ ನೋಡುತ್ತಲಿದ್ದ. ಮಧ್ಯೆ ಮಧ್ಯೆ ಕಣ್ಣೊರೆಸಿಕೊಳ್ಳುತ್ತ ಅವಳು ಮಾತನಾಡಲಾರಂಭಿಸಿದಳು:

"ವಿರಾಗ, ಕಂಡಕಂಡವರಲ್ಲಿ 'ನಾನು ಕಡುದುಃಖಿ, ಹತಭಾಗ್ಯೆ' ಎಂದು ನನ್ನ ಕರುಣ ಕತೆಯನ್ನು ಹೇಳುತ್ತ ನಡೆಯುವದರಿಂದ ನನಗಾವ ಸಮಾಧಾನವುಂಟಾಗಬಹುದು, ಹೇಳಿರಿ? ಸಂಧಿ ದೊರೆತಾಗಲೆಲ್ಲ, ಭೆಟ್ಟಿಯಾದವರೊಡನೆಲ್ಲ ದುಃಖಿ ಜೀವಿಯೊಬ್ಬನು ತನ್ನ ದೈನ್ಯಪೂರ್ಣವಾದ ಅಳಲನ್ನೆಲ್ಲ ಬಿತ್ತರಿಸಿ ಅವರ ಮರುಕದ ಯಾಚನೆ ಮಾಡುತ್ತ ನಡೆದುದಾದರೆ, ಅವನ ವಿಷಯವಾಗಿ ಸಹಾನುಭೂತಿಯುಂಟಾಗುವದಂತೂ ಒತ್ತಟ್ಟಿಗಿರಲಿ, ಒಂದು ತರದ ತಿರಸ್ಕಾರವೇ ಆ ವ್ಯಕ್ತಿಯ ಬಗ್ಗೆ ಉಂಟಾಗುವದು. ಅಂಥವನು ಜನರ ಮನರಂಜನೆಯ ಸಾಧನವೇ ಆದಾನು. ಬೀದಿಯಲ್ಲೆಲ್ಲ ಅಡ್ಡಾಡುವ ಭಿಕ್ಷುಕರೆಷ್ಟು ಮಂದಿಯಿಲ್ಲ? ಅವರ ಆ ಕರುಳು ಕೊರೆಯುವ ಹೀನ ದರಿದ್ರದೆಸೆಯನ್ನು ನೋಡಿಯೂ ಜನರು ಹಾಗೆಯೇ ಮುಂಬರಿದು ಹೋಗುವದಿಲ್ಲವೇ? ಅವರಾದರೂ ಕೂಡ ಅದೆಷ್ಟು ಕರುಣಾವ್ಯಂಜಕವಾಗಿ ಒದರುತ್ತ, ಕಂಡವರ ಹತ್ತಿರವೆಲ್ಲ ಕರುಣೆಯ ಯಾಚನೆ ಮಾಡುವದಿಲ್ಲ? ಆದರೆ ಅವರ ಆ ದೀನ ಸ್ವರಗಳಿಗೆ ಮರುಕಗೊಂಡು ಓ ಕೊಡುವವರೆಷ್ಟು ಜನ? ಹೃದಯ ತುಂಬಿಬರುವ ಸಹಾನುಭೂತಿ—ಅದೆಂದೂ ಬಿಕ್ಕೆ ಬೇಡಿ ದೊರಕಿಸಲು ಬಾರದು. ನಿಮ್ಮ ಅನಂತ ದುಃಖಗಳನ್ನು ಒಳಗಿಟ್ಟುಕೊಂಡೇ

ಜೀವನದ ಹೊಡೆದಾಟದಲ್ಲಿ ಭಾಗಿಗಳಾಗುವದಾರಲ್ಲಿಯೋ, ನಿಮ್ಮ ವಿಷಯ ವಾಗಿ ಹೆರವರಲ್ಲಿ ಪ್ರೇಮ, ಆದರ ಮತ್ತು ಸಹಾನುಭೂತಿಗಳು ಉಳಿಯುವವು. ಆದರೆ ಅದೇ ನೀವು ಅಸಹಾಯರೆಂದಾಗಲಿ—ಹಾಗೆ ನೀವು ಬೇರೆಯವರಲ್ಲಿ ಆಡಿ ತೋರಿಸಿರಿ—ಹೆರವರ ಸಹಾನುಭೂತಿಯ ಗುಟುಕು ನೀರು ಕುಡಿದೇ ನೀವು ಜೀವಧಾರಣೆ ಮಾಡಬಯಸುವಿರೆಂಬುದು ಅವರಿಗೆ ಗೊತ್ತಾಗಲಿ —ಆಗ ನೋಡುವಾ. ಆಗ ನಿಮ್ಮ ಜಗತ್ತೇ ನಿಮ್ಮನ್ನು ತೊರೆಯುವುದು. ನಿಮ್ಮನ್ನು ನಿಃಸಹಾಯನನ್ನಾಗಿ ಮಾಡುವದು." ಅವಳ ಮಾತಿನ ಓಘ ವನ್ನು ತಡೆದು ಹಿಡಿಯಬೇಕೆಂದು ವಿರಾಗನಿಗೆನ್ನಿಸಲಿಲ್ಲ. ಆದರೆ ತನ್ನ ಸಹಾನುಭೂತಿಯನ್ನು ವ್ಯಕ್ತಗೊಳಿಸುವ ಅವನ ರೀತಿಯೂ ಬೇರೆಯಾದು ದಾಗಿತ್ತು. ಮತ್ತು ಆ ಅವನ ರೀತಿಯೂ ಅಂಥದೇ ಪ್ರಗಲ್ಭ ಮನಕ್ಕೆ ನಿಲುಕುವಂತಹದಾಗಿತ್ತು. ಅವನೆಂದ: "ಒಳ್ಳೇದು, ಹಾಗಾದರೆ ನೀವು ನಿಮ್ಮ ಈ ಕೋಮಲವಾದ ಭಾವನೆಗಳ ಮೇಲೆ ಕಠೋರತೆಯ ಕವಚವನ್ನು ಧರಿಸಿ ವ್ಯವಹರಿಸುತ್ತಿರುವಿರೆಂದಾಯಿತು ?"

"ಅರ್ಥಾತ್, ಹಾಗೆಯೇ. ನಾನು ಈ ನನ್ನ ಅಸಹಾಯತೆಯನ್ನು ಯಾರಿಗೂ ತೋರಗೊಡುವವಳಲ್ಲ. ಆದರೆ ನೀವು—ನೀವು ಮಾತ್ರ...."

ಮುಂದಿನದನ್ನು ಅವಳಿಗೆ ಮಾತನಾಡುವದಾಗಲಿಲ್ಲ. ಅವಳು ಮಾತ ನಾಡಲಿಲ್ಲ, ಅವಳಿಗದನ್ನು ಮಾತನಾಡುವದು ಸಾಧ್ಯವಿರಲಿಲ್ಲ—ಅದು ಅವಳ ಸ್ವಭಾವವಾಗಿರಲಿಲ್ಲ. ಅವನಿಗೂ ಕೂಡ ಶಬ್ದರೂಪವಾಗಿ ಏನನ್ನೂ ಕೇಳು ವದು ಬೇಕಾಗಿರಲಿಲ್ಲ. ಆದರೆ ಅವನಿಗೆಲ್ಲ ವಿದಿತವಾಯಿತು. ವಿರಾಗ ಅವಳನ್ನು ಇತರ ಸ್ತ್ರೀಯರಿಗಿಂತಲೂ ಬೇರೆಯೆಂದು ಕಾಣುತ್ತಿದ್ದನೇ? 'ಪುರುಷರ ಸಹಾನುಭೂತಿಯನ್ನು ಎಂದೂ ಇಚ್ಛಿಸತಕ್ಕದ್ದಲ್ಲ' ಎಂಬ ತನ್ನ ಪ್ರತಿಜ್ಞೆಗೆ ಅವಳು ವಿರಾಗನನ್ನು ಹೊರಗೆ ಮಾಡಿದ್ದಳೇ? ಅಚಲೆಯ ಹೃದಯದಲ್ಲಿ ಅಡಗಿದ್ದ ನೈಜವಾದ ಭಾವನೆಗಳು ಕೇವಲ ಅವನ ಸಮ್ಮುಖದಲ್ಲಿ ಮಾತ್ರ ಅವಳ ಮುಖದಲ್ಲಿ ವ್ಯಕ್ತವಾಗಿದ್ದವೆಂಬ ಮಾತು ಅವನಿಗೆ ಸರಿಯಾಗಿ ತಿಳಿ ದಿತ್ತು. ಹೃದಯದ ಅಂತಸ್ಥ ಭಾವನೆಗಳನ್ನು ವ್ಯಕ್ತಿಯ ಮುಖದ ಮೇಲೆ ಮೂಡಿದಾಗ ನೋಡುವದರಲ್ಲಿ ಯಾವ ಮೋಹಿನಿಯಡಗಿದೆಯೋ ಅದು ಶಬ್ದರೂಪದಲ್ಲಿ ಅವುಗಳನ್ನು ವ್ಯಕ್ತಪಡಿಸುವದರಲ್ಲಿಲ್ಲ. 'ಪ್ರೇಮ, ಪ್ರೇಮ'

ವೆಂದೆನ್ನುವರಲ್ಲ—ಅದರ ಛಾಯೆಯಿದ್ದಿತೇ ಅವಳ ಮುಖದ ಮೇಲೆ? ಇಲ್ಲ, ಹಾಗಾದರೆ ಅಲ್ಲಿ ಏನಿತ್ತು? ಕೇವಲ ಸಾಮಾನ್ಯವಾದ ಸ್ನೇಹಭಾವನೆಯ ವಿರುದ್ಧವಾಗಿದ್ದ ಪ್ರತಿಕ್ರಿಯೆಯಾಗಿದ್ದಿತದು. ತನ್ನ ಒಂಟಿ ಜೀವನದ ಒಣ ಬಾಳಿನಲ್ಲಿ ಸಹಾನುಭೂತಿಯ ಸಾಂತ್ವನವನ್ನು ಪಡೆಯುವದಕ್ಕೆಂದು ಮೈಮರೆತು ಮುಂದೆ ಚಾಚಿದ ಕೈಯನ್ನು, ಅನಿರೀಕ್ಷಿತವಾಗಿ ಹೊಡೆತ ತಿಂದು ಎಚ್ಚತ್ತವರಂತೆ ಅವಳು ಹಿಂದೆಳೆದುಕೊಂಡಿದ್ದಳು. ಸಾಗಿಬಂದು ದಂಡೆಯನ್ನಪ್ಪುವ ತೆರೆ ಅಷ್ಟೇ ವೇಗದಿಂದ ಹಿಂದೆ ಹೋಗುವದುಂಟು.

ಅವಳಿಗೆ ಒಮ್ಮೆಲೆ ತನ್ನ ಮನದ ದೌರ್ಬಲ್ಯದ ಅರಿವಾಯಿತು. ಅವಳು ಕೂಡಲೆ ಎಂದಳು: "ಇಲ್ಲ, ನಿಮಗೂ ಕೂಡ ನಾನು ನನ್ನ ಮನದ ಅಸಹಾಯಸ್ಥಿತಿಯನ್ನು ತೋರಗೊಡಲಿಕ್ಕಿಲ್ಲ."

ಕಣ್ಣೀರಿನಿಂದ ಒದ್ದೆಯಾದ ಅವಳ ಮುಖದ ಕಡೆಗೆ ವಿರಾಗ ನೋಡುತ್ತಲಿದ್ದ. ಅವಳ ಮನದೊಳಗಿನ ದ್ವಂದ್ವಯುದ್ಧ ಅವನಿಗೆ ಸರಿಯಾಗಿ ಅರ್ಥವಾಯಿತು. ಚಳಿಗಾಲದಲ್ಲಿ ನೆರಳಿನಲ್ಲಿಯ ಥಂಡಿಯನ್ನು ತಡೆಯುವದಾಗುವದಿಲ್ಲ. ಹಾಗೆಯೆ ಬಿಸಲಿನಲ್ಲಿ ಬಹಳ ಹೊತ್ತು ಕೂಡ್ರುವದೂ ಆಗುವದಿಲ್ಲ. ಅಂತೆಯೆ ಅವಳ ಮನದ ಸ್ಥಿತಿಯಾಗಿದ್ದಿತು. ವಿರಾಗನನ್ನು ದೂರವಿಡಬೇಕೆಂದೂ ಅನಃಗೆನ್ನಿಸುತ್ತಿರಲಿಲ್ಲ; ಹಾಗೆಯೆ ಅವನನ್ನು ತನ್ನ ಸಮೀಪಕ್ಕೆ ಬರಗೊಡುವದಕ್ಕೂ ಅವಳಿಗೆ ಮನಸ್ಸಿರಲಿಲ್ಲ. ಭಾವನೆಗಳು ಅವಳನ್ನು ಹಿಂದಕ್ಕೆ ಜಗ್ಗುತ್ತಿತ್ತು. 'ನನ್ನ ಈ ನಡತೆ ಸರಿಯಾದುದೇನು? ವಿರಾಗನೊಡನೆ ಪರಿಚಯ ಮಾಡಿಕೊಳ್ಳುವದು, ಅದನ್ನು ಬೆಳೆಯಗೊಡುವದು........' ವಿರಾಗನಿಗೆ ಅವಳ ಈ ತ್ರಿಶಂಕುವಿನ ಸ್ಥಿತಿ ಸರಿಯಾಗಿ ತಿಳಿಯಿತು. ಉಯ್ಯಾಲೆಯ ಜೀಕುಜೀಕಿನ ವಿಲಾಸವದು. ಉಯ್ಯಾಲೆ ಯಾವಾಗಲೂ ಎಷ್ಟು ಜೋರಿನಿಂದ ಮುಂದಕ್ಕೆ ತೂಗುವದೋ ಅಷ್ಟೇ ಜೋರಿನಿಂದ ಹಿಂದಕ್ಕೆ ನೆಗೆಯುವದುಂಟು. ಅಚಲೆ ಒಂದೊಂದು ದಿನ ವಿರಾಗನ ಹತ್ತಿರ ತಲೆತುಂಬ ಮಾತನಾಡುವಳು. ಮತ್ತೊಮ್ಮೆ ಅಷ್ಟೇ ದೂರವಾಗಿ ಬಿಡುವಳು. ಆದರೆ ತೆರೆಗಳೆಷ್ಟೇ ಬಂದು ದಂಡೆಯನ್ನು ಮುಟ್ಟಿ ಮುಟ್ಟಿ ನಡೆದರೂ ದಂಡೆಯೇನೂ ತೆರೆಗಳೆಡೆಗೆ ನಡೆಯುವದಿಲ್ಲ.

ಅಚಲೆ ಕಣ್ಣೊರೆಸಿಕೊಳ್ಳುತ್ತಿದ್ದಾಗ ವಿರಾಗನಿಗೆ ಕೆಡಕೆನಿಸಲಿಲ್ಲವೆಂತಲ್ಲ, ಆದರೆ ಅದನ್ನು ತೋರಗೊಡುವದು ಅವನ ಸ್ವಭಾವವಾಗಿರಲಿಲ್ಲ. ಅವಳು ಎಂದಳು. "ಇಲ್ಲ, ನಾನು ನಿಮಗೂ ಕೂಡ ನನ್ನ ಮನದ ಅಶಕ್ತತೆಯನ್ನು ತೋರಗೊಡುವದಿಲ್ಲ." ಅವಳ ಕಡೆಗೆ ನಿಸ್ತಬ್ಧವಾಗಿ ನೋಡುತ್ತ ಅವನೆಂದ: "ಸ್ತ್ರೀಯೊಬ್ಬಳು ಕಣ್ಣೀರು ಸುರಿಸುತ್ತಿರುವ ದೃಶ್ಯ ಬಹಳ ದರ್ಶನೀಯ ವಾದುವೆಂದೇನೂ ನನಗೆನ್ನಿಸುವದಿಲ್ಲ." ಮತ್ತು ನಿಜವಾಗಿಯೂ ಅವನು ಪ್ರಶ್ನೆ ಕೇಳಿ, ಅವಳನ್ನು ಸಾಂತ್ವನಗೊಳಿಸಿ ಅವಳ ಮನಸ್ಸಿನ ಸ್ಥಿತಿಯನ್ನರಿತು ಕೊಳ್ಳುವ ಯಾವ ಪ್ರಯತ್ನವನ್ನೂ ಮಾಡಲಿಲ್ಲ. ಆದರೆ ಅವನ ಈ ನಿರ್ಲಿಪ್ತತೆಯೇ ಅವಳನ್ನು ಅವನೆಡೆಗೆ ಎಳೆಯುತ್ತಿದ್ದಿತು.

## ೧೪

ಸಿಂಧೂ ವೈನಿಯ[1] ಆಗ್ರಹದ ಆಮಂತ್ರಣದೊಡನೆ ಕೆಳಗೆ ಎರಡೆರಡು ಸಲ ಗೆರೆ ಕೊರೆದು ಅದರ ಮಹತ್ವವನ್ನು ಸ್ಪಷ್ಟಪಡಿಸಿದ್ದ ತನ್ನ ಆಮಂತ್ರಣ ವನ್ನೂ ಮಾಣಿಕ ಅಚಲೆಗೆ ಕಳಿಸಿದ್ದಳು. ಅಚಲೆಗೆ ಇನ್ನು ಅಕೋಲೆಗೆ ಹೋಗಬೇಕಿರುವದಾಗಲಿಲ್ಲ. ಬಾಬಾ ಮತ್ತು ಭಾವೂ ಸಾಹೇಬರ ಅತ್ಯ ಗತ್ಯದ ಪತ್ರಗಳೂ ಬಂದಿದ್ದವು. ಸರೋವರದ ದಂಡೆಯಿಂದ ಹಾರತೊಡ ಗಿದ ಪಕ್ಷಿಗಳ ನೆಳಲು ಕೆಲ ಹೊತ್ತು ಮಾತ್ರ ಆ ನೀರಿನ ಹಾಳೆಯಲ್ಲಿ ಪ್ರತಿ ಬಿಂಬಿತವಾಗಿ ಮುಂದೆ ಮಸಕಾಗಿ ಕಾಣದಾಗುವಂತೆ ಅಕೋಲೆಯಿಂದ ನಾಗಪುರಕ್ಕೆಂದು ಗಾಡಿ ಹತ್ತಿದಾಗ ಅವಳ ಮನಸ್ಸಿನಲ್ಲಿ ಉಂಟಾಗಿದ್ದ ವಿಕಲ್ಪಗಳು ಯಾವಾಗಲೋ ಮಾಯವಾಗಿದ್ದವು. ಮತ್ತೆ ಅವರೆಲ್ಲರ ನೆನಹುಗಳೂ ತಿರುಗಿ ಅವಳ ಹೃದಯದಲ್ಲಿ ಸ್ನೇಹಪೂರ್ಣವಾದ ಸಂವೇದನೆ ಗಳನ್ನುಂಟುಮಾಡಲಾರಂಭಿಸಿದ್ದವು. ಶಾಮು, ಕುಂದಾ—ಅವರ ಆಟಪಾಟ ಗಳು—ಬಾಬಾ, ಮಾಣಿಕ ಎಲ್ಲರೂ—ಎಲ್ಲವೂ ಅವಳ ಮನದೆದುರು ಸುಳಿಯಹತ್ತಿದರು. ಮತ್ತೆ ಅವರೆಲ್ಲರೊಡನೆ ಇದ್ದು ನಕ್ಕು ಕೆಲೆದು ಅವರ

---

1 'ವೈನಿ' ಎಂದರೆ ಮರಾಠಿ ಭಾಷೆಯಲ್ಲಿ 'ಅತ್ತಿಗೆ'. 'ತಾಯಿ' ಎಂಬ ಶಬ್ದದಂತೆ ಇದನ್ನೂ ಹೆಣ್ಣು ಮಕ್ಕಳ ವಿಷಯದಲ್ಲಿ ಉಪಯೋಗಿಸುವ ಪರಿಪಾಠ ಉಂಟು.

ಆತ್ಮೀಯತೆಯ ಸ್ನೇಹದ ಸವಿ ಸುಖವನ್ನನುಭವಿಸುವದಕ್ಕೆ ಅವಳ ಹೃದಯ ಉತ್ಕಂಠಿತವಾಯಿತು. ದೀಪಾವಳಿಯ ಬಿಡುವೆಲ್ಲ ಅದಕ್ಕೆ ವಿಲಾಸಲಾಗಿದ್ದಿತು. ಈ ಮಧ್ಯೆ ಉಗೆಬಂಡಿಯ ನಾಲ್ಕು ಗಂಟೆಗಳ ಪ್ರವಾಸ ಸಮಯದಲ್ಲಿ ಅವಳ ವಿಚಾರಚಕ್ರವನ್ನು ತಡೆದು ಹಿಡಿಯುವವರಾರೂ ಇರಲಿಲ್ಲ.

ಇದೇ ಈಗ ತಾನು ಹಿಂದೆ ಬಿಟ್ಟು ನಡೆದಿದ್ದ ನಾಗಪೂರಿನೊಳಗಿನ ಅವಳ ಪರಿಚಿತ ವ್ಯಕ್ತಿಗಳೆಲ್ಲ ಅವಳ ಮನದೆದುರು ಸುಳಿಯಲಾರಂಭಿಸಿದರು. ನಾಗಪೂರಿನಲ್ಲಿ ಕಾಲಿಟ್ಟಾಗಿನಿಂದ ಅಲ್ಲಿ ಅವಳದೊಂದು ಜಗತ್ತು ನಿರ್ಮಾಣವಾಗಿತ್ತು. ಅದರಲ್ಲಿ ಅವಳನ್ನು ಮನವಾರೆ ಪ್ರೀತಿಸುವ ವ್ಯಕ್ತಿಗಳೂ ಇದ್ದವು; ಅದರಂತೆ ಅವಳನ್ನು ಕಂಡರೆ ದ್ವೇಷಾಗ್ನಿಯಿಂದ ಹೊತ್ತಿ ಉರಿಯುವವರೂ ಇದ್ದರು. ಇಂಥವರಲ್ಲಿ ಚಂಪಾವತಿ ಅಗ್ರಗಣ್ಯಳು. ಅಚಲೆಯ ವಿಷಯದಲ್ಲಿ ಪ್ರತಿಯೊಂದು ಮಾತೂ ಅವಳಿಗೆ ವಿಕೃತವಾಗಿಯೇ ಕಾಣುತ್ತಿದ್ದಿತು. ಅವಳ ಸೌಜನ್ಯ—ಅದು ಅವಳ ಸೋಗಲಾಡಿತನ; ಅವಳ ಸಾತ್ವಿಕತೆ—ಅದು ಅವಳ ಹದಿನಾರಾಣೆಯ ಮೋಸ ಜೀವನ; ಅವಳ ಲೋಕಪ್ರಿಯತೆ—ಅದು ಅವಳ ಶೀಲಭ್ರಷ್ಟತೆಯ ಮೂಲಕವಾಗಿಯೇ ಎನ್ನುವುದಕ್ಕೂ ಅವಳು ಕಡಿಮೆ ಮಾಡುತ್ತಿರಲಿಲ್ಲ. ತಪ್ಪು ಕಲ್ಪನೆಯ ಮಾತೇ ಹಾಗಿದೆ. ಅದೊಮ್ಮೆ ನಂಬುವ ಮನಸ್ಸನ್ನು ಕೊರೆಯಹತ್ತಿತೆಂದರೆ ತೀರಿತು. ಅದನ್ನು ತೀರ ಪೊಳ್ಳು ಮಾಡದೆ ಬಿಡುವುದಿಲ್ಲ. ಆಗಿದ್ದ ತಪ್ಪು ಕಲ್ಪನೆಯನ್ನು ಮರೆಯುವದಕ್ಕೂ ಮನಸ್ಸು ಸ್ನೇಹಾದ್ರ್ರವಾದುದಿರಬೇಕಾಗುತ್ತದೆ. ಭಗ್ನಮಂದಿರವಾಗಿದ್ದ ಮನಸ್ಸೂ ಕೂಡ ಅಂತಹ ಸ್ನೇಹಮಯತೆಯಿಂದ ಒಂದು ಹೊಸ ಸೌಂದರ್ಯವನ್ನು ಪಡೆಯಬಲ್ಲದು. ಆತ್ಮಪ್ರತಿಷ್ಠೆ ಎಲ್ಲರಿಗೂ ಉಂಟು. ಆದರೆ ಕೀಳು ಮನದವರು ಇತರರ ವ್ಯಂಗ್ಯಗಳನ್ನು ಕಂಡು ಟೀಕಿಸಿ, ತಮ್ಮ ಆತ್ಮಪ್ರತಿಷ್ಠೆ ಬೆಳಸಿಕೊಳ್ಳುವದಕ್ಕೆ ನೋಡುತ್ತಾರೆ. ಆದರಿಂದ ಅವರ ದೊಡ್ಡಸ್ತಿಕೆಗೆ ಯಾವಾಗಲೂ ಕಳೆಕಟ್ಟುತ್ತದಂತಲ್ಲವಾದರೂ ಹೆರವರ ಹೆಸರಿಗೆ ಕಲಂಕ ಹಚ್ಚುವದರಲ್ಲಿ ಅವರು ಕೃತಕೃತ್ಯರಾಗುತ್ತಾರೆಂಬುದರಲ್ಲಿ ಸಂಶಯವಿಲ್ಲ.

ಚಂಪಾವತಿಯ ಗೆಳತಿಯರಲ್ಲಿ ಯಾರಿಗೂ ಅಚಲೆಯ ವಿಷಯವಾಗಿ ಪ್ರೇಮಾದರಗಳಿರಲಿಲ್ಲ. ಗಂಡ ಬಿಟ್ಟ ಹೆಣ್ಣು ತಾನು, ಇವಳು ಯಾವಾಗಲೂ

ಹೀಗೆ ನಗುನಗುತ್ತ ಇರುವಳೆಂದಮೇಲೆ ಇದರಲ್ಲೇನೋ ಇರಬೇಕು—ಎಂದು ಅವರಿಗೆನ್ನಿಸುತ್ತಿತ್ತು. ಆ ತಮ್ಮ ತರ್ಕ ಸರಣಿಯನ್ನನುಸರಿಸಿ ಅವರು ಅನುದಿನವೂ ಅವಳ ವಿಷಯವಾಗಿ ಹೊಸ ಹೊಸ ಸುದ್ದಿಗಳನ್ನು ಹುಡುಕಿ ಪಸರಿಸುವದಕ್ಕಾಗಿ ಯಾವಾಗಲೂ ಉತ್ಸುಕರಾಗಿರುತ್ತಿದ್ದರು.

ರಾಧಿಕೆ ಅಚಲೆಯ ಸಂಗಡ ಯಾವಾಗಲೂ ಹೆಣೆದುಕೊಂಡಿರುವುದನ್ನು ನೋಡಿದರೆ ಅವರಿಗೆ ಸಹನವಾಗುತ್ತಿರಲಿಲ್ಲ. ರಾಧಿಕೆಯ ಅಣ್ಣನ ಸಂಗಡ ಮಾತನಾಡುತ್ತಿರುವ ಅಚಲೆಯನ್ನು ಕಂಡು ಅವರು ಅನೇಕ ಸಲ ತಮ್ಮೊಳಗೇ ಅರ್ಥಪೂರ್ಣವಾಗಿ ಕಣ್ಸನ್ನೆ ಮಾಡಿ ಕಿಡಿಗೇಡಿತನದ ನಗೆ ನಕ್ಕಿದ್ದರು. ಅಚಲೆಗೆ ಕೇಳಿಸುವಂತೆ ಒಂದೆರಡು ಮಾತುಗಳನ್ನಾಡುವದಕ್ಕೂ ಅವರು ಕಡಿಮೆ ಮಾಡಿರಲಿಲ್ಲ. ಶಾಲೆಯಲ್ಲಿ ಅವಳ ವಿಷಯವಾಗಿದ್ದ ಮುಖ್ಯಾಧ್ಯಾಪಿಕೆಯರ ಪ್ರೀತ್ಯಾದರಗಳಿಗೂ ಅವರು ಇದೇ ತರದ ಅರ್ಥವನ್ನು ಕಲ್ಪಿಸಿದ್ದರು. ಅವರ ಲೆಕ್ಕದಂತೆ ಹೆಡ್‌ಮಿಸ್ಟ್ರೆಸ್ಸಿನ 'ಮುದಿ ಬ್ರಹ್ಮಚಾರಿ' ತಮ್ಮನಿಗೂ ಈ 'ಗತಿಗೆಟ್ಟ' ಅಚಲೆಗೂ ಮೇಳ ಕೂಡುತ್ತಿತ್ತು. ಬಣ್ಣ ಬಳಿದು ಸುಳ್ಳು ಸುದ್ದಿಗಳನ್ನು ಹಬ್ಬಿಸಿ ಮೋಜು ನೋಡುವವರ ಮಾತು ಹಾಗೆಯೇ. ಹುಡುಗಿಯರಲ್ಲಿಯೂ ಕೂಡ ಒಬ್ಬಳಿಗೆ ಒಂದು ಮಾತು ಹೇಳಿದರೆ ಅದು ಹಬ್ಬಿ ಶತಧ್ವನಿಯಾಗಿ ಕ್ಷಣಾರ್ಧದಲ್ಲಿ ಎಲ್ಲೆಡೆಗೆ ಪಸರಿಸುವದು. ಇತ್ತೀಚೆಗೆ ಇಂಥವೇ ಒಂದು ಸುದ್ದಿ ಹಬ್ಬತೊಡಗಿತ್ತು.

ಈ ಎಲ್ಲ ಸಂಗತಿಗಳೂ ಅಚಲೆಯ ಕಣ್ಣೆದುರು ಚಿತ್ರಪಟದಂತೆ ನಡೆದವು. ಆಗ ರಾಧಿಕೆಯಂತಹ ಸಸ್ನೇಹ ಹೃದಯದೊಬ್ಬ ಗೆಳತಿಯನ್ನು ನೆನೆದಂತೆ—ಅವಳಿಗೆ ಸಮಾಧಾನವೂ ಉಂಟಾಯಿತು. ನೆಲೆ ನಿಲ್ಲದೆ ಅಂಡಲೆಯುವ ಮನದ ಹಕ್ಕಿ ಎಲ್ಲೆಲ್ಲಿಯೋ ಸುತ್ತಾಡಿ ಬರಲಿ, ಕೊನೆಗೊಮ್ಮೆ ವಿಶ್ರಾಂತಿ ಸ್ಥಾನದಲ್ಲಿ ತಿರುಗಿ ಬಂದು ನೆಲಸಿದಾಗಲೇ ಅದಕ್ಕೆ ಶಾಂತಿ ದೊರೆಯುವದು. ಅಚಲೆಯ ಕಣ್ಣಮುಂದೆ ಅನೇಕ ವ್ಯಕ್ತಿಗಳು ಸರಸರನೆ ಹಾಯ್ದುಹೋದವು. ಆದರೆ, ಕೊನೆಗೆ ಅವಳೆಲ್ಲ ವಿಚಾರಪ್ರವಾಹಗಳೂ, ಹೃದಯದೆಲ್ಲ ಹೊಡೆತಗಳೂ ಕೇಂದ್ರೀಕೃತವಾದುದು ಒಂದೇ ಒಂದು ವ್ಯಕ್ತಿಯ ತಡೆಯಿಲ್ಲದ ನೆನಹಿನ ಹಂದರದ ಸುತ್ತಲೂ—ವಿರಾಗ!

ಅವಳು ಆತ್ಮವಂಚನೆಯ—ತನ್ನೊಡನೆಯೇ ತಾನಾಡುವ ಚದುರಂಗ

ದಾಟದನ್ನು ನಿಲ್ಲಿಸಿದಳು. ತನ್ನದೇ ಮನದ ವಿಚಾರಗಳನ್ನು ತನ್ನದಲ್ಲ ವೇನೋ ಎಂಬುವಂತೆ ಅನುಸರಿಸಿ ಅವುಗಳನ್ನು ಸುಳ್ಳು ತರ್ಕದ ತಿರುಗಣೆಗೆ ಸಿಲುಕಿಸಿ ಅವುಗಳ ಮೇಲೆ ಜಯ ದೊರಕಿಸಿ ಸಮಾಧಾನ ಪಡೆವ ಜೊಳ್ಳು ಸಾಹಸವನ್ನು ಈ ಸಲ ಅವಳು ಹಿಂದು ಮುಂದೆ ನೋಡದೆ ಸತ್ಯವನ್ನು ಸರಿಯಾಗಿ ಎದುರಿಸಿದಳು. ವಿರಾಗನ ಸಾನ್ನಿಧ್ಯಕ್ಕಾಗಿ ತಳಮಳಿಸುವ ತನ್ನ ಮನಸ್ಸಿನ ಅಂತರಿಕ ಕಾಮನೆಯನ್ನವಳು ಒಪ್ಪಿಕೊಂಡಳು. ಮತ್ತು ಆ ಸಾನ್ನಿಧ್ಯದ ಸ್ವರೂಪ ಎಂತಹದಿರಬೇಕೆಂಬುದನ್ನೂ ಅವಳು ಸರಿಯಾಗಿ ಕಂಡುಕೊಂಡಳು. ಪರಸ್ಪರರಲ್ಲಿದ್ದ ಸಮ ವಿಚಾರಗಳಿಂದ ಪ್ರಚೋದಿತ ವಾದ ಅತ್ಯಂತಿಕ ಸಹಾನುಭೂತಿಯಾಗಿತ್ತದು. ಮೊಟ್ಟ ಮೊದಲು ವಿರಾಗ ನನ್ನು ವಿರೋಧಿಸಿ ಅವಳಲ್ಲಿ ಎದ್ದ ವಿಚಾರಗಳಲ್ಲಿಯೂ ಕೂಡ ಅವನ ವಿಷಯವಾದ ಕುತೂಹಲದ ಭಾಗವೇ ವಿಶೇಷವಾಗಿತ್ತು. ಕೇವಲ ಆ ಕುತೂ ಹಲದ ಮೂರ್ತಿಯಿಂದೇ ಅವಳು ಅವನನ್ನು ನಿರೀಕ್ಷಿಸಲಾರಂಭಿಸಿದ್ದಳು. ಮುಂದೆ ಆ ಸೂಕ್ಷ್ಮ ಪರೀಕ್ಷಣದಲ್ಲಿಯೇ ಅವನ ಕಠೋರವಾಗಿ ತೋರುವ ಬಾಹ್ಯರೂಪದಿಂದ ಮುಚ್ಚಲ್ಪಟ್ಟ ಸದಯ ಸಹೃದಯತೆಯೂ ಸಹಾನು ಭೂತಿಯೂ ಅವಳಿಗೆ ಕಾಣಿಸಿದವು.........ವಿರಾಗನಲ್ಲಿಯ ಆ ಜ್ಯೋತಿ ! ಅಪ್ರತಿಮವಾದುದಾಗಿತ್ತು. ಅವನ ಆ ಪ್ರಖರವಾದ ಬುದ್ಧಿಯ ಯಾವ ಭಾಗವೂ ಕತ್ತಲೆಯಿಂದ ಆವೃತವಾಗಿರಲಿಲ್ಲ. ನರ-ನಾಡಿ, ಸ್ನಾಯು-ಮಾಂಸಗಳಿಂದ ಸುತ್ತಿಕೊಂಡು ಆದ ದೇಹದ ಪದರುಗಳನ್ನು ಭೇದಿಸಿ ನೋಡುವ ಸಾಮರ್ಥ್ಯವುಳ್ಳ 'ಕ್ಷ' ಕಿರಣಗಳಂತೆಯೇ ಮಾನವೀ ಸಂಕೇತ ಮತ್ತು ಬಂಧನಗಳ ಹೊಗೆ ಮೋಡವನ್ನು ಭೇದಿಸಿ ನೋಡಬಲ್ಲ, ಕೇವಲ ಅಚ್ಚ ಮಾನವತೆಯ ವರೆಗಲ್ಲ ಮೇಲೆ ಎಲ್ಲ ವ್ಯಕ್ತಿ ವ್ಯವಹಾರಗಳನ್ನು ತಿಕ್ಕಿ ನೋಡಿ ನಿರ್ಣಯ ಕೊಡಬಲ್ಲ ಸೂಕ್ಷ್ಮಗ್ರಾಹಿ, ಮೂಲಗ್ರಾಹಿಯಾದು ದಾಗಿತ್ತು—ವಿರಾಗನ ದೃಷ್ಟಿ. ಆ ಮೂಲಕವಾಗಿ ಅಚಲೆ ಅವನೆಡೆಗೆ ಎಳೆಯ ಲ್ಪಡುತ್ತಿದ್ದಳು.

ಅಚಲೆ ತನ್ನ ಪದ್ಧತಿಯಂತೆ ಕಠೋರಳಾಗಿ ಆತ್ಮಪರೀಕ್ಷಣೆಗಾರಂಭಿಸಿ ದಳು. 'ಇದೆಲ್ಲ ನನ್ನದೇ ಹುಚ್ಚು, ಮೂರ್ಖತನ. ಅವರು ಯಾವಾ ಗಲೂ ನಿರ್ಲಿಪ್ತರಾಗಿಯೇ ಇರುತ್ತಿದ್ದರು, ನಾನೇ ನನ್ನ ಅಸ್ತಿತ್ವವನ್ನು

ಅವರ ಮೇಲೆ ಹೇರಲು ಪ್ರಯತ್ನಿಸುತ್ತ ನಡೆದಿದ್ದೇನೆ. ಅವರು ನನ್ನನ್ನು ಸೌಜನ್ಯಪೂರ್ಣವಾಗಿಯೇ ಕಂಡರು. ಅದಲ್ಲದೆ ಅವರಿಗೆ ಬೇರೆ ಮಾರ್ಗ ಇರಲಿಲ್ಲ.' ಅವಳು ಸ್ವಂತದ ನಿರ್ಭರ್ತ್ಸನೆಗಾರಂಭಿಸಿದಳು. ಅವಳಿಗೆ ಅದೆಲ್ಲದರ ಕೊನೆ ಸ್ಪಷ್ಟವಾಗಿ ಕಾಣಲಾರಂಭಿಸಿತು. 'ಗಂಡಸಿನ ಸಹಾನುಭೂತಿಯ ಅಪೇಕ್ಷೆ ಮಾಡುವುದು ಹೆಣ್ಣಿಗೆ ಬೆಂಕಿಯೊಡನಾಟವಿದ್ದಂತೆ.' ಅವಳಿಗೆ ಮತ್ತೆ ಸ್ಮೃತಿ ಬಂದಂತೆನಿಸಿತು. 'ನಾನು ತಪ್ಪಿದೆ. ಇನ್ನು ಮುಂದೆ ಮನಸ್ಸಿಗೆ ಇಲ್ಲದ ಸವಲತ್ತು ಕೊಡುವಂತಿಲ್ಲ. ಮನಸ್ಸಿನ ಈ ಹೊಯ್ದಾಟವನ್ನು ಬೆಳೆಯಗೊಡದೆ ಅಲ್ಲಿಂದಲ್ಲಿಯೇ ಮುಗಿಸಿಬಿಡಲೇಬೇಕು.' ಅವಳು ವಿರಾಗನಿಂದ ದೂರವಾಗಿ ಇರುವದೆಂದು ನಿಶ್ಚಯಿಸಿದಳು. ಹಾಗಾದರೆ ಮುಂದೇನು? ಅದೇ, ಅದೇ ಜೀವನ........

ಈ ವಿಸ್ತಾರವಾದ ಸೃಷ್ಟಿಯಲ್ಲೆಲ್ಲ 'ಬದಲಾವಣೆ'ಯೆಂಬುದು ಎಂತಹ ಮಹತ್ವದ ಮಾತು! ಈ ಚಿರ ನವೀನತೆಯ ಮೂಲಕವಾಗಿಯೇ ಜಗತ್ತಿನಲ್ಲಿ ರಮ್ಯತೆಯೆಂಬುದಕ್ಕೆ ಅರ್ಥವುಂಟು. ಗಿಡಗಳು ಹಚ್ಚನೆ ಹಸಿರು ಮುರಿಯುವ ಎಲೆಗಳಿಂದ ಆಚ್ಛಾದಿತವಾಗುವವು, ಅದರ ಮೇಲೆ ಹೂಗಳು ಉದಿಸುವವು, ಹೂಗಳೇ ಹೀಚಾಗಿ, ಕಾಯಾಗಿ, ಹಣ್ಣುಗಳಾಗುವವು, ಎಲೆಗಳೂ ಹಣ್ಣಾಗುವವು, ಹಣ್ಣುಗಳು ಉದುರುವವು, ಗಿಡಮರಗಳೆಲ್ಲ ರುಕ್ಷವಾಗುವವು, ಮತ್ತೆ ಹೊಸ ತಳಿರೊಡೆದು ಬನಗಳೆಲ್ಲ ರಾಗರಂಜಿತವಾಗುವವು. ಒಂದೇ ಸವನೆ ನಡೆದಿದೆ ಈ ಅವ್ಯಾಹತವಾದ ಬದಲಾವಣೆಯ ಚಕ್ರ. ಈ ಬದಲಿನ ಮೂಲಕವಾಗಿಯೇ ಸೃಷ್ಟಿ ತನ್ನಲ್ಲಿ ಸಂತತವಾದ ರಮ್ಯತೆಯನ್ನು ಹಿಡಿದಿರಿಸಿದೆ. ಮನುಷ್ಯನ ಜೀವನದಲ್ಲಿದ್ದ ಒಂದೇ ಒಂದು ಕೊರತೆಯೆಂದರೆ ಈ ರಮ್ಯತೆಯದ್ದು.' ರಮ್ಯತೆ—ಯಾಕಿಲ್ಲವೆಂದರೆ, ಅದರಲ್ಲಿ ಬದಲಾವಣೆಯಿಲ್ಲ! ನೂರು ತರದ ಉದ್ಯೋಗಗಳನ್ನು ಮಾಡುವ ಮನುಷ್ಯನೊಬ್ಬನು ಜನರ ಉಪಹಾಸಕ್ಕೆ ಪಾತ್ರನಾದರೂ, ಅವನ ದೃಷ್ಟಿಯಿಂದ ಅವನ ಜೀವನ ಸದಾ ರಮ್ಯತೆಯಿಂದ ತುಂಬಿರುವದುಂಟು. ಬಾಳಿನ ಚಿರ ನವೀನತೆಯನ್ನು ಅವನು ಬೇರೆ ಬೇರೆ ತರದಿಂದ ಹಿಡಿದಿಡುವನು.

ತನ್ನ ಸಂಗಡ ಕೆಲಸ ಮಾಡುತ್ತಿದ್ದ ಆ ಶಿಕ್ಷಕಿಯರ ಬತ್ತಿ ಹೋದ ಮುಖಗಳನ್ನು ನೋಡಿ ಅಚಲೆಗೆ ಹೀಗೇ ಅನಿಸುತ್ತಿತ್ತು. ಅವರ ಜೀವನದಲ್ಲಿ

'ನಾವೀನ್ಯ'ವೆಂಬುದೇ ಇರಲಿಲ್ಲ. ಹನ್ನೊಂದು ಹೊಡೆಯಿತೆಂದರೆ ಗಂಟೆಯಾಗುವುದು—ಶಾಲೆ ಪ್ರಾರಂಭ—ಹುಡುಗಿಯರಿಗೆ ಕಲಿಸುವುದು—ಶಾಲೆ ಬಿಟ್ಟು ಹುಡುಗಿಯರೂ ಮನೆಗೆ ತೆರಳುವರು—ಅವರೂ ಮನೆಗಳಿಗೆ ನಡೆಯುವರು—ಮನೆಯಲ್ಲಿ ಊಟ, ಅನಂತರ ಮಲಗುವುದು—ಮತ್ತೆ ಮರುದಿನ ಬೆಳಗಾಗುವುದು. ಅದೇ, ಅದೇ, ಅದೇ ಜೀವನ! ಬದಲೆಂಬುದೇ ಇಲ್ಲ. ಹುಡುಗಿಯರೂ ಮೊದಲನೇ ತರಗತಿಯಿಂದ ಎರಡನೇ ತರಗತಿಗೆ, ಎರಡನೇ ತರಗತಿಯಿಂದ ಮೂರನೆಯದಕ್ಕೆ, ಹೀಗೆ ಮೆಲ್ಲ ಮೆಲ್ಲಗೆ ಏಳನೇ ತರಗತಿಗೆ ಹೋಗುವರು—ಅನಂತರ ಕಾಣದಾಗುವರು. ಮದುವೆಯ ತಿರುಗಣೆಯಲ್ಲಿ ಈ ಜೀವನದ ದೈವದಾಟದ ಪ್ರಕ್ಷುಬ್ಧ ವಾರಿಧಿಯ ತೆರೆಗಳ ರಭಸಕ್ಕೆ ಸಿಕ್ಕಿ, ಅವರು ಯಾವ ದಂಡೆಗೆ, ಯಾವ ಮಳಲುನಾಡಿಗೆ ಒಯ್ದು ಒಗೆಯಲ್ಪಡುವರೋ ಯಾರಿಗೆ ಗೊತ್ತು! ಆದರೆ ಈ ಶಿಕ್ಷಕಿಯರು ಮಾತ್ರ ಅಲ್ಲಿಯೇ, ಅದೇ ಕುರ್ಚಿಗಳ ಮೇಲೆ ಕುಳಿತು ವರ್ಷಾನುಗಟ್ಟಲೆ ಉದಾಸೀನತೆಯಿಂದ ಕಲಿಸುವ ಕೆಲಸ ಮಾಡುತ್ತಿರುತ್ತಾರೆ. ಜನಸಾಮಾನ್ಯರ ಅನೇಕವಾದ ಉದ್ಯೋಗಗಳ ರೀತಿಯೇ ಹಾಗಿದೆ. ಅದೇ, ಅದೇ ತರದ ಒಂಟಿಗ ಜೀವನಕ್ಕೆ ಮನುಷ್ಯ ಬೇಸರಿಯುವದುಂಟು. ಅವನಿಗೇನಾದರೂ ನಾವೀನ್ಯ ಬೇಕೆನಿಸುತ್ತದೆ. ಯಾವುದೊಂದು ವಿಷಯದ ನಿಸ್ಸಾರತೆ ಎಷ್ಟು ಬೇಗನೆ ಸ್ಪಷ್ಟವಾಗುವದೋ ಅಷ್ಟು ಬೇಗನೆ ಅದರಲ್ಲಿ ಬದಲಾವಣೆಯಾಗಬೇಕೆಂಬ ಇಚ್ಛೆ ಬಲವತ್ತರವಾಗುತ್ತದೆ. ಅಂದರೆ ಅನೇಕರಿಗೆ ಅದರ ನಿಸ್ಸಾರತೆಯ ಮನವರಿಕೆಯಾಗಿಯೂ ಅದರೊಡನೆಯೇ ಗುದ್ದಾಡುತ್ತಿರುವ ಪ್ರಸಂಗ ಬರುತ್ತದೆ; ಯಾಕೆಂದರೆ ಅವರಿಗೆ ಬೇರೆ ಮಾರ್ಗವೇ ಉಳಿದಿರುವದಿಲ್ಲ.

ಅಚಲೆಯ ಕಣ್ಣ ಮುಂದೆ ತಾನು ಕಲಿಸುತ್ತಿದ್ದ ಹುಡುಗಿಯರು ಹಾಯ್ದು ಹೋಗುವರು. 'ಈ ಸುಕುಮಾರ ಜೀವನಲತೆಗಳನ್ನು ನೀರುಣಿಸಿ ಬೆಳೆಯಿಸುವ ಉದಾತ್ತ ಕಾರ್ಯ ನನ್ನದಾಗಿದೆ' ಎನ್ನುವ ಅವಳ ಸದಾ ಜಾಗೃತವಾದ ಹೆಮ್ಮೆಯ ಭಾವನೆಯ ನಾವೀನ್ಯ ಪ್ರತ್ಯಕ್ಷ ಜೀವನದಲ್ಲಿ ಇಳಿತರಕ್ಕೆ ಬರಹತ್ತಿತ್ತು. ಆ ಶಿಕ್ಷಣ ಮತ್ತು ಶಿಕ್ಷಣ ಪದ್ಧತಿ ಇವುಗಳ ಅಪೂರ್ಣತೆಯಷ್ಟೇ ಅಲ್ಲ, ಅವುಗಳ ಅರ್ಥಹೀನತೆಯೂ ಕೂಡ ಅವಳನ್ನು

ಚುಚ್ಚಿ ಚುಚ್ಚಿ ಪ್ರಶ್ನಿಸುತ್ತಿದ್ದವು. 'ನೀನು ಉದಾತ್ತ, ಉದಾತ್ತವೆಂದು ಹೇಳುವೆಯಲ್ಲ, ಅದು ನಿಜವಾಗಿಯೂ ಉದಾತ್ತವಾದುದಾಗಿಯೇ?'

ಶಿಕ್ಷಣದ ಉದ್ದೇಶವೆಂದರೆ ಆತ್ಮವಿಕಾಸ—Realisation of self—ಆತ್ಮ ಪ್ರತೀತಿ. ಈ ಉದ್ದೇಶ ನಿಜವಾಗಿಯೂ ಎಷ್ಟರ ಮಟ್ಟಿಗೆ ನೆರವೇರುವದುಂಟು? ಅವಳಿಗೆ ನಂಬಿಗೆ ಇಲ್ಲದಾಯಿತು. ಅವಳಿಗಾದರೂ ಆತ್ಮಜ್ಞಾನವೆಲ್ಲಿತ್ತು? ದೇಹವನ್ನು, ಧನವನ್ನು, ಸ್ವಪರರನ್ನು ಮತ್ತು ಬೌದ್ಧಿಕ ಮತ್ತು ಪರಲೌಕಿಕ ವಿಷಯಗಳನ್ನು ಸಮನಾಗಿ ಪ್ರೀತಿಸಲು ಕಲಿಯುವದೆಂದರೇ ಆತ್ಮವಿಕಸನ! ಶಿಕ್ಷಣ ಪಡೆಯುವದು ಇದಕ್ಕಾಗಿಯೇ. ಅವಳಿಗದನ್ನು ಯಾರೂ ಕಲಿಸಿರಲಿಲ್ಲ. ಅವಳು ಅದನ್ನು ಯಾರಿಗೂ ಕಲಿಸಲು ಸಮರ್ಥಳಾಗಿರಲಿಲ್ಲ. ಮತ್ತೆ ಅಸಮಾಧಾನ! ಅವಳು ಬೇಡಿ ಬಯಸಿ ಬಹಳ ಪ್ರೀತಿಯಿಂದ ತನ್ನ ಜೀವನಕ್ಕೆ ಯಾವುದೊಂದು ನವೀನ ದಿಶೆಯನ್ನು ತೋರಿಸಿದ್ದಳೋ ಅಲ್ಲಿಯೂ ಅಸಮಾಧಾನದ ಗಾಳಿ ಬೀಸಲು ಆರಂಭಿಸಿತ್ತು.

ಇಡೀ ದಿನವೆಲ್ಲ ಅಚಲೆ ಶಾಲೆಯ ಕೆಲಸದಲ್ಲಿಯೇ ತೊಡಗಿರುತ್ತಿದ್ದಳು. ಅಲ್ಲಿಯೂ ಕೂಡ, ನಿಜವಾದ ವಿಕಾಸಕ್ಕಿಂತ ಸಂಕೇತಗಳ ಕಟಕಟಿಯೇ ಹೆಚ್ಚಾಗಿತ್ತು. ನಿರರ್ಥಕವಾದ ನೇಮ ನಿತ್ಯಗಳ ಇಕ್ಕಟ್ಟಾದ ಹಂದರದಲ್ಲಿ ಸಿಲುಕಿ ಬಿದ್ದಿದ್ದ ಆತ್ಮವಿಕಾಸದ ಬಳ್ಳಿ ಹರವಾಗಿ ಬೆಳೆಯಲವಕಾಶವಿಲ್ಲದೆ ಮುರುಟಿಕೊಂಡು ಬಿದ್ದಿತ್ತು. ಯಾವ ತರದ ವಿಕಾಸಕ್ಕೂ ಅಲ್ಲಿ ಸ್ಥಳವಿರವಿಲ್ಲ—ಹುಡುಗಿಯರ ವಿಕಾಸಕ್ಕೂ ಇಲ್ಲ, ಶಿಕ್ಷಕಿಯರದಕ್ಕೂ ಇಲ್ಲವೆಂಬುದು ಅವಳಿಗೆ ಸ್ಪಷ್ಟವಾಗಿ ಕಾಣುತ್ತಿದ್ದಿತು. ಕಲಿಸುತ್ತಿದ್ದುದೆಲ್ಲ ಜೀವನಕ್ಕೆ ಸಂಬಂಧವಿಲ್ಲದುದು ಅಥವಾ ತೀರ ದೂರದಿಂದ ಸಂಬಂಧವುಳ್ಳದ್ದೇ ಆಗಿತ್ತು. ಅಂದಮೇಲೆ ಆ ಅರಿಯದ ಹುಡುಗಿಯರಿಗಾದರೂ ಶಿಕ್ಷಕಿಯರ ವಿಷಯವಾಗಿ ಆದರವುಂಟಾಗುವುದಾದರೂ ಎಂತು? ಶಾಲೆಯಲ್ಲಿ ಆಗುತ್ತಿದ್ದ ಅಕ್ಷರ ಪರಿಚಯದೊಡನೆಯೇ ಅಷ್ಟೇ ಖಚಿತವಾಗಿ ಅರಿವಾಗುತ್ತಿದ್ದ ಇನ್ನೊಂದು ಮಾತೆಂದರೆ ಆ ಶಿಕ್ಷಣದ ಕ್ಷರತೆಯದು, ಅದರ ವೈಫಲ್ಯದ್ದು. ಆದ್ದರಿಂದ ಶಾಲೆ, ಶಿಕ್ಷಕರು ಮತ್ತು ಶಿಕ್ಷಣ ಎಲ್ಲವುಗಳ ವಿಷಯವಾಗಿ ಎನ್ನಿಸುವ ಆದರ ಅಷ್ಟಕಷ್ಟೇ ಆಗಿರುವದುಂಟು.

ಈ ಎಲ್ಲ ವಿಚಾರಗಳೂ ಅಚಲೆಯನ್ನು ತೊಂದರೆ ಪಡಿಸುತ್ತಿದ್ದವು. ಅವಳು ಕೆಲಸವನ್ನೇನೋ ಮಾಡುತ್ತಿದ್ದಳು. ಆದರೆ ಅದೆಲ್ಲ ಅವಳಿಗೆ ನಿರ್ಜೀವವಾದುದಾಗಿತ್ತು. ಸೈನ್ಯದ ಕಟ್ಟುನಿಟ್ಟಿನಲ್ಲಿ ತರಬೇತು ಹೊಂದಿದ ದಂಡಾಳಿನಂತೆ—ಯಾಂತ್ರಿಕವಾಗಿ ಅವಳು ಕೆಲವು ಕೆಲಸಗಳನ್ನು ದಿನ ದಿನವೂ ಮಾಡುತ್ತ ನಡೆಯುತ್ತಿದ್ದಳು. ಕರ್ತವ್ಯಪರತೆ ಅವಳ ಸ್ವಭಾವ ಗುಣವಾಗಿತ್ತೆಂದೇ ಅವಳು ತನ ಕೆಲಸವನ್ನು ಅಚ್ಚುಕಟ್ಟಾಗಿ ಮಾಡುವಳು. ಆದರೆ ಅದರಲ್ಲಿ ಅವಳ ಹೃದಯ ಒಂದಾಗುತ್ತಿರಲಿಲ್ಲವಾದ್ದರಿಂದ ಅವಳಿಗೆ ದಣಿವಾದಂತೆ ಎನ್ನಿಸುತ್ತಿತ್ತು. ಮನೆಗೆ ಬಂದ ಕೂಡಲೆ 'ಏನಿದೆಲ್ಲ ಹೀಗೆ ಅರ್ಥವಿಲ್ಲದ ಕೆಲಸ ಮಾಡುತ್ತಿದ್ದೇನೆ!' ಎನ್ನಿಸುವದು. ಅವಳ ದಿನನಿತ್ಯದ ಜೀವಿತವೆಲ್ಲ ಅವಳಿಗೆ ಸಂಬಂಧವಿಲ್ಲವೆಂದು ಅನಿಸುತ್ತಿದ್ದುದರಿಂದ ಅದರ ನಿರರ್ಥಕತೆ ಇನ್ನಷ್ಟು ಹೆಚ್ಚಾಗಿ ಸ್ಪಷ್ಟವಾಗುತ್ತಿತ್ತು.

ಸಮುದ್ರದಲ್ಲಿ ಹಾಗೆ ಬಿಚ್ಚಿಬಿಟ್ಟ ದೋಣಿಯೊಂದು ತೆರೆಗಳ ಹೊಯ್ದಾಟಕ್ಕೆ ಸಿಕ್ಕು ಅತ್ತಿಂದಿತ್ತ ಜೋಲಿ ಹೊಡೆಯುವದುಂಟು. ಪಶ್ಚಿಮ ದಿಂದ ಗಾಳಿ ಬೀಸಿದರೆ ಪೂರ್ವಕ್ಕೆ ತೂರಲ್ಪಡುವದು; ಮತ್ತೆ ಗಾಳಿ ನಿಂತ ಕೂಡಲೆ ಅದರ ಗುರಿ-ನಿರಿಯಿಲ್ಲದ ನೃತ್ಯಕ್ಕೆ ಆರಂಭ. ಆದರ ಯಾನಕ್ಕೆ ದಿಕ್ಕು ನಿಟ್ಟು ಒಂದೂ ಇಲ್ಲ. ಅಚಲೆಯ ಬಾಳಿನ ದೋಣಿಯೂ ಹೀಗೇ ಜೋಲಿ ಹೊಡೆಯುತ್ತಲಿತ್ತು. ಅವಳು ತಲೆ ತುಂಬ ವಿಚಾರ ಮಾಡಿದಳು. ಏನೆಲ್ಲ ಸಾಧಕ—ಬಾಧಕಗಳನ್ನು ಚಿಂತಿಸಿ, ಎಣಿಕೆ ಹಾಕಿ ಯಾವುದೊಂದು ದಡವನ್ನು ಸೇರಲು ಹವಣಿಸಿದಳು. ಕೊನೆಗೆ ಆಕೆಯ ಹುಟ್ಟನ್ನು ಹಿಡಿದು 'ಧರ್ಮ' ಅವಳ ಬಾಳಿನ ನಿಶ್ಚಿತ ದೋಣಿಯನ್ನು ನಡೆಸಿದಾಗ್ಗೇ ಅದಕ್ಕೊಂದು ಮಾರ್ಗ ದೊರೆತೀತೆಂದೂ, ತನ್ನ ಬಾಳಿಗೊಂದು ವಿಶ್ರಾಂತಿ ಸ್ಥಾನ ಕಂಡೀತೆಂದೂ ಅವಳಿಗೆನ್ನಿಸುತ್ತಿತ್ತು.

ಜೀವನದಲ್ಲಿ ಸಾಮಾನ್ಯವಾಗಿ ದೊರೆಯುವ ಅನುಭವದ ಅಪೂರ್ಣತೆ ಮತ್ತು ಅಯೋಗ್ಯತೆಗಳನ್ನು ಮೀರಿ ಮನಸ್ಸಿನ ಮೇಲೆ ಮನುಷ್ಯನ ನೈತಿಕ ಮತ್ತು ಭೌದ್ಧಿಕ ವಿಕಾಸಕ್ಕೆ ಉಳಿಯುವ ಆಸರೆಯೊಂದೇ ಒಂದು— ಧರ್ಮದ್ದು. ಅಚಲೆ ಅದನ್ನೂ ಅನುಸರಿಸಿ ನೋಡಿದಳು.

೧೫

ಒಂದು ಒಂದೂವರೆ ವರ್ಷಗಳಲ್ಲಿ ಅಚಲೆ ಅಕೋಲೆಗೆ ಬಂದಿರಲಿಲ್ಲ. ಅವಳನ್ನು ಮನೆಗೆ ಕರೆದೊಯ್ಯಲು ಎಲ್ಲರೂ ಸ್ಟೇಶನ್ನಿಗೆ ಬಂದಿದ್ದರು. ಚಿಕ್ಕ ಕುಂದೆ ಲುಟುಲುಟು ಓಡುತ್ತಿದ್ದಳು. ಶಾಮು ಮಾತ್ರ ಸ್ವಲ್ಪ ನಾಚಿಕೊಂಡು ಭಾವೂಸಾಹೇಬರ ಬೆರಳು ಹಿಡಿದುಕೊಂಡು ದೊಡ್ಡವರಂತೆ ಗಂಭೀರನಾಗಿ ನಿಂತಿದ್ದ. ಅಚಲೆ ಗಾಡಿಯಿಂದಿಳಿದ ಕೂಡಲೆ ತನ್ನ ಕೈ ಕೊಸರಿಕೊಳ್ಳಲು ಹವಣಿಸುತ್ತಿರುವ ಕುಂದೆಯ ಒದ್ದಾಟವನ್ನು ಲೆಕ್ಕಿಸದೇ ಅವಳನ್ನು ಗಟ್ಟಿಯಾಗಿ ಹಿಡಿದುಕೊಂಡು ಮನಸೋಕ್ತ ಮುದ್ದಿಟ್ಟು ಕೆಳಗಿಳಿಸಿದಳು. ಕುಂದೆ ಸಿಟ್ಟಿನಿಂದ ಮುಖ ಕೆಂಪಗೆ ಮಾಡಿಕೊಂಡು ಅಚಲೆಯನ್ನು ನೋಡುತ್ತಿದ್ದಳು. ಶಾಮನ ಹತ್ತಿರ ಬಂದು ಅವನ ಗಲ್ಲದ ಮೇಲೊಂದು ಮೆಲ್ಲನೆ ಏಟು ಕೊಟ್ಟು "ಇಷ್ಟರಲ್ಲಿ ಎಷ್ಟು ಬೆಳೆದಿದ್ದೀಯೋ, ಗೃಹಸ್ಥಾ" ಎನ್ನುತ್ತ ಮೊದಲೇ ಕಂಗೆಟ್ಟುಹೋಗಿದ್ದ ಅವನ ತಲೆಯನ್ನು ಹಿಡಿದು ಅಲುಗಿಸಿದಳು. ಅನೇಕ ದಿನಗಳನಂತರ ಊರಿನಿಂದ ಬಂದ ತಮ್ಮವರು ಮನೆಯವರೆಲ್ಲರ ಕುತೂಹಲಸ್ಥಾನವಾಗುವದುಂಟು. ಭಾವೂ ಸಾಹೇಬ, ಬಾಬಾ, ಮಾಣಿಕ, ಸಿಂಧೂವೈನಿಯವರೆಲ್ಲರೂ ಅವಳೆಡೆಗೆ ನಗುಮುಖದಿಂದ, ಕುತೂಹಲ ತುಂಬಿದ ಆನಂದದಿಂದ ನೋಡುತ್ತಲಿದ್ದರು. 'ತಾಯಿ, ಅಂತೂ ಒಮ್ಮೆ ಬಂದೆಯಾ?' ಎನ್ನುತ್ತ ಬಾಬಾ ತನ್ನ ಹಳೆಯ ಪದ್ಧತಿಯಂತೆ ಅಕ್ಕರೆಯಿಂದ ತನ್ನ ಹ್ಯಾಟಿನಿಂದ ಅವಳ ಬೆನ್ನು ತಟ್ಟಿದ. ಅವೆರಡೇ ಶಬ್ದಗಳಲ್ಲಿ ವ್ಯಕ್ತವಾಗಿದ್ದ ಅವನ ಹೃದಯದ ಎಲ್ಲ ಪ್ರೇಮ ಆನಂದಗಳನ್ನು ಅವಳು ಅರಿತಳು. ಮಾಣಿಕಳೆಂದಳು, "ತಾಯಿ, ಎಷ್ಟು ಸೊರಗಿಹೋಗಿದ್ದೀಯೆ, ನೀನು!" ಊರಿನಿಂದ ಬಂದವರು ಅವರನ್ನು ಪ್ರೀತಿಸುವ ಆತ್ಮೀಯರಿಗೆ ಯಾವಾಗಲೂ ಕೃಶರಾಗಿಯೇ ಕಾಣುವದುಂಟು. "ವೈನ್ಸಾ,[1] ಅಂತೂ ಒಂದೂವರೆ ವರ್ಷದ ಮೇಲೊಮ್ಮೆ ಬಂದಿರಲ್ಲ"? ಈ ಪ್ರಶ್ನೆಯಲ್ಲಿ ಅಚಲೆಯ ಅತ್ತಿಗೆ ಅವಳ ಬರವಿನ ವಿಷಯವಾಗಿ ತನಗಿದ್ದ ಉತ್ಕಂಠೆಯನ್ನು ಹಿಡಿದಿರಿಸಿದ್ದಳು.

1 'ನಾದಿನಿ' ಎಂಬುದಕ್ಕೆ ಮರಾಠಿ ಮಾತಿನಲ್ಲಿ ಕರೆಯುವಾಗಲೂ ತೀರ ಸಾಮಾನ್ಯವಾಗಿ ಉಪಯೋಗಿಸಲ್ಪಡುತ್ತದೆ.

ಆ ಎಲ್ಲ ಬಿಡುವಿನ ದಿನಗಳಲ್ಲಿ ತನ್ನ ವಿಷಯಕವಾಗಿದ್ದ ಬಾಬಾ ಮತ್ತು ಅತ್ತಿಗೆಯರ ಪ್ರೇಮಕ್ಕೆ ಎಷ್ಟು ಚ್ಯುತಿ ಬಂದಿರಲಿಲ್ಲವೆಂಬುದನ್ನು ಅವಳು ಅರಿತುಕೊಂಡಳು. ಚಿಕ್ಕ ಮಕ್ಕಳು ಆಟಕ್ಕೆಂದು ಕಟ್ಟಿದ ಆಣೆ ಕಟ್ಟುಗಳು ಹರಿದು ಬರುವ ಮಳೆ ನೀರಿನಲ್ಲಿ ತೇಲಿಹೋಗುವಂತೆ ಅಚಲೆ ಮತ್ತು ಮಾಣಿಕರಲ್ಲಿ ಉಂಟಾಗಿದ್ದ ತಪ್ಪು ಕಲ್ಪನೆಯ ಮಣ್ಣಿನ ಬಂಡೆಗಳ ಅವರ ಪರಸ್ಪರ ಪ್ರೇಮದ ಗಂಗೆಯ ಪ್ರವಾಹಕ್ಕೆ ಸಿಕ್ಕು ಯಾವಾಗಲೋ ಕೊಚ್ಚಿಕೊಂಡು ಹೋಗಿದ್ದವು. ಆ ಹಿಂದಿನ ಘಟನೆಗಳನ್ನು ತನ್ನಷ್ಟಕ್ಕೆ ತಾನೇ ನೆನೆದುಕೊಂಡು ಮಾಣಿಕ ತನ್ನ ಸ್ವಭಾವಕ್ಕಾಗಿ ನಾಚಿಕೊಳ್ಳು ತ್ತಿದ್ದಳು. ಅಚಲೆಯೂ ಕೂಡ ತನ್ನ ಜೋಲಿ ತಪ್ಪದಂತೆ ನೋಡಿಕೊಳ್ಳುತ್ತ ಲಿದ್ದಳು.

ಆಟ-ಪಾಟ, ವಿನೋದ, ಚೇಷ್ಟೆಗಳಲ್ಲಿ ದೀಪಾವಳಿಯ ರಜೆ ಹೇಗೆ ಮುಗಿಯುತ್ತ ಬಂದಿತ್ತೆಂಬುದು ಯಾರ ಲಕ್ಷ್ಯಕ್ಕೂ ಬಂದಿರಲಿಲ್ಲ. ಬಾಬಾ ಮತ್ತು ಭಾವೂಸಾಹೇಬರಿಗೆ ಮಾತ್ರ ಅಚಲೆಯಲ್ಲಿ ಬಹು ಗಂಭೀರವಾದ ಬದಲಾವಣೆಗಳಾಗಿವೆಯೆಂಬುದು ಕಂಡು ಬಂತು. ತನ್ನ ಶಾಲೆ, ಗೆಳತಿ ಯರು, ಮತ್ತೆ ನಾಗಪೂರಿನ ಇನ್ನಿತರ ವಿಷಯಗಳನ್ನು ಕುರಿತು ಅವಳು ಮನಸೋಕ್ತವಾಗಿ ಮಾತನಾಡುತ್ತಿದ್ದಳು. ಆದರೆ ತನ್ನ ಹೃದಯದ ಸುಪ್ತವಾದ ಕ್ಷೋಭೆಯನ್ನು ಅವಳು ಯಾವಾಗಲೂ ಹೊರಗೆ ತೋರಗೊಡು ತ್ತಿದ್ದಿಲ್ಲ. ಇದೇ ಅಚಲೆ ಹಿಂದಕ್ಕೆ ಬಾಬಾನ ಮುಂದೆ ಸಣ್ಣ ಮಗುವಿನಂತೆ ಅನೇಕ ಸಲ ಅತ್ತಿದ್ದಳು. ಭಾವೂಸಾಹೇಬರೊಡನೆ ಮಾತನಾಡುವಾಗ ತಪ್ಪಿ ಆಡಿಹೋದ ಒಂದು ಮಾತನ್ನೂ ಸಾವರಿಸಿಕೊಂಡು ಅವಳು ತನ್ನ ಮನದ ಶಕ್ತಿಯನ್ನು ತೋರ್ಪಡಿಸುತ್ತಿದ್ದಳು. ಆದರೆ ಈಗ ಮಾತ್ರ ಅವಳಿಗೆ ತನ್ನ ದುಃಖವೆಂಬುದೇ ಇರಲಿಲ್ಲವೇನೋ ಎನ್ನುವಂತೆ ವರ್ತಿಸುವಳು. ಹೊಸ ಆಯುಷ್ಯಕ್ರಮ ಅವಳ ಬಾಳಿಗೆ ಸಹನೆಯನ್ನೂ ಶಕ್ತಿಯನ್ನೂ ಮೈ ಗೂಡಿಸಿದೆಯೆಂದು ಅವರಿಗೆನ್ನಿಸಿತು. ಆದರಿಂದ ಅವರಿಗೆ ಸಮಾಧಾನ ವಾಯಿತು. ಮತ್ತೆ ಅವರೂ ಕೂಡ ಮಾಯ್ದು ಬರುತ್ತಿದ್ದ ಗಾಯಗಳ ಮೇಲಿನ ಹಕ್ಕಳೆಯನ್ನು ಕೀಳುವ ಮನಸ್ಸು ಮಾಡಲಿಲ್ಲ. ಅವಳ ಧರ್ಮ ಗ್ರಂಥಗಳ ವಾಚನವು ಮಾತ್ರ ಮಾಣಿಕ ಮತ್ತು ಅತ್ತಿಗೆಗೂ ಕೂಡ ಚೇಷ್ಟೆ

ವಿಷಯಗಳಾಗಿದ್ದವು. ಅಚಲೆ ಅದೆಲ್ಲ ಚೇಷ್ಟೆಯನ್ನು ಚೇಷ್ಟೆಯ ಮೇಲೇ ತಿರುಗಿಸಿಬಿಡುತ್ತಿದ್ದಳು. ಭಾವೂಸಾಹೇಬ ಮತ್ತು ಬಾಬಾ ಇವರಿಬ್ಬರಿಗೆ ಮಾತ್ರ ಅವಳ ಆ ಧರ್ಮಗ್ರಂಥಗಳ ಪಾರಾಯಣದ ಗೂಢಾರ್ಥ ತಿಳಿದಿತ್ತು ಮತ್ತು ಅದರಿಂದ ಅಚಲೆಗೆ ಒಂದು ತರದ ಸಮಾಧಾನ ದೊರೆಯಬಹುದೆಂದೇ ಅವರು ತಿಳಿದಿದ್ದರು.

ಅಚಲೆ ನಾಲ್ಕು ದಿನ ಅಣ್ಣನ ಮನೆಯಲ್ಲಿ, ನಾಲ್ಕು ದಿನ ತಂಗಿ ಮನೆಯಲ್ಲಿರುತ್ತ ಎರಡೂ ಮನೆಗಳ ಜನರ ಸಹವಾಸದಲ್ಲಿ ಬಿಡುವಿನ ದಿನಗಳನ್ನು ಕಳೆಯುತ್ತಿದ್ದಳು. ಈ ಒಂದೂವರೆ ವರ್ಷದಲ್ಲಿ ಶಾಮನಿಗೆ ಅಬಚಿಯ ನೆನಪು ಮಸಕು ಮಸಕಾಗಿತ್ತು. ಈಗ ಮತ್ತೆ ಅವನು ಅಬಚಿಯ ಮಗನಾಗಿದ್ದ. ಅವನ ಸಂಗಟ ಕುಂಟೆಯೂ ಅಬಚಿಯನ್ನು ಸಾಕು ಸಾಕೆನಿಸಿಬಿಟ್ಟಿದ್ದಳು. ಅವಳ ಹುಡಿಗಕ್ಕೆ ಕೊನೆ ಮೊದಲೇ ಇರಲಿಲ್ಲ. ವೈನಿಗೂ ಈ ಮಧ್ಯೆ ಕೆಲವೊಂದು ವಸ್ತುಗಳೆಂದರೆ ಅತಿ ಪ್ರೀತಿಯೆನ್ನಿಸುವುದು, ಮತ್ತೆ ಬೇರೆ ಕೆಲವು ವಸ್ತುಗಳನ್ನು ಕಂಡರೆ ಓಕರಿಕೆಯಾಗುವದಕ್ಕೆ ಆರಂಭವಾಗಿತ್ತು. ಅದರಿಂದಾಗಿ ಇವರಿಬ್ಬರು ಅಕ್ಕತಂಗಿಯರು ಅವಳನ್ನು ಚೇಷ್ಟೆ ಮಾಡಿ ಮಾಡಿ ಪೀಡಿಸುತ್ತಿದ್ದರು. ಅಚಲಾ ತಿರುಗಿ ನಾಗಪೂರಿಗೆ ಹೋಗುವದರೊಳಗಾಗಿ ವೈನಿಗೆ, ಜೋಕಾಲಿಯ ಮೇಲಿನ, ಬೆಳದಿಂಗಳಿನ ಬಯಕೆಯೂಟ ಉಣ್ಣಿಸಿಬಿಡಬೇಕೆಂದು ಮಾಣಿಕ ನಿರ್ಧರಿಸಿದಳು. ಆ ಹೊತ್ತಿನ ಅವರ ಉತ್ಸಾಹನಂತೂ ಹೃದಯದ ಕಟ್ಟೆಯೊಡೆದು ಹೊರ ಚೆಲ್ಲಿದಂತಾಗಿತ್ತು. ಸೂಜಿ ಮತ್ತು ಜಾಜಿ ಮಲ್ಲಿಗೆಯ ಹೆರಳು ಮಾಲೆಗಳನ್ನು ಮಾಡುತ್ತ ಮತ್ತು ವೈನಿಗಾಗಿ ಕಟ್ಟಿದ ಜೋಕಾಲಿಯ ಹಗ್ಗಗಳನ್ನು ಸಿಂಗರಿಸುವದಕ್ಕೆಂದು ಬಿಳಿ ಸೇವಂತಿಗೆಯ ಉದ್ದುದ್ದ ಮಾಲೆಗಳನ್ನು ಸ್ವತಃ ತಾವೇ ಹೆಣೆಯುತ್ತ, ವೈನಿಯನ್ನು ಚೇಷ್ಟೆ ವಿನೋದಗಳಿಂದ ಚುಚ್ಚಿ ಚುಚ್ಚಿ ಪೀಡಿಸುತ್ತಿರುವಾಗ ಸಂಧ್ಯೆಯು ಮಂದ ಪ್ರಕಾಶವದಾವಾಗ ಚಲ್ಲಿ ವರಿದು ಹಬ್ಬಿಕೊಂಡಿತೆಂಬುದು ಅವರ ಲಕ್ಷ್ಯದಲ್ಲಿಯೇ ಬಂದಿರಲಿಲ್ಲ. ಬೇಕೆಂದೇ ಹೊರಗೆ, ಅಂಗಳದಲ್ಲಿ ಗಿಡಕ್ಕೆ ಜೋಕಾಲಿಯೊಂದನ್ನು ಕಟ್ಟಲಾಗಿತ್ತು. ಬೆಳದಿಂಗಳಿನ ಶುಭ್ರತೆ, ವೈನಿಯ ಸಲುವಾಗಿಯೆಂದು ಮಾಡಿದ ಶುಭ್ರ ಶೃಂಗಾರ ಇವೆರಡರ ರಸ ಸಂಗತಿ ಅಮೋಘವಾಗಿತ್ತು. ವೈನಿಯನ್ನು

ಉಡಿಸಿ, ತೊಡಿಸಿ, ಹೂವಿನ ಮಾಲೆಗಳಿಂದ ಶೃಂಗರಿಸುವದರಲ್ಲಿಯೇ ಒಂದೆರಡು ತಾಸುಗಳು ಸಹಜವಾಗಿ ಕಳೆದುಹೋಗಿರಬಹುದು. ಶಾಮ ಕುಂದೆಯರ ಕುಣಿದಾಟ, ಕಿಡಿಗೇಡಿತನಕ್ಕಂತೂ ಅಂದು ಸಂಪೂರ್ಣ ಸ್ವಾತಂತ್ರ್ಯವಿದ್ದಿತು. ಅವರೂ ಸಾಕಾಗುವವರೆಗೆ ಕುಣಿದು ಕುಪ್ಪಳಿಸಿ, ಎಳೆದಾಡಿ ತಮ್ಮ ಮನಸಿಚ್ಛೆ ಗೊಂದಲವೆಬ್ಬಿಸಿದರು. ಆಜಚಿಯ ಕೈಯಿಂದ ಸಾಕಾಗುವಷ್ಟು ಹೊಡೆತಗಳನ್ನೂ ತಿಂದರು. ಎಲ್ಲೆಲ್ಲಿಯೂ ಗಡಿಬಿಡಿ ನಡೆದಿತ್ತು. ಆದರೆ ಅದೆಲ್ಲದರ ನಡುವೆ—ಈ ಉತ್ಸವದ ಗದ್ದಲದಲ್ಲಿಯೂ ಅವಳ ವಿಷಯವಾದ ಅವರಿಬ್ಬರ ಅಕ್ಕರೆಯ ಕೋಮಲ ಭಾವನೆ ಸ್ಪಷ್ಟವಾಗಿ ಎದ್ದು ಕಾಣುತ್ತಿತ್ತು. ಅನೇಕ ಹೆಣ್ಣುಮಕ್ಕಳಿಗೆ ಊಟದ ಆಮಂತ್ರಣ ಕೊಡಲಾಗಿತ್ತು. ಎಲೆಗಳನ್ನು ಹಾಕಿ ಎಲ್ಲವನ್ನೂ ಸರಿಯಾಗಿ ಬಡಿಸಿದರು. ಊಟ ಪ್ರಾರಂಭವಾಯಿತು. ಅಚಲಾ ಮಾಣಿಕರಿಬ್ಬರೂ ಉತ್ಸಾಹದ ಪ್ರತಿಮೂರ್ತಿಗಳಾಗಿದ್ದರು. ಎಲ್ಲಿಯೂ ಯಾವದಕ್ಕೂ ಕಡಿಮೆ ಬೀಳದಂತೆ ಅವರು ತತ್ಪರತೆ ವಹಿಸಿದ್ದರು. ಊಟದ ಹೊತ್ತಿಗೆ ಆಗ್ರಹದಿಂದ ಒಬ್ಬರಾದನಂತರ ಮತ್ತೊಬ್ಬರು ಬಯಕೆಯ ಹಾಡುಗಳನ್ನು ಹಾಡಲು ಆರಂಭವಾಯಿತು.

ಆನಂದ ಉಕ್ಕಿ ಹರಿಯಲಾರಂಭಿಸಿತ್ತು. ವೈನಿಯ ಸುಕೋಮಲ ಜೀವನಕ್ಕೂ ಆನಂದದಿಂದ ಹೃದಯ ಬಿರಿವಂತಾಗಿತ್ತು. ಅವಳು ಸುಖ ಸಾಗರದಲ್ಲಿ ಮುಳುಗಿ ಮಿಂದೇಳಬೇಕು, ಅವಳ ಗರ್ಭದ ನಿರ್ಗಮ ದುರ್ಗದಲ್ಲಿದ್ದುಕೊಂಡು ಅವಳ ಹೃದಯದ ಮಿಡಿತಕ್ಕೆ ತಾಳ ಕುಟ್ಟುವ ಆ ಚಿಕ್ಕ ಜೀವದ ಅಂತರಾಳದ ನರನಾಡಿಗಳನ್ನೂ ತಟ್ಟಿ ಆಹ್ಲಾದ ಅದನ್ನು ಉನ್ಮೀಲಿತವಾಗಿಸಬೇಕು ಎಂಬ ಉದ್ದೇಶದಿಂದಲೇ ಆ ಅಕ್ಕ ತಂಗಿಯರು ಇಷ್ಟೆಲ್ಲ ಎತ್ತುಗಡೆ ನಡೆಯಿಸಿದ್ದರು. ಕಿಂಚಿತ್ ಧೂಸರಿತ ಚಂದ್ರಿಕೆಯ ಆವರಣದಲ್ಲಿ ಅಲ್ಪವೇ ಬಿಳಿ ಛಾಯೆವಡೆದಿದ್ದ ಸಿಂಧೂ! ಆ ದೃಶ್ಯ ಮನಸ್ಸಿಗೊಂದು ಸ್ನಿಗ್ಧತೆಯನ್ನುಂಟು ಮಾಡುವಂತಹದಿತ್ತೆಂಬುದರಲ್ಲಿ ಸಂಶಯವಿರಲಿಲ್ಲ. ಸಿಂಧೂ ವೈನಿ ಅದೆಷ್ಟು ತನ್ನ ಚಿತ್ತನನ್ನೆಲ್ಲ ಕೇಂದ್ರೀಕರಿಸಿ ಆ ಹಾಡುಗಳನ್ನು ಕೇಳುತ್ತಿದ್ದಳು! "ಕೇಳು ಮಗು, ಕೇಳು ಈ ಮಧುರ ಗೀತದ ಮೊಲುನುಡಿಗಳನ್ನು. ಇಂಥ ಗುಣವಂತನಾದ ಕೂಸಾಗಿ ಬರುವೆಯಾ, ನನ್ನ ಕಂದಾ?" ಎಂದೇನೋ ಅವಳು ತನ್ನ ದೇಹಕೋಶದಲ್ಲಡಗಿದ್ದ ಆ ಎಳೆ ಜೀವಕ್ಕೆ ಕೇಳು

ತ್ತಿರುವಂತೆ ತೋರುತ್ತಿತ್ತು. ಅದೆಲ್ಲ ದೃಶ್ಯವನ್ನು ಅಚಲೆ ಆರ್ದ್ರಳಾಗಿ ಬಿಡು ಗಣ್ಣಿನಿಂದ ನೋಡುತ್ತಲಿದ್ದಳು. ಆನಂದ ಉತ್ಸಾಹಗಳಿಂದ ಅವಳ ಕಣ್ಣು ಗಳು ತುಂಬಿಬರುತ್ತಿದ್ದವು. ಅವಳು ವೈನಿಯ ಹತ್ತಿರ ಹೋಗಿ ನುಡಿದಳು, " ನನ್ನ ದೃಷ್ಟಿಯಾದೀತು, ತಾಯಿಾ, ನಿನಗೆ ಈ ದಿನ ! "

" ' ವೈನ್ಸಂಙ ' ನಿಮ್ಮದೆ ? " ಹೀಗೆಂದು ಸಿಂಧೂ ಅತ್ಯಂತ ಪ್ರೀತಿ ತುಂಬಿದ ನೇತ್ರಗಳಿಂದ ಅವಳ ಕಡೆಗೆ ನೋಡಿದಳು. ' ಅವ್ವಯ್ಯಾ, ಇಂಥ ವೈನ್ಸಙ ' ಒಬ್ಬಳು ದೊರೆಯುವದೆಂದರೆ ಭಾಗ್ಯದ ಮಾತೇ ಸರಿ ' ಎಂದೇನೋ ಅವಳಿಗೆ ಹೇಳಬೇಕೆನ್ನಿಸುತ್ತಿತ್ತು.

ಬಹಳ ರಾತ್ರಿಯಾಯಿತು. ಎಲ್ಲರೂ ನಿದ್ರೆಯಲ್ಲಿದ್ದರು. ಆದರೆ ಇಡೀ ದಿನವೆಲ್ಲ ಬಿಡುವಿಲ್ಲದ ದುಡಿತದಲ್ಲಿ ತೊಡಗಿದ್ದರಿಂದ, ಬೆಳಕಿಗೆ ಹೆದರಿ ಒಳಗೇ ಕುಳಿತಿದ್ದ ವಿಚಾರಗಳ ಸ್ವೈರನೃತ್ಯಕ್ಕೆ ರಾತ್ರಿಗಿಂತ ಒಳ್ಳೆಯ ವೇಳೆ ಯಾವುದು ? ಅವುಗಳ ಪ್ರತಿಕ್ರಿಯೆಯಿಂದೇ ಈಗ ಅವಳ ನಿದ್ದೆಗೇಡಾಗಿದ್ದಿತು ! ಆ ಪ್ರತಿಕ್ರಿಯೆಯ ಸ್ವರೂಪವೆಂತಹ ವಿಚಿತ್ರ ! ಬೆಳದಿಂಗಳಿನಲ್ಲಿ ನಡೆದ ಬಸುರಿಯೊಬ್ಬಳ ಆ ಬಯಕೆಯೂಟ ! ವಿಚಾರಗಳಿಗೆ ಉನ್ಮಾದವನ್ನುಂಟು ಮಾಡಲು ಅಷ್ಟು ಸಾಕಾಗಿತ್ತು. ಆ ಉನ್ಮಾದವೇ ಇಲ್ಲಿಯವರೆಗೆ ಧರ್ಮ ಗ್ರಂಥಗಳು ಶಾಂತವಾಗಿರಿಸಿದ್ದ ಆವಳ ಮನದೊಳಗಿನ ಜ್ಯೋತಿಯನ್ನು ಇಂದು ಭುಗಿಲೆಬ್ಬಿಸಿದ್ದಿತು. ' ಅಚಲೆ ನೋಡು, ಕಣ್ಣು ತೆರೆದು ನೋಡು ; ನಿನ್ನೆದುರಿಗೇ ಸರ್ವ ಸಜೀವ ಮತ್ತು ನಿರ್ಜೀವ ಸೃಷ್ಟಿಯೂ ಆತ್ಮ ಸ್ವರೂಪದ ಆವಿಷ್ಕಾರ ಹೊಂದುತ್ತಲಿದೆ ! ಆದರೆ ನೀನು ? ನೀನು ಮಾತ್ರ ಕೇವಲ ಮುರುಟು ಹೋದ ಬಳ್ಳಿಯಂತೆ ಬಾಳಿ, ಒಂದು ದಿನ ಒಣಗಿ ಸತ್ತು ಹೋಗುವೆ. ನಿನ್ನದೆನ್ನುವ ಒಂದಂಶವೂ ನಿನ್ನ ಪಶ್ಚಾತ್ ಉಳಿಯಲಾರದು ....' ದಟ್ಟಾಗಿ ಕವಿದಿದ್ದ ಆ ಕತ್ತಲೆಯಲ್ಲಿ ಅವಳು ಸುರಿಸಿದ ಆ ಅಶ್ರುಗಳನ್ನು ನೋಡುವವ ರಾರು ? ತನ್ನ ಹತ್ತಿರದಲ್ಲಿಯೇ ಮಲಗಿ ಸ್ವಸ್ಥವಾಗಿ ನಿದ್ರೆಹೋಗಿದ್ದ ಶಾಮುನ ಮೈಮೇಲೆ ಕೈಯಿಟ್ಟು ಅವಳು ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಳು. ' ಮಗು ನೀನೇ ಒಮ್ಮೆ ತೋರಿಸಿದ್ದೆಯಲ್ಲವೆ, ನನ್ನ ಪ್ರತೀಕವೆಂದು ಹುಳು ತಿಂದು ಒಣಗಿಹೋದ ಕಣಗಿಲ ಹೂವೊಂದನ್ನು ? ' ಅವಳದೆಷ್ಟೋ ಸಲ ಈ ಮಗ್ಗು

ಲಿಂದ ಆ ಮಗ್ಗುಲಿಗೆ ಹೊರಳಿರಬಹುದು. ಮುತ್ತಿ ಕವಿದಿದ್ದ ಕತ್ತಲೆಯಲ್ಲಿ ಅವಳು ಅದೆಷ್ಟೋ ಹೊತ್ತಿನವರೆಗೆ ನೆಟ್ಟ ದೃಷ್ಟಿಯಿಂದ ನೋಡುತ್ತಿದ್ದಳು! ಆದರೆ ಅಲ್ಲೇನಿತ್ತು? ಸರ್ವತ್ರ ಕತ್ತಲೆ! ಕಣ್ಣು ಮುಚ್ಚಿದರೂ ಕೆಂಪು ಬಣ್ಣದ ಕಣಗಳು ಅವನ ಕಣ್ಣೆದುರಿಗೆ ಒಂದೇ ಸವನೆ ಕುಣಿದು ಕುಣಿದು ಆ ಕತ್ತಲೆಯ ಭಯಾನಕತೆಯನ್ನು ಹೆಚ್ಚಿಸುತ್ತಿದ್ದವು. ಅವಳ ಜೀವನದಲ್ಲಿ ಕಣ್ಣು ತೆಗೆದರೂ ಕತ್ತಲೆ, ಕಣ್ಣು ಮುಚ್ಚಿದರೂ ಕತ್ತಲೆ! ಅವಳಿಗೆ ಯಾವುದೋ ಒಂದು ಸಂಕಟ, ಒಂದು ತರದ ಹೆದರಿಕೆಯಾಗಹತ್ತಿತು! 'ಆಯುಷ್ಯ ಸರ ಸರನೆ ಸರಿಯುತ್ತ ನಡೆದಿದೆ. ಅಚಲೆ, ಆಯುಷ್ಯದ ಒಂದೊಂದು ಕ್ಷಣಕ್ಕೂ ಬೆಲೆಯುಂಟು. ಕಳೆಯುವ ಪ್ರತಿಯೊಂದು ಕ್ಷಣವೂ ನಿನ್ನೊಳಗಿನ ಶಕ್ತಿಯನ್ನು ಕಡಿಮೆಮಾಡುತ್ತ ನಡೆಯುವದು. ಇನ್ನೇನು? ಹೆಚ್ಚಾದರೆ ಹತ್ತು ವರ್ಷ ಮಾತ್ರ! ನಿನ್ನೊಳಗಿನ ಸತ್ವವಲ್ಲಿಗೆ ಮುಗಿದಂತೆಯೇ! ನಂತರ ನೀನು ಯಾತಕ್ಕೂ ಉಪಯೋಗವಿಲ್ಲ.' ತನ್ನ ಜೀವನವನ್ನೆಲ್ಲ ಅರ್ಥವಿಹೀನವಾಗಿಯೇ ಕಳೆಯಬೇಕಾಗುವದೇ ಎಂದು ಅವಳಿಗೆ ಹೆದರಿಕೆಯಾಯಿತು. ಬಾಬಾ, ಭಾವೂಸಾಹೇಬ, ಮಾಣಿಕ, ಸಿಂಧೂ ಇವರೆಲ್ಲ ಅವಳಿಗೆ ದೊರೆಯದ್ದನ್ನು ಪಡೆದಿದ್ದರು. 'ಈ ಎಲ್ಲರಿಗೂ ಸುಖಿಯಾಗಿರುವ ಹಕ್ಕು ಉಂಟು. ಅವರೆಲ್ಲರೂ ಸುಖಿಗಳಾಗಿಯೂ ಇದ್ದಾರೆ. ಆದರೆ ನಾನು? ನಾನು ಹೀಗೆಯೇ ತಳಮಳಿಸುತ್ತಲೇ ಇರಬೇಕೆ? ಇಲ್ಲವಾದರೆ ಮಾಡುವದಾದರೂ ಏನು? ವಿನಾಯಕರಾಯರೊಡನೆ ನನ್ನ ಲಗ್ನವಾಗದೆ ಹೋಗಿದ್ದರೆ, ಮತ್ತು....' ಅವಳು ತನ್ನ ಮನದ ಕುದುರೆಯ ಕಡಿವಾಣವನ್ನು ಬಿಚ್ಚಿಬಿಟ್ಟಿದ್ದಳು. 'ಹಾಗಾಗಿದ್ದರೆ, ಹಾಗಾಗಿದ್ದರೆ ನಾನೆಷ್ಟು ಸುಖಿಯಾಗಿರಬಹುದಾಗಿತ್ತು? ಆದರೆ ಈಗಲಾದರೂ—' ಎಂತಹ ರಮ್ಯವಾದ ಸ್ವಪ್ನ! ಒಂದು ಮರ ಒಳಗಿಂದೊಳಗೇ ಒಣಗುತ್ತ ನಡೆದಿತ್ತು. ಅದು ಒಣಗಿತು, ತೀರ ಒಣ ಕಟ್ಟಿಗೆಯಾಯಿತು, ಕೆಳಗೆ ಉದುರಿಬಿದ್ದಿತು, ನಿರ್ಜೀವವಾಯಿತು! ಅದಕ್ಕೆ ಕ್ಷಣಹೊತ್ತು ಮಾತ್ರ ಸುತ್ತಿಕೊಂಡಿದ್ದ ಬಳ್ಳಿಯೊಂದು ಹಾಗೇ ಸರಿಯುತ್ತ ಸರಿಯುತ್ತ ಮುನ್ನಡೆದಿತು. ಮತ್ತೊಂದು ಮರವನ್ನೇರಿ ಅದನ್ನು ಸುತ್ತಿಕೊಂಡಿತು, ಆನಂದದಿಂದ ಚಿಗಿತು ನಿಂತಿತು. ಹೂ ಹಣ್ಣುಗಳಿಂದ ತುಂಬಿಹೋಯಿತು.... ಆದರೆ....

೧೬

ಮರುದಿನ ಮುಸುರಿಯ ಪಾತ್ರಿಗಳ ಪರ್ವತವೇ ಒಟ್ಟಿತ್ತು. ಒಗೆಯುವ ಅರಿವೆಗಳೂ ಗುಡ್ಡದಷ್ಟಿದ್ದವು. ರಾಜಾಯಿಯ ದಾರಿ ನೋಡಿ ನೋಡಿ ಎಲ್ಲರೂ ಬೇಸತ್ತರು. ಕೊನೆಗೆ ಅವಳನ್ನು ಮನಬಂದಂತೆ ಬೈಯುತ್ತ ಇಬ್ಬರೂ ಅಕ್ಕತಂಗಿಯರು ಆ ಕೆಲಸಗಳನ್ನು ತಾವೇ ಮಾಡಿ ಮುಗಿಸಿದರು. ಯಜಮಾನ ಮತ್ತು ಸೇವಕ ಎಂಬ ಸಂಜ್ಞೆಗಳನ್ನೇನೋ ನಾವು ಮಾಡಿಕೊಂಡಿದ್ದೇವೆ. ಆದರೆ ನಿಜವಾಗಿ ನೋಡಿದರೆ ಸೇವಕನೇ ಯಜಮಾನನಾಗಿರುವದುಂಟು. ಯಾಕೆಂದರೆ ಯಜಮಾನನ ಸುಖ ಅವನ ಕೈಯೊಳಗಿನ ಮಾತು ‘ವೈನಿ’ಯವರದೇ ಆ ‘ಕಾಜಿನ’ ಮಾಡುವ ಸಮಾರಂಭವಿತ್ತು. ಆದರೆ ರಾಜಾಯಿಗೆ ಅದಕ್ಕಿಂತ ಮಹತ್ವದ ಬಲವಿದ್ದಿತು. ಅವನು ಮೂರು ನಾಲ್ಕು ದಿನ ಹೇಳದೇ ಕೇಳದೆ ಹೋಗಿಬಿಟ್ಟರೂ ಮುಂಜಾನೆ ಸಂಜೆಗೆ ರಕ್ತಸಂಬಂಧವಿದ್ದ ಆಪ್ತೇಷ್ಟರಿಗಿಂತ ಹೆಚ್ಚಾಗಿ ಇಲ್ಲಿ ಅವಳ ಹೆಸರಿನ ಜಪಕ್ಕಾರಂಭವಾಗಿತ್ತು.

ಕೊನೆಗೊಮ್ಮೆ ರಾಜಾಯಿ ಮತ್ತುಗಂಗೆ ಒಮ್ಮೆಲೆ ಪ್ರಕಟಳಾದಳು, ಅಚಲಾ, ಮಾಣಿಕ ಮತ್ತು ಸಿಂಧೂ ಮೂವರೂ ಅವಳ ಮೇಲೆ ವಾಗ್ಬಾಣಗಳ ಮಳೆಗರೆದರು. ರಾಜಾಯಿ ಹೀಗೆ ಇಂಥ ಎಷ್ಟೋ ಜನರ ಸಿಟ್ಟನ್ನು ಕಂಡಿದ್ದಳು. ಅವಳು ತೀರ ಹಗುರ ಮನದವಳಾಗಿದ್ದಳು.

“ತಾಯಿಸಾ, ಈಗ ಆರು ವರ್ಸಾತರಿ ನಾನು ನಿಮ್ಮ ಕಡ್ಯಾಕ ದುಡ್ಯಾಕಹತ್ತಿ ಒಂದಿವ್ಸ ಏನೂ ಕೆಲಸಾ ತಪ್ಪಿಸಿಲ್ಲರಿ. ಈಗಾದರೇನಾತು. ನನ್ನ ತಂಗೀಗೆ ಹೇಳಂತ್ಹೇಳಿ ಹೋಗಿದ್ನಿ. ಆಕಿ ಬರಲಿಲ್ಲಂದರ ನಾ ಏನು ಮಾಡ್ಲಿ ಹೇಳ್ರಿ?”

“ಏ, ಇಲ್ಲಿ ನೋಡು, ನಿನ್ನ ತಂಗಿಪಂಗಿ ಅದೇನೂ ಬೇಡ. ಹೋಗೋದಾದಲ್ಲಿ ನಮಗೆ ಮೊದಲೇ ತಿಳಿಸಿ ಹೋಗು. ಅದಕ್ಕೆ ಏನು ವ್ಯವಸ್ಥೆ ಮಾಡಬೇಕೋ ಅದನ್ನೆಲ್ಲ ನಾವು ಮಾಡುತ್ತೇವೆ. ಇವೆಲ್ಲಿಯ ತೊಂದರೆಯೋ, ನನ್ನ ತಾಯಿ” ಮಾಣಿಕ ಸಿಟ್ಟನಿಂದ ನುಡಿದಳು.

“ಹಾಂಗಲ್ಲರಿ, ಅವ್ವಾ. ಬೇಗ ತಿರಿಗಿ ಬರಬೇಕಂತ ಹೋಗಿದ್ದೆ. ಎರಡ ದಿನದಾಗ ಉಡಿಕಿ ಕೆಲಸ ಆಟ ತೀರಿಸಿಗೊಂಡು ಬರಾಕಂತ ಹೋಗಿದ್ದೆ.”

ಎಲ್ಲರ ಸಿಟ್ಟೂ ಇಳಿದು ಹೋಯಿತು.

“ಉಡಿಕಿ? ಯಾರ ಉಡಿಕಿಗೆ ಹೋಗಿದ್ದಿ?”

“ನನ್ನದs ಅಲ್ಲೇನ್ರಿ. ಮತ್ಯಾರದಕ್ಕೆ ಹೋಗಲ್ರಿ, ಅವ್ವಾ?”

ಎಲ್ಲರೂ ನಗಲಾರಂಭಿಸಿದರು.

“ಮತ್ತೆ ನಿನ್ನ ಮೊದಲಿನ ಗಂಡ?”

“ಅಂವ ಎಲ್ಲಿ ಹೋಕ್ತಾನ್ರಿ? ಆ ಉದ್ದಕ ಈ ಉದ್ದಕ ಇದ್ದಾನಲ್ಲ ಮತ್ತ ಅಂವ ಯಾಕ ಸಾಯವೊಲ್ಲ. ನನಗ ಅವನ್ನ ತಗೊಂಡ ಏನು ಮಾಡೂದತ್ರಿ?”

“ಯಾಕೆ, ಹೀಗೆನ್ನುತ್ತೀ?” ಮಾಣಿಕಳ ಕೋಪವನ್ನು ಶಾಂತಪಡಿಸಲು ರಾಜಾಯಿಗೊಂದು ಸಂಧಿ ದೊರೆಯಿತು.

“ಇಲ್ರೀ, ಅವ್ವಾ. ಆ ನನ್ನ ಗಂಡಾ ಆ ಹೊಲಸಿ ಬೆನ್ನ ಹತ್ತಿದನ್ರಿ. ಮನೀ ಕಡೆಗೂ ನೋಡವಲ್ಲ ನನ್ನ ಕಡ್ಯಾಕೂ ನೋಡವೊಲ್ಲನರಿ ಎಳೆ ಮಕ್ಕಳು. ಅವನ್ನೂ ನೋಡವೊಲ್ಲ ಆಕಿ ನೋಡರಿ, ಅವನ್ನ ಬಲ್ಯಾಗ ಹಿಡಿದಾಳರಿ. ನಾ ಒಳ್ಳೇ ಮಾತ್ಲೇಳಿ, ನೋಡಿದೆನ್ರಿ. ಅತ್ತೆ, ಕರೆದೆ, ಸಿಟ್ಟಿಗೆದ್ದೂ ನೋಡಿದಿನಿರಿ. ಮಕ್ಕಳ ಕಡ್ಯಾಕರ ನೋಡಂತ, ಮಕ್ಕಳ್ನ ಒಯ್ದು ಹಿಡಿದಿನರಿ ಅವನ ಮುಂದ. ಅದರ ಏನsನಿಲ್ಲರಿ. ಎರಡು ವರ್ಸಾತರಿ, ಆ ಮಾನಾವಿ ಏನು ಮೋಸ ಮಾಡ್ಯಾಳೋ ಏನೋ, ಈ ಕಡೇಕ ಹಾಯೋದಿಲ್ಲ, ಅವ.”

“ಮತ್ತೆ ನೀನು ಉಡಿಕಿ ಮಾಡಿಕೊಳ್ಳುವವಳಿದ್ದೀಯೆಂಬುದು ಅವನಿಗೆ ಗೊತ್ತಿತ್ತೇನು?”

“ಅವ ಯಾಕ ಸಾಯುವಲ್ಯಾಕ, ಏಳ್ರಿ ಅತ್ತಾಗ. ನನಗ ಏನ ಮಾಡೋದಿದೆ, ಅವನ್ನ ತೊಗೊಂಡು? ಆ ಭಾರ್ಗವ ವಕೀಲರ ಕಡೆ ಮುಂಸರಿ ತಿಕ್ಯಾಕ ಹೋಕ್ಕೇನರಿ. ಅವಗs ಹೇಳಿದೆ. ಆವಾಗ ಅವ ಅಂದ, ‘ನೋಟೀಸೋ ಪೀಟೀಸೋ ಏನೋ ಅಂತಾರಲ್ಲ ಅದನ್ನ ಕೊಡು.’ ನಾ ಅಂದೆ ‘ನನಗೇನು ಅದರಾಗ ಗೊತ್ತಾಗ ಬೇಕ್ರಿ’ ಅಂತ. ಆ ಮ್ಯಾಗ ಅವನ ಬರದನರಿ, ಮಾರಾಯ. ಬಾಳ ಸರದಾರ ಮನಸ್ಯಾರಿ, ಆ ನಮ್ಮ ವಕೀಲರು! ‘ನಾ—ರಾಜಾಯಿ ಈಗ ಎರ್ಡ ವರ್ಸಾತು. ನಿನ್ನ ಕಡೆಯಿಂದ

ಹೊಟ್ಟೆಬಟ್ಟೆಗೆ ಒಂದ ದಮುಡೀನೂ ಇಲ್ಲದ ಇದ್ದೀನಿ. ನೀ ಏನಾರ ವ್ಯವಸ್ತಾ ಮಾಡದಿದ್ರ ನಾ ಉಡಿಕೀ ಮಾಡಿಕೊಂತೀನಿ." ಅಂತ ಚಾಪಿಸಿ ಬಿಟ್ಟನರಿ ಆ ದೊಡ್ಡ ವರ್ತಮಾನ ಪತ್ರದಾಗ."

"ಬಹಳ ಒಳ್ಳೇ ಕೆಲಸ ಮಾಡಿದಿ, ಬಿಡವ್ವ." ಮಾಣಿಕ ನಗುತ್ತ ನುಡಿದಳು.

"ಮತ್ತ ಇದರಾಗ ಗೈರೇನಾತರಿ? ಎರಡ ವರಸಾತು ನೋಡತೇನಿ, ಹೇಣ್ತೀ ನೋಡವೊಲ್ಲ; ಮಕಳ್ನ ನೋಡವೊಲ್ಲ. ಆ ಹೊಯ್ಮಾಲಿಗೇ ಸೀರೀ ಉಡಸೋದ, ಕುಬಸಾ ತೊಡಸೂದ, ಪುಕಳಿ ಸರಾ ಮಾಡಿಸಿ ಕೊಡೂದ ಆತ್ರಿ, ಅಂದ ಮ್ಯಾಗ ಅಂತವನ ಹೇಣ್ತಿ ಅಂತ ಅನಿಸಿಗೊಂಡು ಯಾತಕಿರಬೇಕ್ರಿ, ಅವ್ವಾ." ರಾಜಾಯಿ ಹೃದಯದೊಳಗಡಗಿದ್ದ ಸಂತಾಪಕ್ಕೆ ಮಾರ್ಗ ಮಾಡಿಕೊಡುತ್ತ ನುಡಿದಳು.

"ಈ ಎರಡನೇ ಗಂಡ ಮನಸ್ಸಿಗೆ ಬಂದನೋ ಇಲ್ಲೋ?"

"ಅಯ್ಯ, ಈ ಹೊಸ ಹಿರ್‍ಯಾ ರಾಜ ಮನಸ್ಯಾರಿ ಅವ್ವಾ! ಅವರ ಸಂಗಡ ಇದ್ದಾಕಿ ಅವರನ್ನ ಬಿಟ್ಟು ಓಡಿಹೋದಳ್ರಿ. ಅಂದಮ್ಯಾಗ ಗಂಡ ಸರು ಒಬ್ಬರ ಹ್ಯಾಂಗ ಇರೂದೈತ್ರೀ. ಮತ್ತ ಆಕಿ ಬಿಟ್ಟು ಹೋದ್ಲಂದ ನಲ್ಲರಿ, ಆಕೀನೂ ಅಂತಾಕೇನರಿ, ಮೂರು ಬುದ್ಧೀಯಾಕಿ. ಆದರ ನಮ್ಮ ಹಿರ್‍ಯಾ ಭಾಳ ಸದ್ಗುಳ್ಳ ಮನಸ್ಯಾರಿ. ಇಲ್ಲದಿದ್ರ ಮದುವಿ ಮಾಡಿಕೊಂಡೂ ಕೆಟ್ಟದಾರಿಗೆ ಬಿದ್ದವರಿರತಾರಲ್ಲರಿ? ಆದರೆ ಈ ನನ್ನ ಹೊಸ ಹಿರ್‍ಯಾ ಅಂಥಾ ವಲ್ಲರಿ. ಈ ರಾಜಾಯಿ ಹ್ಯಾಂಗ ತೊಳದಿಟ್ಟ ಅಕ್ಕಿ ಹಂಗ ಅದಾಳೊ ಅವರೂ ಹಂಗಿದ್ದರೇ ಅವ್ವಾ!"

"ಮತ್ತೆ ನಿನ್ನ ಮಕ್ಕಳ ಗತಿ ಏನು?"

"ಅಯ್ಯ ಅದ್ಯಾತಕ ಒಯ್ದೀತರಿ ನನ್ನ ಮಕ್ಕಳ್ನ, ಮೂಳ. ಆದ. ಅವ್ವಾ, ಈ ರಾಜಾಯಿಾ ಜೀವ ಇರೋತನಕ ಮಕ್ಕಳ ಹೊಟ್ಟಿ ಹ್ಯಾಂಗಾರ ಮಾಡಿ ಸಾಗಿಸತಾಳ. ಆ ಗಂಡನೂ ಬ್ಯಾಡಾ, ಈ ಗಂಡನೂ ಬ್ಯಾಡ್ರಿ ರಟ್ಟೀ ಮುರದು ದುಡದು ತಿನ್ನೂವವರಿಗೆ ಯಾರದೇನ್ರಿ?"

ನಾಲ್ಕು ದಿನ ರಾಜಾಯಿ ಬರದೆ ತಪ್ಪಿಸಿದಳೆಂಬ ಸಿಟ್ಟು ಈ ವಿಷಯದಿಂದ ಎಲ್ಲಿಯೋ ಅಡಗಿಹೋಯಿತು. ಮನೆಯಲ್ಲೆಲ್ಲ ಆಕೆಯ ಮಾತೇ ಮಾತು.

"ಇದರ ಬೆಂಕೀ ಹಚ್ಚಲಿ. ಏನಾರ ನಾಚಿಗಿದ್ದರಲ್ಲ ಆಕೀಗೆ" ಮಾಣಿಕಳೆಂದಳು.

"ಅದರಲ್ಲಿ ನಾಚಿಕೆ ಎಂತಹದು ?" ಭಾವೂಸಾಹೇಬರಿಗೆ ಮೇಲಿಂದ ಇಂತಹ ನೋಟೀಸು ಕೊಡುವ ಪ್ರಸಂಗ ಬರುತ್ತಿತ್ತು. ಅವರಿಗೆ ಅದರಲ್ಲಿ ಆಶ್ಚರ್ಯವಾಗುವಂತಹದೇನೂ ಇರಲಿಲ್ಲ.

"ಇದರಲ್ಲಿ ನಾಚಿಕೆ ಬರುವಂತಹದೇನೂ ಇಲ್ಲವೇ ಇಲ್ಲವಷ್ಟೇ ? ಅಲ್ಲ, ಒಬ್ಬ ಗಂಡನಿನ್ನೂ ಇದ್ದಾನೆ. ಈಗಾಗಲೇ ಮತ್ತೊಬ್ಬನೊಡನೆ ಉಡಿಕಿ ಮಾಡಿಕೊಂಡು ಇವಳು ಕಡೆಗಾಗಿದ್ದಾಳಲ್ಲ."

"ಅಯ್ಯ. ಅವರಿಗೆಲ್ಲಿಯದು ನೇಮ ನಿತ್ಯ!" ವೈನಿ ಮಧ್ಯೆ ಮೆಲ್ಲಗೆ ನುಡಿದಳು.

"ನೇಮ ನಿತ್ಯ ಯಾರಿಗುಂಟು, ಹೇಳಿರಿ ?" ಬಾಬಾ ಕೇಳಿದ.

"ಇಶ್ಶ್ಯ, ಹಾಗಂದರೇನು ? ಎಲ್ಲರೂ ಏನು ಹಾಗೇ ಇರುವರೋ ಏನು ?"

"ನಾನು ಹೇಳುವದು ಹಾಗಲ್ಲ. ಯಾವದಕ್ಕೆ ನಾವು ನೇಮ ನಿತ್ಯ ಅಥವಾ ನೀತಿ ಎನ್ನುವೆವೋ ಅದು ಎಷ್ಟರ ಮಟ್ಟಿಗೆ ನಿಜವಾಗಿ ನೀತಿಯುತ ವಾಗಿರುತ್ತದೆಂದು ಯಾರು ಹೇಳಬೇಕು ?" ಬಾಬಾ ನುಡಿದ. ಭಾವೂ ಸಾಹೇಬರೂ ಕೂಡಲೇ ನುಡಿದರು :

"ರಾಜಾಯಿಯ ಲೆಕ್ಕಾಚಾರ ಸರಿಯಾದುದೆಂದು ನನಗೆನಿಸುತ್ತದೆ. ಎರಡರಲ್ಲಿ ಎರಡು ಕೂಡಿಸಿದರೆ ನಾಲ್ಕು. ಕೆಲವರು ಎರಡರಲ್ಲಿ ಎಷ್ಟು ಕೂಡಿ ಸಿದರೆ ನಾಲ್ಕಾದೀತೆಂದು ಮೂರ್ಖನಂತೆ ವಿಚಾರ ಮಾಡುತ್ತಲಿರುತ್ತಾರೆ. ಮತ್ತೆ ಕೆಲವರು ಎರಡರಲ್ಲಿ ಒಂದು ಕೂಡಿಸಿದರೆ ನಾಲ್ಕು ಎಂದು ಸಾರಿ ಹೇಳುತ್ತಾರೆ. ಗಂಡ ದಾರಿ ಬಿಟ್ಟು ನಡೆಯುತ್ತಿದ್ದಾನೆ, ಮನೆಯ ಕಡೆಗೂ ಮಕ್ಕಳ ಕಡೆಗೂ ಎಳ್ಳಷ್ಟೂ ಲಕ್ಷ್ಯ ಕೊಡುವುದಿಲ್ಲ, ಮತ್ತೊಬ್ಬಳೊಡನೆ ನಿರಾಯಾಸವಾಗಿ ಇದ್ದುಬಿಟ್ಟಿದ್ದಾನೆ, ಎಂದಮೇಲೆ ಮುಗಿಯಿತು. ನೋಟೀಸು ಕೊಡುವದು. ಉತ್ತರ ಬರದಿದ್ದರೆ ಮತ್ತೊಂದು ಲಗ್ನ ಮಾಡಿಕೊಂಡು ಬಿಡುವದು. ಅನಂತರ ಅವನದೂ ತನ್ನದೂ ಯಾವ ಸಂಬಂಧ ಇಲ್ಲ. ಇಬ್ಬರೂ ಸ್ವತಂತ್ರ. ರಾಜಾಯಿಯ ಈ ಮಾರ್ಗ ಸರಳವಾದುದೇ ಆಗಿದೆ."

"ಇಶ್, ಸಾಕುಮಾಡಿರಿ. ನಿಮ್ಮದೂ ಇಲ್ಲದ್ದೊಂದು" ಮಾಣಿಕ ಕೋಪದ ಆವಿರ್ಭಾವ ಮಾಡುತ್ತ ನುಡಿದಳು. ಅಚಲೆ ಎಲ್ಲವನ್ನು ಸುಮ್ಮನೆ ಕೇಳುತ್ತಿದ್ದಳು.

ಎಲ್ಲವೂ ಸಹಜವಾಗಿ ನಡೆದುಹೋಗಿತ್ತು. ಸುಳಿಗಾಳಿಯೂ ಸಹಜವಾಗಿಯೇ ಚೆಲ್ಲಾಟವಾಡುವದು. ಅದು ಬಂದು ಮೆಲ್ಲನೆ ಕಲ್ಲುಬಂಡೆಯೊಂದನ್ನು ಮುಟ್ಟುವದು. ಆದರೆ ಆ ಬಂಡೆ ನಿರ್ವಿಕಾರವಾಗಿಯೇ ಇರುವದು. ಆದರೆ ಗಿಡಬಳ್ಳಿಗಳೆಲ್ಲ ತಮ್ಮ ಸಹಸ್ರಾರು ಎಸಳುಗಳಿಂದ ಕಂಪಿಸಿ ಆ ಸೌಮ್ಯ ಸಮೀರನ ಸ್ವಾಗತಕ್ಕೆಂದು ತಲೆಬಾಗುವವು. ಮತ್ತೆ ವೀಣೆ? ತನ್ನೆಲ್ಲ ತಂತಿಗಳನ್ನೂ ಬಿಗಿದು ಹಿಡಿದು ಆ ಮಂದಾನಿಲನ ಆಘಾತಕ್ಕಾಗಿ ಪರ್ಯುತ್ಸುಕವಾಗಿರುವ ವೀಣೆ. ಆ ಸೌಮ್ಯವಾದ ಗಾಳಿಯ ಅತ್ಯಲ್ಪ ಸ್ಪರ್ಶದಿಂದಲೂ ಸುಮಧುರ ನಾದದ ಮೇಲುದೆರೆಗಳನ್ನೆಬ್ಬಿಸುವದುಂಟು. ಆ ಸಂಗೀತದ ಮಧುರ ನಿನಾದದಲ್ಲಿ ಆನಂದದ ಲಹರಿಗಳೂ ಇರಬಹುದು ಅಥವಾ ಶೋಕದ ಆರ್ತತೆಯೂ ಇದ್ದಿರಬಹುದು.

೧೭

ರಾಜಾಯಿ ಅಚಲೆಯ ಮನದಲ್ಲಿ ಕೋಲಾಹಲವೆಬ್ಬಿಸಿಬಿಟ್ಟಿದ್ದಳು. ರಾಜಾಯಿಯದೇನು ತಪ್ಪು ಅದರಲ್ಲಿ? ಅವಳಿಗೆ ಅದರಲ್ಲಿ ಯಾವ ತಪ್ಪೂ ಕಾಣಲಿಲ್ಲ. ರಾಜಾಯಿ ಮಾತನಾಡುತ್ತಿದ್ದಳು. ಅಚಲೆ ಲಕ್ಷ್ಯವಿಟ್ಟು ಅದನ್ನೆಲ್ಲ ಕೇಳುತ್ತಿದ್ದಳು. ಅವಳು ನಟ್ಟ ನೋಟದಿಂದ ರಾಜಾಯಿಯ ಅಂತರಂಗ ಪರೀಕ್ಷೆಗೆ ತೊಡಗಿದಳು. ಅದು ಅವಳಿಗೆ ನಿರ್ವಿಕಾರವಾದುದಾಗಿ ತೋರಿತು. ಅದರಲ್ಲಿ ಯಾವ ಕೊರಗೂ ಯಾವ ಕುದಿತವೂ ಇರಲಿಲ್ಲ. ಒಳಗಿಂದೊಳಗೇ ಜೋರಿನಿಂದ ನಿಗ್ರಹಿಸಲ್ಪಟ್ಟ ಕಾಮನೆಗಳ ಹಳಸಿದ ವಾಸನೆ ಅದಕ್ಕೆ ಬರುತ್ತಿರಲಿಲ್ಲ. ಅದು ಸಜೀವವಾಗಿರುವಂತೆ ಅಚಲೆಗೆ ಕಂಡಿತು. ರಾಜಾಯಿಯ ಮನಸ್ಸು ಚೈತನ್ಯಪೂರ್ಣವಾಗಿತ್ತು. ರಾಜಾಯಿಯ ಮಾರ್ಗ ಸತ್ಯವಾದುದಾಗಿತ್ತು, ಸರಳವಾದುದಿತ್ತು. ಬೆಳಗಿನಿಂದ ಸಂಜೆಯವರೆಗೆ ಮೈಮುರಿದು ದುಡಿಯುವ ರಾಜಾಯಿ ಸ್ವಾವಲಂಬಿಯಾಗಿದ್ದಳು. ಅವಳು ಹೊಟ್ಟೆಯ ಸಲುವಾಗಿ ಯಾರ ಹತ್ತಿರವೂ ಬಿಕ್ಕೆ ಬೇಡ

ಬೇಕಾಗಿರಲಿಲ್ಲ. ಅವಳ ಸಮಾಜದ ನೀತಿ ಖಂಡತುಂಡವಾದುದಾಗಿತ್ತು. ಅದರಲ್ಲಿ ಒಳಗೆ ಹೊರಗೆ ಹೀಗೆ ಭೇದವಿರಲಿಲ್ಲ. 'ಶಠಂ ಪ್ರತಿ ಶಾಠ್ಯ'ವೇ ಅದರ ನ್ಯಾಯದ ರೀತಿಯಾಗಿತ್ತು. ಅದರಲ್ಲಿ ಕೃತ್ರಿಮ ಸಂಕೇತಗಳ ಬೆದರುಗಳನ್ನು ಅಲ್ಲಲ್ಲಿ ನಿಲ್ಲಿಸಿ, ಮನುಷ್ಯನನ್ನು ಭಯಗೊಳಿಸಿ ಅವನನ್ನು ಶಕ್ತಿಹೀನನನ್ನಾಗಿ ಮಾಡುವ ಅಮಾನುಷತೆಯಿರಲಿಲ್ಲ ಅವಳು ತನ್ನ ಸುತ್ತಲೂ ನೋಡಿಕೊಂಡಳು. ಭಾರವಾದ ಬೇಡಿಗಳನ್ನು ತೊಡಿಸಿರುವ ಕೈದಿಯೊಬ್ಬನು ಸುತ್ತಲಿನ ಸ್ವತಂತ್ರವಾದ ವಿಸ್ತೃತವಾದ ಜಗತ್ತಿನೆಡೆಗೆ ದೃಷ್ಟಿ ಬೀರುತ್ತಿರುವಂತೆ ಅವಳು ತನ್ನ ಕಣ್ಣರಳಿಸಿ ದೃಷ್ಟಿ ಹರಿಯುವವರೆಗೂ ಸುತ್ತಲೂ ನೋಡಿದಳು. ಅಲ್ಲೇನಿತ್ತು? ಘೋರವಾದ ನಿರಾಶೆ! ಇಲ್ಲ, ಈ ಶೃಂಖಲೆಗಳು ಕಳಚುವದು ಸಾಧ್ಯವೇ ಇಲ್ಲ!

ಆದರೆ ಈ ನಿರಾಶೆಯಾದರೂ ಯಾತಕ್ಕಾಗಿ? ದೈಹಿಕ ಸುಖಕ್ಕಾಗಿ ಯಲ್ಲವೆ? ತನ್ನ ಸುತ್ತಲೂ ತಮ್ಮ ಕೈಯಿಂದಲೇ ತಮ್ಮ ದೈಹಿಕ ಸುಖವನ್ನು ಬೇಕೆಂದು ನಾಶಮಾಡಿ ಸ್ವಾರ್ಥತ್ಯಾಗವೆಸಗುತ್ತ ಜೀವನ ಸಾಗಿಸುತ್ತಿರುವ ಜನರೆಷ್ಟು ಮಂದಿಯಿಲ್ಲ. ಇನ್ನೂ ಮೂವತ್ತೇ ವರ್ಷದ ಇಂದಿರಾತಾಯಿ ಯವರಿಲ್ಲವೇನು? ವೈಧವ್ಯ ಮತ್ತು ಅವರ ಆಪ್ತೇಷ್ಟರು ಮಾಡಿದ ಧನಾಪ ಹರಣಗಳೇನು ಸಣ್ಣ ಆಪತ್ತುಗಳೇ? ಆದರೆ ಅವರಲ್ಲಿ ಸಾಹಸವಿದೆ. ಅವರ ಎಲ್ಲ ಜೀವಿತ ಸಮಾಜಕ್ಕಾಗಿ ಮೀಸಲಾಗಿದೆ. ಬೆಳಗಿನಿಂದ ಸಂಜೆಯ ವರೆಗೆ ಸಮಾಜಕಾರ್ಯದಲ್ಲಿಯೇ ಅವರ ವೇಳೆ ಕಳೆಯುವದು! ಸಮಾಜ ಕ್ಕಾಗಿ ಅವರು ತಮ್ಮ ಸ್ವಂತದ ಯಜ್ಞವನ್ನೇ ನಡೆಯಿಸಿದ್ದರು. ಅಚಲೆಗೆ ಅವರ ವಿಷಯವಾಗಿ ಆದರವೆನ್ನಿಸಿತು. ಸತತವಾದ ಉದ್ಯೋಗದಲ್ಲಿ ಮನ ಸ್ಸನ್ನು ತೊಡಗಿಸಿದರಾಯಿತು. ಮನದ ಕ್ಷುದ್ರಭಾವನೆಗಳು ಮೇಲಕ್ಕೆದ್ದರೆ ಕೇಳಿರಿ. ಅವಳಿಗೆ ಆದರ ಬಗ್ಗೆ ವಿಶ್ವಾಸವೆನಿಸಿತು. ತಮ್ಮ ಸಮಾಜದ ಉನ್ನತಿಗಾಗಿ ಅವರು ನಡೆಸಿರುವ ಅಖಂಡವಾದ ಪ್ರಯತ್ನವನ್ನು ಕಂಡು ಅವಳಿಗೆನಿಸಿತು, ಇದೀಗ ನಿಜವಾದ ನಿಸ್ವಾರ್ಥ. ಇದೇ ನಿಜವಾದ ತ್ಯಾಗ. ನಾನೂ ಅಂತಹ ತ್ಯಾಗವೆಸಗಲಾರೆನೆ? ಆ ಸಮಾಜಸೇವಿಕೆಯ ಮನವನ್ನೆಲ್ಲ ಸಮಾಜಕಾರ್ಯವೇ ಆವರಿಸಿಬಿಟ್ಟಿದೆ. ತನಗೂ ಹೀಗೆ ಸಂತತವಾದ ಕಾರ್ಯದಲ್ಲಿ ಆತ್ಮ ವಿಸ್ಮೃತಿಯಾಗಲಾರದೆ? ಸ್ವಂತದ ದೇಹವನ್ನೇ

ಮರೆತುಬಿಡುವ ಸಾಮರ್ಥ್ಯ ಅವಳಲ್ಲಿ ಎಲ್ಲಿಂದ ಬಂತು? ಅವಳೂ ಮನುಷ್ಯಳೇ ಅಲ್ಲವೆ? ಅವಳಿಗೂ ಭಾವನೆಗಳು, ಉಪಾಧಿಗಳು ಇರಲಾರವೆ? ಆದರೆ ಅವನ್ನೆಲ್ಲ ಸಂಪೂರ್ಣವಾಗಿ ನಿಗ್ರಹಿಸಿ ಅವುಗಳ ಮೇಲೆ ಪೂರ್ಣ ವಿಜಯವನ್ನು ಅವಳು ದೊರಕಿಸಬಲ್ಲಳಾದಲ್ಲಿ ತನಗೇಕೆ ಅದು ಅಸಾಧ್ಯವಾಗಬೇಕು? ಅವಳು ಇಂದಿರಾತಾಯಿಯ ಭಕ್ತಳೇ ಆದಳು. ಅವಳು ಅವರ ನಿಸ್ವಾರ್ಥ ಜೀವನವನ್ನು ಇನ್ನಷ್ಟು ದಿಟ್ಟಿಸಿ ನೋಡಲಾರಂಭಿಸಿದಳು.

ಆಗ ಅವಳಿಗೆ ಬೇರೊಂದು ದೃಶ್ಯವೇ ಕಂಡಿತು. ಸಮಾಜಸೇವೆಯ ಪಣ ತೊಟ್ಟು ಹಂಗುದೊರೆದು ಕಾದುವ ಭಾವೋನ್ಮಾದದಲ್ಲಿ ಆ ಸಮಾಜ ಸೇವಿಕೆ ತನ್ನ ಸ್ವಂತದ ಒಂಟಿ ಜೀವನದ ಅಳಲನ್ನು ಕುತ್ತಿಗೆ ಹಿಸುಕಿ ಮುಳುಗಿಸಿಬಿಡಲು ಹವಣಿಸುತ್ತಿದ್ದಳು. ಕೇವಲ ನಿಸ್ವಾರ್ಥಬುದ್ಧಿಯಿಂದ ತಾನು ಮಾಡುತ್ತಿದ್ದೇನೆಂದುಕೊಳ್ಳುತ್ತಿದ್ದ ಅವಳ ಪ್ರತಿಯೊಂದೂ ಕೃತಿಯ ಹಿಂದೆ, ಯಾರೊಬ್ಬರ ಪ್ರೀತಿ ಸಹಾನುಭೂತಿಗಳಿಗಾಗಿ ಹಾತೊರೆಯುತ್ತಿದ್ದ ಅವಳ ಹೃದಯದ ಹಸಿವು ಸ್ಪಷ್ಟವಾಗಿ ಕಾಣುತ್ತಿತ್ತು. ಅವಳ ಸಮಾಜ ಕಾರ್ಯದ ಮೇಲು ಹೊದಿಕೆಯನ್ನು ಬದಿಗೆ ಸರಿಸಿ ಅಚಲೆ ಅವಳನ್ನು ನೋಡಿದಳು. ಒಳಗೇನು? ಬರೀ ಅಂಧಃಕಾರ! ದಟ್ಟಾಗಿ ಕವಿದ ಕತ್ತಲೆ! ಶೂನ್ಯತೆ! ಭಯಂಕರವಾದ ಆ ಶೂನ್ಯತೆಯ ವಿರುದ್ಧವಾಗಿ ಅವಳೆಲ್ಲ ಅವ್ಯಾಹತ ಪ್ರಯತ್ನ ಸಾಗಿತ್ತು. ಆ ಬರಿಮನದ ಕತ್ತಲೆಯ ಕೋಣೆಯಲ್ಲಿ ಆ ಶೂನ್ಯತೆಯಲ್ಲಿ ಏನಾದರೂ ತುಂಬುವದಕ್ಕೆಂದೇ ಆ ಸಮಾಜಸೇವೆಯ ಹೋರಾಟ ನಡೆದಿತ್ತು. ತನ್ನವರೆನ್ನುವವರು ಯಾರೂ ಇರಲಿಲ್ಲ. ಆದ್ದರಿಂದಲೇ ಅವಳು ತನ್ನೆಲ್ಲ ಪ್ರೇಮದ ಜೊಕ್ಕಸವನ್ನು ಸಮಾಜಕಾರ್ಯದಲ್ಲಿ ಸೂರೆಗೊಳ್ಳುತ್ತ ನಡೆದಿದ್ದಳು. ಅದಕ್ಕೆ ಅವಳ 'ಸಮಾಜದ ವಿಷಯವಾಗಿದ್ದ ಕಳಕಳಿ' ಎಂದು ಜನರೆನ್ನುತ್ತಿದ್ದರು! ಸಾಮಾಜಿಕ ಸಂಕೇತಗಳ ಬಂಧನದಲ್ಲಿ ಸಿಲುಕಿಬಿದ್ದು ತಳಮಳಿಸುತ್ತಿದ್ದ ಅವಳ ಹೃದಯದ ಕೊರಗು ಬೇರೆ ರೂಪವಡೆದು ಹೊರಬಿದ್ದಿತ್ತು. ಅವಳೆಲ್ಲ ಅಭಿಪ್ರಾಯ ಮತ್ತು ಘೋಷಣೆಗಳ ಹಿಂದೆ ಅವಳ ಹೃದಯದ ಅನಂತ ಸುಖದುಃಖಗಳು ಕಾಯ್ದುಕೊಂಡು ಕೂತಿರುವದು ಅಚಲೆಗೆ ಕಂಡುಬಂತು! ಅವಳದನ್ನು ಸರಿಯಾಗಿ ನೋಡಿದಳು. ಹಾಗಾದರೆ ಆ ನಿಸ್ವಾರ್ಥದಲ್ಲಿಯೂ ಸ್ವಾರ್ಥವೇ ಮನೆ ಮಾಡಿದೆಯೆಂದಂತಾಯಿತು!

ಆದರೆ ತಮ್ಮ ಸ್ವಂತದ ದುಃಖಗಳನ್ನು ಅರಿತುಕೊಂಡು ಸಮಾಜ ದೊಳಗಿನ ಅಂಥವೇ ದುಃಖಗಳ ನಿವಾರಣೆಗಾಗಿ ಟೊಂಕ ಕಟ್ಟಿದ್ದ ಇಂದಿರಾ ಬಾಯಿಯವರನ್ನು ನೆನೆದು ಅಚಲೆಗೆ ಆದರ ಆನಂದಗಳೆರಡೂ ಉಂಟಾಗ ದಿರಲಿಲ್ಲ. ಅವಳೂ ಕೂಡ ಅಂಡಲೆಯುತ್ತಿದ್ದ ತನ್ನ ಮನಸ್ಸನ್ನು ಸತತೋ ದ್ಯೋಗದ ಕೊಂಡಪಾಡೆಯಲ್ಲಿ ಕಟ್ಟಿಹಾಕಲುದ್ಯುಕ್ತಳಾದಳು.

೧೮

ರಜೆ ಮುಗಿಯಿತು. ಅಚಲೆ ಮತ್ತೆ ನಾಗಪೂರಿಗೆ ತೆರಳಿದಳು. ಮತ್ತೆ ಶಾಲೆಯ ಕೆಲಸಕ್ಕಾರಂಭಿಸಿದಳು. ತಾನು ಹೇಗೆ ನಡೆಯಬೇಕೆಂಬುದನ್ನು ಈ ಸಲ ಅವಳು ನಿಶ್ಚಯಿಸಿಕೊಂಡೇ ಇದ್ದಳು. ಅವ್ಯಾಹತವಾಗಿ ಕಾರ್ಯ ಮಾಡಬೇಕು. ಅವಳು ತನ್ನೆಲ್ಲ ಕೆಲಸಗಳನ್ನೂ ತಾನೇ ಮಾಡುವದಾಗಿ ನಿರ್ಣಯಿಸಿದಳು. ಮುಂಜಾನೆಯಿಂದ ಸಂಜೆಯ ವರೆಗೆ ಸ್ವಂತದ ಮರವೆ ಯಾಗಬೇಕು. ಅವಳು ದೃಢನಿಶ್ಚಯ ಮಾಡಿದಳು. ಶಾಲೆಯಲ್ಲಿರುವಾಗ ಮನಸ್ಸು ಯಂತ್ರದಂತೆಯೇ ಕೆಲಸಮಾಡುತ್ತದೆ. ಹಾಗೆ ಮಾಡಲೇಬೇಕಾಗು ವ್ವದು. ಶಾಲೆಯ ಹೊರಗೂ ಕೂಡ ಅವಳು ತನ್ನ ಮನಸ್ಸನ್ನು ಯಂತ್ರ ದಂತಿರಿಸುವ ನಿಶ್ಚಯ ಮಾಡಿದಳು. ಅವಳಿಗೆ ಅದರಲ್ಲಿ ಯಶ ದೊರೆಯಿತು. ಒಂದು....ಎರಡು....ಮೂರು ದಿನಗಳು ಕಳೆದವು. 'ಮನಸ್ಸಿಗೆ ಇಲ್ಲದ ಸವಲತ್ತು ಕೊಟ್ಟು ಉಪಯೋಗವಿಲ್ಲ. ಹಾಗೆ ಮಾಡಿದೆಯೋ ಅದು ಮತ್ತೆ ಮೊದಲಿನ ಸ್ಥಿತಿಗೇ ಬಂದಿಳಿಯಿತೆಂದು ತಿಳಿಯಬೇಕು' ಅವಳು ತನ್ನೊ ಳಗೇ ಎಂದುಕೊಂಡಳು. ಮತ್ತೆ ಹದಿನೈದು ದಿನ ಕಳೆದುಹೋದವು.

ಅಚಲೆ ತನ್ನಷ್ಟಕ್ಕೆ ತಾನೇ ನಕ್ಕು ನುಡಿದಳು: 'ಇಲ್ಲಿಯ ವರೆಗೆ ಮನಸ್ಸು ಯಾವಾಗಲೂ ಅದೆಷ್ಟು ಭಾರವಾಗಿರುವಂತೆನಿಸುತ್ತಿತ್ತು! ವ್ಯರ್ಥ ವಾಗಿ ಹೃದಯ ಹಿಂಡಿದಂತೆಯಾಗುತ್ತಿತ್ತು. ಆದರೆ ಈಗ? ಈಗ ನನ್ನ ಮನಸ್ಸು ಅದೆಷ್ಟು ಹಗುರಾಗಿದೆ, ಸುದೃಢವಾಗಿದೆ? ಅದು ಈಗ ಐಹಿಕ ಸುಖದ ನಿಜಸ್ವರೂಪವನ್ನು ಕಂಡುಕೊಂಡಿದೆ. ಸಂಸಾರದಲ್ಲಿ ಅಂಥದು ಇದೆ ಯಾದರೂ ಏನು? ಕಾಮನೆಗಳ ಬೀಡು! ಅವುಗಳನ್ನೆಷ್ಟು ಸಮಾಧಾನ ಮಾಡಿದಗೂ ತೃಪ್ತಿಯೇ ಇಲ್ಲ.' ಅವಳು ನಿಡಿದಾದ ಉಸಿರೆಳೆದು ಹಾಯಾಗಿ ಒರಗಿದಳು. ಅವಳಿಗೆ ಹಗುರೆನಿಸಿತು.

ಮತ್ತೆ ಹದಿನೈದು ದಿನ ಕಳೆದವು. ಅವಳ ಜೀವನ ಚಕ್ರ ಒಂದೇ ಸವನಾಗಿ ಎಂದಿನಂತೆಯೇ ನಡೆದಿತ್ತು. ಅವೇ ಹುಡುಗಿಯರು, ಅದೇ ಶಾಲೆ, ಅದೇ ಕಲಿಸುವ ಕೆಲಸ. ಗಾಣದಲ್ಲಿ ಎಣ್ಣೆಯನ್ನೆಲ್ಲ ಹಿಂಡಿ ತೆಗೆದಂತೆ ನಿಸ್ತೇಜರಾದ ಅದೇ ಆ ಸಹಾಧ್ಯಾಪಿಕೆಯರು. 'ನಾನೇನು ಮಾಡು ತ್ತಿದ್ದೇನೆ? ನನ್ನ ಜೀವನದ ಧ್ಯೇಯವಾವುದು? ನಾನು ಮಾಡುತ್ತಿರುವುದೆಲ್ಲ ಎಷ್ಟು ವ್ಯರ್ಥವಾದುದಾಗಿದೆ? ಹೀಗೆ ನಿರರ್ಥಕವಾದ ಕೆಲಸಗಳನ್ನು ಮಾಡು ತ್ತಿರುವದೇ ನನ್ನ ಜೀವನದ ಅಂತಿಮ ಸಾಧ್ಯವಹುದೇ?' ಅವಳು ಕಣ್ಣು ಅರಳಿಸಿ ಸುತ್ತಲೂ ನೋಡಲಾರಂಭಿಸಿದಳು. 'ಹೃದಯವೆಲ್ಲ ಹೊತ್ತಿ ಹೊಗೆ ಯಾಡುತ್ತಿರುವ ಈ ಪ್ರೌಢ ಕುಮಾರಿಕೆಯರು, ವಿಧವೆಯರು! ಇಂಥ ಹದಗೆಟ್ಟು ನಡೆದಿರುವ ಬಾಳುವೆಯಿಂದ ಅವರಿಗಾವ ಸುಖವುಂಟು? ಅವರಿಗೆ ನಿಜವಾದ ಸುಖವೆಲ್ಲಿ ದೊರೆಯುವದೆಂಬ ಮಾತು ಗೊತ್ತಿದೆ. ಆದರೆ ಅದನ್ನು ಸರಿಯಾಗಿ ಅರಿತು ನಡೆಯುವ ಧೈರ್ಯವಿಲ್ಲ. ಇಂತಹ ಶೂನ್ಯ ವಾದ ಬದುಕಿನಿಂದ ತಮಗೂ ಉಪಯೋಗವಿಲ್ಲ, ಅನ್ಯರಿಗೂ ಇಲ್ಲ. ಅದ ಕ್ಕಿಂತ ತಮಗೇನು ಬೇಕೆಂಬುದನ್ನು ಸರಿಯಾಗಿ ಕಂಡುಕೊಂಡು ಅದನ್ನು ಪಡೆಯುವದಕ್ಕೆ ಪ್ರಯತ್ನಪಟ್ಟಲ್ಲಿ ತಪ್ಪೇನು?' ಅವಳ ಮನಸ್ಸು ಮೆಲ್ಲಗೆ ನುಡಿಯುತ್ತಲಿತ್ತು.

ಅದೇ ದಿನ ಸಂಜೆಗೆ ಅಚಲೆ ರಾಧಿಕೆಯ ಮನೆಗೆಂದು ಹೊರಟಿದ್ದಳು. ಕಳೆದ ಒಂದು ಒಂದೂವರೆ ತಿಂಗಳಿನಲ್ಲಿ ಅವಳು ಆ ಮನೆಯ ಕಡೆ ಹಣಿಕಿ ಕೂಡ ನೋಡಿರಲಿಲ್ಲ. ಅವಳಿಗೆ ಎಲ್ಲ ತಿಳಿಯುತ್ತಿತ್ತು. ಅವಳಿಗೆ ಶತ್ರುವಿನ ಗಾಳಿ ಕೂಡ ಸೋಂಕುವದು ಬೇಕಾಗಿರಲಿಲ್ಲ. ಆದರೆ ಅವಳ ಮಾನಸ್ಸು ಚಿತ್ರಿಸಿದ್ದ ಈ ಶತ್ರು ಯಾರು? ಸಿಂಧೂ ವೈನಿಯ ಬಯಕೆಯೂಟ ವಾದಂದಿನಿಂದ ಅವಳಿಗೆ ಈ ಶತ್ರುವಿನ ಹೆಸರಿಕೆ ಕೂತಂತಾಗಿತ್ತು.

ಅವಳೇನೋ ಮುಂದೆ ನಡೆದಿದ್ದಳು. ಅವಳ ಮನಸ್ಸು ಅವಳನ್ನು ಹಿಂದೆಳೆಯುತ್ತಿದ್ದಿತು. 'ಅಲ್ಲಿಗೆ ಬೇಡ, ಹಿಂದಕ್ಕೆ ತಿರುಗು' ಅವಳ ಕಾಲುಗಳು ಅವಳನ್ನು ಮುಂದಕ್ಕೊಯ್ಯುತ್ತಿದ್ದವು. ಅವಳು ಮನೆಯ ಹತ್ತಿರ ಬಂದಳು. ಶತ್ರು ಒಳಗೇ ಇದ್ದ. ಅವಳು ಮನೆಯೊಳಗೆ ಹೋಗದೆ ಹಾಗೆ ಮುಂದೆ ನಡೆದಳು. ವಿಜಯ ಅವಳದೇ ಆಗಿತ್ತು.' ಆದರೆ ತಲೆಯಲ್ಲಿ

ಭಯಂಕರ ಕೋಲಾಹಲವೆದ್ದಿತು. 'ಎರಡರಲ್ಲಿ ಎರಡು ಕೂಡಿದರೆ ಅದಕ್ಕೆ ಇನ್ನೂ ಮೂರೆಂದೇ ಉತ್ತರ? ಎರಡರಲ್ಲಿ ಮತ್ತಿಷ್ಟು ಕೂಡಿಸಿದರೆ ನಾಲ್ಕಾದೀತೆಂಬ ಸರಳವಾದ ಪ್ರಶ್ನೆಯ ಉತ್ತರ ಹುಡುಕುವದರಲ್ಲಿಯೇ ಇನ್ನೂ ಎಷ್ಟೊತ್ತು ತೊಳಲಾಡುವದು? ..."

ರಾಜಾಯಿ ಅಚಲೆಯ ಬುದ್ಧಿಗೆ ಮಂಕುಹಿಡಿಸಿದ್ದಳು. ರಾಜಾಯಿ ತನ್ನ ಬುದ್ಧಿಯನ್ನುಪಯೋಗಿಸಿ ವಿಲಂಬವಿಲ್ಲದೆ ಸುಖದ ದಾರಿಯನ್ನು ಕಂಡುಕೊಂಡಿದ್ದಾಳೆ. ಆದರೆ ನಾನು? ಬರೀ ಕೊನೆಮೊದಲಿಲ್ಲದ ವಿಚಾರ! ಬರೀ ವಿಚಾರಮಾಡುತ್ತ ನಾನು ಅಭೇದ್ಯವಾದ ಅಸಮಾಧಾನದ ಚಕ್ರವ್ಯೂಹದಲ್ಲಿ ಸಿಕ್ಕಿಕೊಂಡಿದ್ದೇನೆ. ಆದರೆ ರಾಜಾಯಿಯ ಮಾತೇನು? ಅವಳ ಸಮಾಜವೆಂತಹದು? ಅವಳ ದರ್ಜೆ ಯಾವದು? ಅವಳ ಮಾತನ್ನೇ ನನಗೂ ಹೇಗೆ ಅನ್ವಯಿಸಲು ಬಂದೀತು? ನನ್ನ ಮನಸ್ಸಿನ ಮೇಲೆ ಪ್ರಲೋಭಗಳ ಇಷ್ಟು ಬಲವತ್ತರವಾದ ಹಿಡಿತವಿರಬಹುದೆ? ನಾನು ನನ್ನ ಸುಖದ ದಾರಿಯನ್ನು ರಾಜಾಯಿಯ ದರ್ಜೆಗಿಳಿದೇ ಪಡೆಯುವಷ್ಟು ನನ್ನ ಮನದ ಅನವಸ್ಥೆಯೇ? ಅಚಲೆಗೆ ತನ್ನ ಮನದ ದುರ್ಬಲತೆ ಅತ್ಯಂತ ತಿರಸ್ಕರಣೀಯವಾದುದಾಗಿರುವಂತೆನ್ನಿಸಿತು. ಆದರೆ ಹರಿಯುತ್ತಿರುವ ನೀರು ದೊಡ್ಡ ದೊಡ್ಡ ಬಂಡೆಗಳನ್ನೂ ಕೊರೆದು ಮಾರ್ಗಮಾಡಿಕೊಳ್ಳುವದುಂಟು. ಸಣ್ಣ ಮಣ್ಣಿನ ಪಾತ್ರೆಯೊಂದರಲ್ಲಿ ತೆಂಗಿನ ಚಿಕ್ಕ ಸಸಿಯನ್ನು ನೆಟ್ಟಿದ್ದರೂ ಆ ಪಾತ್ರೆ ದೊಡ್ಡದಾಗುವ ದಾರಿಯನ್ನೇನೂ ಆ ಬೆಳೆಯುವ ಸಸಿ ನೋಡುತ್ತ ಕೂಡ್ರುವದಿಲ್ಲ. ತನ್ನ ಬಲವತ್ತರವಾದ ಬೇರುಗಳಿಂದ ಆ ಪಾತ್ರೆಯನ್ನೊಡೆದು ಬೆಳೆಯಲು ಅದು ಹವಣಿಸುತ್ತದೆ. ಅಂತೇ ಜೀವಂತ ವಾದ ಮತ್ತು ಶಕ್ತಿಯುತವಾದ ಮನಸ್ಸಿಗೆ ಅದೆಷ್ಟೇ ಅಡೆತಡೆಗಳಿದ್ದರೂ ಅದು ತನ್ನ ಮಾರ್ಗವನ್ನು ಕಂಡುಕೊಂಡೇ ತೀರುತ್ತದೆ. ಅಚಲೆಯ ಮನಸ್ಸೂ ರಾಜಾಯಿಯೊಡನೆ ತುಲನೆಮಾಡಿಕೊಳ್ಳುವದನ್ನು ಬಿಟ್ಟು ತನ್ನವೇ ಆದ ಸಾಮಾಜಿಕ ಬಂಧನಗಳ ವಿಚಾರಮಾಡಲು ಹೊರಳಿತು.

ಪುರಾಣ, ಪುಣ್ಯಕಥೆ, ವ್ರತ–ಉಪವಾಸಗಳಿಂದ ದೈಹಿಕ ಕಾಮನೆಗಳನ್ನು ಜಯಿಸಲು ಹೊರಟ ಬಾಲವಿಧವೆಯರು ಸನ್ಯಾಸಿಯರಂತೆ. ಎಲ್ಲ ಐಹಿಕ ಸುಖಗಳನ್ನು ತೊರೆದಿರುವದನ್ನು ನೋಡಿ, ಅವಳಿಗೆ ನಿಗ್ರಹಿಸಲು

ಸಾಧ್ಯವಾದ ತನ್ನ ಸ್ವಂತದ ವಿಕಾರವಶತೆಗಾಗಿ ನಾಚಿಕೆಯೆನ್ನಿಸಿತು. 'ಏನೀ ಅಸ್ವಸ್ಥತೆ? ವಿವೇಕವನ್ನೂ ಮೀರಿನಿಂತ ನನ್ನ ಮನದ ಈ ಉದ್ವಿಗ್ನತೆ ಯಾದರೂ ಎಂತಹದು! ಮತ್ತು ಇದೆಲ್ಲಾ ಏತಕ್ಕಾಗಿ? ಬರಿಯುವ ಪ್ರವಾಹ ದೊಂದಿಗೆ ತೇಲಿ ಹೋಗುವದು ಕಷ್ಟದ ಮಾತಲ್ಲ. ಈ ಪ್ರವಾಹವನ್ನು ಎದು ರಿಸಿ ನಿಲ್ಲುವದರಲ್ಲಿಯೇ ನಿಜವಾದ ಸಾರ್ಥಕತೆಯಿದೆ. ಅದಕ್ಕೆ ನಿಜವಾದ ಧೈರ್ಯ ಬೇಕು. ತಮ್ಮ ಮನಸ್ಸನ್ನು ಹಿಡಿತದಲ್ಲಿರಿಸುವ ಸಾಮರ್ಥ್ಯ ಬೇಕು. ಅವಳು ಆಶ್ಚರ್ಯ ಆದರ ಬೆರೆತ ದೃಷ್ಟಿಗಳಿಂದ ಆ ಸನ್ಯಾಸಿನಿಯರ ನಿರೀಕ್ಷಣೆ ಮಾಡಹತ್ತಿದಳು. ಕೆಲವು ಹೊತ್ತು ನಂತರ ಅವಳಿಗೆ ಅವರ ವಿಷಯವಾಗಿ ತನ್ನ ಮನದಲ್ಲಿದ್ದ ಶ್ರದ್ಧೆಯು ಅಸ್ಥಿರವಾಗುವಂತೆ ತೋರಿತು. ಅವರಲ್ಲಿಯ ಬಾಳಿನ ಒರೆಗಲ್ಲು ಇಳಿದುಹೋಗಿ ಅದು ಕೇವಲ ಸಪ್ಪೆಯಾಗಿರುವದು ಅವಳಿಗೆ ಸರಿಯಾಗಿ ಕಂಡಿತು. ಕೇವಲ ನಿರ್ಜೀವವಾದ ಮಣ್ಣಿನಂತಿದ್ದವರು. ಅರ್ಧಾಂಗ ವಾಯುವಿನಿಂದ ಶರೀರದ ಸಮತೋಲ ತಪ್ಪಿಹೋದವರು ಅನು ಭವಿಸುವದಕ್ಕಿಲ್ಲದೆ, ಹಸಿದ ಕಣ್ಣುಗಳಿಂದ ಸುತ್ತಲೂ ನೋಡುತ್ತಿರುವಂತೆ ಅವರ ಸ್ಥಿತಿಯಾಗಿತ್ತು. ನಡೆಯಬೇಕೆನ್ನಿಸುವದು, ಆದರೆ ಕಾಲೇ ಏಳುವ ದಿಲ್ಲ; ಮಾತನಾಡಬೇಕೆಂಬ ಅನಿವಾರ್ಯ ಇಚ್ಛೆಯುಂಟು, ಆದರೆ ನಾಲಿಗೆ ಹೊರಳದಾಗಿದೆ ; ಮುಂದಿದ್ದ ವಸ್ತುವನ್ನು ಸಾಗಿಹೋಗಿ ತೆಗೆದುಕೊಳ್ಳೋಣ ವೆಂದರೆ ಕೈಯೊಳಗಿನ ನರಗಳೆಲ್ಲ ಸತ್ತುಹೋಗಿವೆ. ಸಮಾಜದ ಕೃತ್ರಿಮವಾದ ಅಮಾನುಷವಾದ ನೀತಿ ನಿಯಮಗಳಿಗೆ ಕಟ್ಟುಬಿದ್ದು, ಹೆದರಿ ಹೆದರಿ, ತೀರ ಸಂಕುಚಿತವಾದ, ಕಂಗೆಟ್ಟುಹೋದ ಜೀವನಗಳನ್ನು ಹೇಗೋ ತಳ್ಳಿಕೊಂಡು ನಡೆದಿರುವ ಆ ತಪಸ್ವಿನಿಯರು ತಮ್ಮ ಮನದ ಆಶೆ ಆಕಾಂಕ್ಷೆಗಳನ್ನೆಲ್ಲ ಜಯಿ ಸಿದ್ದರೆಂದು ಅವಳು ಒಪ್ಪಲಾರದಾದಳು. ಆ ಅವರ ಬಾಳ್ವೆ ನಿರ್ಜೀವವಾದುದಾ ಗಿತ್ತು. ತುಂಬಿ ಹೊರಚಲ್ಲುವಂತಾಗಿರುವ ಕೆರೆಯ ನೀರನ್ನು ಅಲ್ಲಲ್ಲಿ ಒಡ್ಡು ಹಾಕಿ ಒಳಗೇ ನಿಲ್ಲಿಸಿರುವಂತೆ ಅವರ ಮನದ ಅವಸ್ಥೆಯಾಗಿದ್ದಿತು. ಅವರ ಮನಸ್ಸುಗಳು ಯಾವಾಗಲೂ ಹಸಿದಿರುತ್ತಿದ್ದವು, ಯಾವಾಗಲೂ ಅಸಮಾ ಧಾನವಾಗಿಯೇ ಇರುತ್ತಿದ್ದವು ಹೇಗಾದರೂ ಮಾಡಿ ಅವುಗಳನ್ನು ಸಮಾ ಧಾನ ಮಾಡುವದಕ್ಕಾಗಿ ತಾತ್ಪೂರ್ತಿಕವಾಗಿ ಅಲ್ಲಲ್ಲಿ ಒಡ್ಡು ಕಟ್ಟುವದರ ಲ್ಲಿಯೇ ಅವರೆಲ್ಲರ ಶಕ್ತಿಯೂ ವೆಚ್ಚವಾಗುತ್ತಿತ್ತು. ಕಣ್ಣಿದ್ದು ನೋಡವಂತಿಲ್ಲ,

ನಾಲಿಗೆಯಿದ್ದು ರುಚಿ ನೋಡುವಂತಿಲ್ಲ, ಮನುಷ್ಯರಾಗಿಯೂ ಜಡವಸ್ತುಗಳಂತೆ ಭಾವನಾಶೂನ್ಯರಾಗಿರುವದು. ಇಂಥವರಿಂದ ಯಾರಿಗೆ ಯಾವ ತರದ ಲಾಭವಾದೀತು? ಅವರಿಗಾದರೂ? ಛೆ, ಅಂತಹ ಲಾಭ ಹೊಂದಲಿಕ್ಕೆ ಅಂತಹ ವಿಕಾಸ ಸಾಧಿಸುವದಕ್ಕೆ ಕೂಡ, ಬೇರೆ ತರದ ಮನಃಸ್ವಭಾವವೇ ಬೇಕಾಗುವದು. ಅತಿವೃಷ್ಟಿಯಿಂದ ಭೂಮಿಯಲ್ಲಿ ನೆಟ್ಟ ಸಸಿಯು ಕೊಳೆತು ಹೋಗುವದು. ಅತಿ ಉಷ್ಣತೆಯಿಂದ ಅದು ಒಣಗಿ ಹೋಗುವದು. ಬಿಸಿಲಿನ ಸ್ಪರ್ಶವಿಲ್ಲದೆ ನೆರಳಿನಲ್ಲಿಯೇ ಇರುವದರಿಂದ ಅದು ಮುರುಟಿಹೋಗುವದುಂಟು. ಯಾವದೂ ಅತಿಯಾಗಬಾರದು, ಅವಾಸ್ತವವಾಗಬಾರದು; ಆದರೆ ಮಿತವಾಗಿಯಾದರೂ ಬೇಕಷ್ಟೆ. ಸಸಿಯೊಂದು ಬೆಳೆದು ದೊಡ್ಡದಾಗುವದಕ್ಕೆ ಮಳೆ, ನೆಳಲು, ಬಿಸಿಲು ಎಲ್ಲವೂ ಕೆಲವೊಂದು ಪ್ರಮಾಣದಲ್ಲಿ ಬೇಕು. ಕಡಿಮೆಯಾದರಿಲ್ಲ, ಹೆಚ್ಚಿಗೆಯಾದರಿಲ್ಲ. ಹಾಗಾದರೆ ನನ್ನಲ್ಲಿಯ ಮನುಷ್ಯತ್ವದ ವಿಕಾಸಕ್ಕೇನಿದೆ. ಬರಿ ಉಷ್ಣತೆಯೇ ಅಲ್ಲವೆ? ಎಲ್ಲ ಒಣ ಒಣ ಮರಳು ಗಾಡಲ್ಲವೇ? ಇದು ಹೀಗೆಯೇ ಇರಬೇಕೆ?

## ೧೯

"ವೇಳೆಯಿದ್ದಲ್ಲಿ ದಯವಿಟ್ಟು ಸಂಜೆಗೆ ಬಂದು ಹೋಗುವದು" ಅಚಲೆ ಮುಸುರೆ ತಿಕ್ಕುವವಳ ಕೈಯಲ್ಲಿ ವಿರಾಗನಿಗೊಂದು ಚೀಟಿ ಕಳಿಸಿದಳು. ಅದರಂತೆ ವಿರಾಗನ ಆಗಮನವಾಗಿತ್ತು. ಈ ನಾಲ್ಕು ತಿಂಗಳಿನ ನಂತರ ಅವರು ಮತ್ತೆ ಒಬ್ಬರನ್ನೊಬ್ಬರು ಸಂಧಿಸಿದರು. ಈ ನಾಲ್ಕು ತಿಂಗಳಿನ ಅವಧಿಯಲ್ಲಿ ಅಚಲೆ ತನ್ನಿಂದ ತಪ್ಪಿಸಿಕೊಳ್ಳುವ ಪ್ರಯತ್ನ ಮಾಡುತ್ತಿದ್ದಾಳೆಂಬುದು ವಿರಾಗನ ಲಕ್ಷಕ್ಕೆ ಬರದಿರಲಿಲ್ಲ. ಅವನು ಅದರ ಕಾರಣಗಳನ್ನು ಶೋಧಿಸಲು ಬಹಳ ಪ್ರಯತ್ನ ಮಾಡಿದ್ದ. ಕೊನೆಗೊಮ್ಮೆ, "ಸರಿ, ಇನ್ನು ಈ ಸಂಬಂಧ ಇಷ್ಟಕ್ಕೇ ಮುಗಿಯಬೇಕೆಂದು ಕಾಣುತ್ತದೆ. ಈ ಬಂಧನ ಹರಿದಂತೆಯೇ. ಇನ್ನು ಅದರ ಬಗ್ಗೆ ವಿಚಾರ ಮಾಡುವಂತಿಲ್ಲ" ಎಂದು ಅವನು ತೀರ್ಮಾನಿಸಿಯೂ ಬಿಟ್ಟಿದ್ದ. ಅಚಲೆ ತನ್ನನ್ನು ತಪ್ಪಿಸುತ್ತಿದ್ದಾಳೆ ಎನ್ನುವ ಮಾತು ಅವನ ಲಕ್ಷಕ್ಕೆ ಬರುವದೊಂದೇ ತಡ ಅವನೇ ಅವಳಿಂದ ದೂರವಾಗಿರತೊಡಗಿದ. ಅವನು ಅವಳಿಗೆ ಆ ವಿಷಯವಾಗಿ ಎಂದೂ ಕಾರಣಗಳನ್ನು ಕೇಳಿರ

ಲಿಲ್ಲ. ಆದರೆ ಅವಳ ಪತ್ರ ಕಂಡೊಡನೆಯೇ ಅವನು ಬಂದೂ ಬಿಟ್ಟಿದ್ದ. ಅವನು ಬಂದುದೂ ಹಾಗೇ ಪರಕೀಯರಂತೆಯೇ; ಕೇವಲ ಅವಳ ಹೃದಯದೊಳಗಿನ ಆಂದೋಲನಗಳನ್ನು ನೋಡುವದಕ್ಕೆಂದು ಮಾತ್ರ.

ಆಚೆ ಈಚೆ ಮಳೆ ಬೆಳೆಗಳ ಸಾಮಾನ್ಯವಾದ ಮಾತೇ ಎಷ್ಟೋಹೊತ್ತು ನಡೆದಿತ್ತು. ಇದು ತೀರ ಹೃದಯಸ್ಪರ್ಶಿಗಳಾದ ಅಂತರ್ಯದ ಭಾವನೆಗಳನ್ನು ದೂರವಿಡುವುದಕ್ಕೆಂದೇ ಇರಲಿಲ್ಲವಷ್ಟೇ. ಅಚಲೆಯು ಔಪಚಾರಿಕವಾಗಿಯೇ ಮಾತು ನಡೆಸಿದ್ದಳು; ಅವಳಿಗಿಂತ ಹೆಚ್ಚು ಔಪಚಾರಿಕ ನಿಸ್ಸಂಬಂಧತೆಯಿಂದ ವಿರಾಗನು ಮಾತನಾಡುತ್ತಿದ್ದ. ಆದರೆ ಕವಿದಿರುವ ನಸುಕಿನ ಮಂಜು ಎಷ್ಟು ದಟ್ಟವಾಗಿದ್ದರೇನು? ಸೂರ್ಯನ ಕಿರಣಗಳ ಸಂಪರ್ಕವಾದ ಕೂಡಲೆ ಅದು ಕರಗಿ ಹೋಗುವದು? ಅಚಲೆಗೆ ತನಗೆ ತಿಳಿಯದೆಯೇ ಮನಸ್ಸು ಬಿಚ್ಚಿ ಮಾತನಾಡಹತ್ತಿದಳು. ರಜೆಯಲ್ಲಿ ಸಂಭವಿಸಿದ ಅನೇಕ ಸಣ್ಣ ದೊಡ್ಡ ಸಂಗತಿಗಳನ್ನು ಅವಳು ಅವನಿಗೆ ನಿವೇದಿಸಿದಳು. ಶಾಮು, ಕುಂದಾ, ಮಾಣಿಕ, ಬಾಬಾ ಇವರೆಲ್ಲರ ವಿಷಯವಾಗಿ ಅವಳು ಅದೆಷ್ಟೋ ಮಾತನಾಡಿದಳು. ಆದರೆ ನಿಜವಾದ ವಿಷಯವಿನ್ನೂ ಉಳಿದೇ ಇತ್ತು. ತನ್ನ ಮನದ ಮೇಲಿನ ಭಾರವನ್ನೊಮ್ಮೆ ಕೊಡವಿಬಿಡದ ಹೊರತು ಅವಳಿಗೆ ಸಮಾಧಾನವಾಗುವಂತಿರಲಿಲ್ಲ. ಕೊನೆಗೆ ಅವಳು ತಾನೇ ಮಾತು ತೆಗೆದಳು.

"ನಾನು ನಿಮ್ಮನ್ನು ಜೆಟ್ಟಿಯಾಗಬಾರದೆಂದು ನಿಶ್ಚಯಿಸಿಬಿಟ್ಟಿದ್ದೆ."

"ಆದರೆ ನಾನೇನೂ ನಿಮ್ಮ ನಿಶ್ಚಯದ ದಾರಿಯಲ್ಲಿ ಅಡ್ಡಿಯಾಗಿ ಬರಲಿಲ್ಲವಲ್ಲ?"

"ನೀವೋ—? ನಿಮಗೆ ನನ್ನ ನೆನಪಾದರೂ ಉಳಿದಿತ್ತೊ ಇಲ್ಲವೋ ಯಾರಿಗೆ ಗೊತ್ತು!"

"ಈ ವಿಷಯ ನಿಮಗೆ ಅನುಕೂಲವಿದ್ದಂತೆ ಗ್ರಹಿಸಬಹುದು."

"ವಿರಾಗ, ನೀವು ಠಕ್ಕರಿದ್ದೀರಿ."

"ಈ ಆರೋಪವೇನೂ ನನ್ನ ಮೇಲೆ ಹೊಸದಲ್ಲ ನಿಮ್ಮದು."

"ಮತ್ತೆ ನನ್ನ ಮೇಲೆಯೂ ನಿಮ್ಮದು ಅದೇ ಆರೋಪವಿದೆ."

"ಅದು ನಿಜವಿರಬಹುದು, ಅಥವಾ ನಾವಿಬ್ಬರೂ ಅಂತಹ ಠಕ್ಕರೇ ಆಗಿರಬಹುದಲ್ಲವೇ?" ಉಭಯರೂ ನಕ್ಕುಬಿಟ್ಟರು.

" ಹಾಗೆ ಇರಲೇಬೇಕಾಗುತ್ತದೆನ್ನಿ."

" ಹೌದು. ಒಮ್ಮೊಮ್ಮೆ ಸ್ವಂತದ ಅಥವಾ, ಒಮ್ಮೊಮ್ಮೆ ಹೆರವರ ಹೆದರಿಕೆಗಾಗಿ."

" ಅದು ನಿಜವಾದುದೇ. ಅಲ್ಲ, ನನಗೆ ಆಶ್ಚರ್ಯವೆನ್ನಿಸುವುದು ನೋಡಿರಿ. ಒಮ್ಮೊಮ್ಮೆ ತೀರ ಸಣ್ಣ ಮಾತಿಗಾಗಿ ನಾವು ಸುಮ್ಮನೆ ಚಡಪಿಡಿಸುತ್ತೇವೆ, ಹೆದರಿಕೊಳ್ಳುತ್ತೇವೆ, ಆದರೆ ಅದೇ ವಿಷಯವನ್ನೇ ಮತ್ತೆ ಕೆಲವರು ಕ್ಷಣಾರ್ಧದಲ್ಲಿ ನಿರ್ಣಯಿಸಿ ಕಡೆಗಾಗುತ್ತಾರೆ."

" ಇದಕ್ಕೆ ಕಾರಣವಿಲ್ಲದಿಲ್ಲ. ಹರಿಯುವ ನೀರಿನಲ್ಲಿ ಬಹುಕಾಲ ಇದ್ದಲ್ಲಿಯೇ ಇರುವ ಕಲ್ಲುಗಳನ್ನು ನೋಡಿದ್ದೀರಾ, ಅವುಗಳ ಸುತ್ತೆಲ್ಲ ಹೇಗೆ ಹಾವಸೆಗಟ್ಟಿರುವದೆಂಬುದನ್ನು? ಹಾಗೆ ಅಪಕ್ವವಾದ ಮನದ ಸುತ್ತಲೂ ಭೀತಿಯ ಹಾವಸೆಯುಂಟಾಗಿರುತ್ತದೆ."

" ಹೌದು, ಹೌದು. ಅನೇಕ ಸಲ ನಮ್ಮ ಮನಸ್ಸು ಹಕ್ಕಿಯಂತೆ ನೆಗೆದು ಬಾಂದಳದ ನೀಲಿಮೆಯಲ್ಲಿ, ನಿರ್ಭೀತವಾಗಿ ನಿರಂಕುಶವಾಗಿ ವಿಹರಿಸುವದಾದರೂ, ಬೇರೆ ಹೊತ್ತಿಗೆ ಕೇವಲ ಸಾಮಾಜಿಕ ಸಂಕೇತಗಳಿಗೇ ಅಂಜಿಕೊಂಡು ಸ್ವತಂತ್ರ ವಿಚಾರಗಳ ಸುಂದರವಾದ ಉದ್ಯಾನವನ್ನೂ ಕಂಡು ದಿಕ್ಕೆಟ್ಟು ಓಡುತ್ತದೆ. ಇದೇ ಅಲ್ಲವೆ ನಿಮ್ಮ ಅಭಿಪ್ರಾಯ? "

" ಅಹುದು."

" ನಿಜವಾಗಿಯೂ ನೋಡಿರಿ. ನನಗೆ ಇದರ ಮೇಲಿಂದ ನಮ್ಮ ರಾಜಾವಿಯ ನೆನಪಾಗುತ್ತದೆ."

" ಅವಳು ಒಬ್ಬ ಗಂಡನನ್ನೂ ಜೀವಂತವಾಗಿರುವಾಗಲೇ ಉಡಿಕೆ ಮಾಡಿಕೊಂಡಳು. ನಾವು ಆ ವಿಷಯವನ್ನೆತ್ತಿದಾಗ ಅದನ್ನೆಲ್ಲ ಅವಳು ತೀರ ಸಹಜವಾಗಿಯೇ ಹೇಳಿಬಿಟ್ಟಳು! ನನಗಂತೂ ಬಹಳ ಆಶ್ಚರ್ಯವೆನಿಸಿತು. ಮನಸ್ಸಿನ ಕಡಿತವಿಲ್ಲ, ಸಮಾಜದ ಭಯವಿಲ್ಲ. ಅರ್ಥಾತ್, ಸಮಾಜದ ಭಯವಾಗುವದಕ್ಕೆ ಅವರ ಸಮಾಜದಲ್ಲಿ ನೀತಿಯೆಂಬುದಾದರೂ ಎಲ್ಲಿದೆಯೆನ್ನಿರಿ? "

" ಹಾಗೆ ಮಾತ್ರ ಹೇಳಲುಬಾರದು, ಹ್ಞಂ. ಗಂಡಹೆಂಡಿರು ಸುಖದಿಂದ ಕೂಡಿರುವಾಗ ಅವರ ಹೆಣ್ಣುಗಳ ಮೈಮುಟ್ಟುವ ಧೈರ್ಯವಾದೀತೇನು

ಯಾರಿಗಾದರೂ? ಹುಲಿ ನೆಗೆದಂತೆ ನೆಗೆದಾರು ಅಂಥವರ ಮೈಮೇಲೆ. ಕೇವಲ ಇದೇ ಒಂದು ಮಾತಿನಲ್ಲಿ ಅವರು ಹೀಗಿರುತ್ತಾರೆಂತಲ್ಲ; ಯಾವ ಮಾತೂ ಅವರಿಗೆ ಅಷ್ಟೇ ಸರಿ. ಒಮ್ಮೆ ಒಂದು ಮಾತು ಅನ್ಯಾಯವಾದದ್ದು ಎಂದು ನಿಶ್ಚಿತವಾಯಿತೆಂದರೆ ತೀರಿತು. ನಂತರ ಅದರಲ್ಲಿ ಒಳಗೆ ಹೊರಗೆ ಯಾವದೂ ಇಲ್ಲ. ಏನಿದ್ದುದೆಲ್ಲ ನಮಗೆ ಕೊಟ್ಟಿದೆ. ಸುಳ್ಳು — ಸೊಟ್ಟು, ಮೋಸಜೀವನ, ಔದಾಸೀನ್ಯ, ಪುಕ್ಕತನ, ಒಳಗೊಂದು — ಹೊರಗಂದು, ಎಲ್ಲ ನಮ್ಮ ಮಧ್ಯಮ ವರ್ಗಕ್ಕೇ ಕೊಟ್ಟಿದೆ."

"ಅದು ಸುಳ್ಳು. ಅವರಲ್ಲಿ ನಡೆಯುವ ಆ ಗೊಂದಲ ಕಣ್ಣಿಟ್ಟು ನೋಡದಿರುವದೇ ಒಳ್ಳೆಯದು."

"ಗೊಂದಲ? ಅಂದರೇನು? ಅವರು ಬಹಿರಂಗವಾಗಿ ಎಲ್ಲ ಮಾಡುತ್ತಾರೆಂದು ಅದಕ್ಕೆ ಗೊಂದಲವೆನ್ನಬೇಕೋ? ಆದರೆ ನೀವು ಮಾತ್ರ ಕದ್ದು ಮಾಡುವದೆಲ್ಲ ನೀತಿ ಅಲ್ಲವೆ?"

"ಎಂದರೆ ಮಧ್ಯಮವರ್ಗವೆಲ್ಲ, ಅನೀತಿಯುತವಾಗಿಯೇ ಇದೆಯೆಂದೋ ಏನೋ ನಿಮ್ಮ ಹೇಳಿಕೆ?"

"ಛೆ, ನಾನಾರಿಗೂ ಹಾಗನ್ನಲಿಲ್ಲವಲ್ಲ. ಪ್ರತಿಯೊಂದು ವರ್ಗದ ನೀತಿಯ ವ್ಯಾಖ್ಯೆಯೂ ಬೇರೆಯಾದುದೇ ಇದೆ. ಅದರಲ್ಲಿ ತುಲನೆಗೆ ಆಸ್ಪದವೇ ಇಲ್ಲ ಎನ್ನುವದೇ ನನ್ನ ಮಾತು. ಆದರೆ ಈ ಮಾತನ್ನೂ ನಾವು ಒಪ್ಪಲೇ ಬೇಕು — ಶ್ರೀಮಂತರು, ಮಧ್ಯಮ ವರ್ಗೀಯರು, ಮತ್ತು ಬಡವರು ಈ ಮೂರು ವರ್ಗದವರ ಪೈಕಿ, ತನ್ನಲ್ಲಿ ತಾನೇ ಹುದುಗಿಕೊಂಡು ಎಲ್ಲವನ್ನು ಬಾಯಿಮುಚ್ಚಿಕೊಂಡು ಕಂಡೂ ಕಾಣದಂತೆ ನಡೆಯಿಸುವ ವರ್ಗವೆಂದರೆ ಮಧ್ಯಮವರ್ಗ. ಅದರಲ್ಲಿ ಶ್ರೀಮಂತರಲ್ಲಿರುವ ನಿರಂಕುಶತೆಯೂ ಇಲ್ಲ, ಬಡವರಲ್ಲಿಯ ನಿರ್ಭಯತೆಯೂ ಇಲ್ಲ."

"ಮಧ್ಯಮಾರ್ಗ ಸಾಧಿಸುವದಾಗಿದೆಯದು."

"ಹೌದು ಅದು ಒಳ್ಳೆಯದಾಗಿರುವಂತೆ, ಅನೇಕ ವೇಳೆ ಘಾತುಕವಾಗಿಯೂ ಪರಿಣಮಿಸುವದುಂಟು. ಶ್ರೀಮಂತರೆನಿಸಿಕೊಳ್ಳುವವರ ನೀತಿ ತತ್ವಗಳೇ ಬೇರೆಯಾಗಿರುತ್ತವೆ. ದುಡ್ಡು ಗಳಿಸುವದೊಂದು ಅವರ ಧ್ಯೇಯ. ಮತ್ತೂ ಅದನ್ನು ಬೇಕಾದ ಅಡ್ಡತಿಡ್ಡ ಮಾರ್ಗಗಳಿಂದ ಗಳಿಸಲಿ ಅದವರಿಗೆ

ತಪ್ಪಾದುದೆನ್ನಿಸುವದಿಲ್ಲ, ಮತ್ತು ನಾವು ಅನೀತಿಯೆಂದು ತಿಳಿಯುವ ಅನೇಕ ಮಾತುಗಳೂ ಅವರಲ್ಲಿ ಬಂಗಾರದ ಹೊಗೆಯಿಂದ ಮಸಳಿಸಿ ಹೋಗುವವು. ದುಡ್ಡಿಗಾಗಿ ಯಾರ ಕುತ್ತಿಗೆ ಕೊಯ್ಯುವಾಗಲೂ ಅವರ ಕೈಗಳು ನಡಗುವದಿಲ್ಲ. ಇಬ್ಬರು ಹೆಂಡತಿಯರನ್ನು ಮಾಡಿಕೊಂಡು ಮನೆಯಲ್ಲಿಡಲು ಅವರಿಗೆ ಯಾವ ನಿಧಿನಿಷೇಧಗಳೂ ಅಡ್ಡಬರುವದಿಲ್ಲ. ಹಣದ ಹೊಳಪಿನಿಂದ ಈ ಕತ್ತಲೆಯೂ ಬೆಳಕಿನ ಬಿಳಿ ಬಣ್ಣ ಒಡೆಯುವದೆಂಬುದು ಅವರಿಗೆ ಗೊತ್ತಿರುತ್ತದೆ."

"ನಮ್ಮ ಮಧ್ಯಮವರ್ಗವೇ ಒಳ್ಳೆಯದೆನ್ನಬೇಕು.—ಸರಳಮಾರ್ಗದಿಂದ ನಡೆಯುವಂತಹದು, ಪಾಪಭೀರುವು"

"ಹಾಗೆನ್ನಬೇಡಿರಿ. 'ಎರಡನೆಯವರಿಗೆ ತಿಳಿಯದಂತೆ ಮಾಡಿದರೆ ಅದು ಪಾಪವಲ್ಲ' ಎಂದೇ ಅವರ ಕಲ್ಪನೆಯಾಗಿರುತ್ತದೆ. ಜೀವನದಲ್ಲಿ ಮನುಷ್ಯನಿರ್ಮಿತವಾದ ಸಂಕೇತ ಅಥವಾ ಬಂಧನಗಳಿಗೆ ತೀರ ಹೆದರಿ ನಡೆಯುವ ವರ್ಗವೆಂದರೆ ಮಧ್ಯಮವರ್ಗವೊಂದೇ."

"ನಿಮಗೆ ಈ ವರ್ಗದ ವಿಷಯವಾಗಿ ತೀವ್ರವಾದ ಅಸಹನೆಯಿದ್ದಂತೆ ತೋರುತ್ತದೆ!"

"ಹಾಗೇನಿಲ್ಲ. ಆದರೆ ಎರಡೂ ದಂಡೆಯ ಮೇಲೆ ಕೈಯಿಟ್ಟು ಮಧ್ಯಮಾರ್ಗವನ್ನು ಸಾಧಿಸುವ ಈ ವರ್ಗದ ಸ್ಥಿತಿಸ್ಥಾಪಕತ್ವಾಪ್ರಿಯತೆಯ ಇಷ್ಟವಾದುದೇ ಎಂಬುದೇ ನನ್ನ ಪ್ರಶ್ನೆ. ಅನೇಕ ಸಲ ಈ ಸಂಕೇತಗಳ ಅತಿರೇಕದ ಮೂಲಕವಾಗಿ ಸಮಾಜದಲ್ಲಿರುವ ಗುಪ್ತಸುಪ್ತ ಶಕ್ತಿಗಳು ನಿಷ್ಕರ್ಮಕವಾಗುವದುಂಟು. ಇದೇ ನನ್ನನ್ನು ಬಹಳ ತೊಂದರೆಪಡಿಸುವ ಮಾತು."

"ನಿಜವಾಗಿಯೆಂದರೆ, ಈ ಸಂಕೇತ ಮತ್ತು ನೀತಿಯೆಂದರೇನೆಂಬುದೇ ನನಗೆ ತಿಳಿಯದ ವಿಷಯವಾಗಿದೆ."

"ಅವುಗಳಿಗೆ ನಿಶ್ಚಿತವಾದ ಅರ್ಥವಿರುವುದೂ ಅಷ್ಟರಲ್ಲಿಯೇ ಇದೆ. ನದಿಯ ಪಾತ್ರವು ಸಾವಕಾಶವಾಗಿ ಬದಲಾಗುತ್ತಿರುವಂತೆ ಇವೂ ಬದಲಿಸುತ್ತಿರುತ್ತವೆ; ಮತ್ತೆ ಈ ಬದಲಾವಣೆ ಹೀಗೆ ಸೂಕ್ಷ್ಮವಾಗಿ ನಡೆದಿರುವಾಗ ಅನೇಕರ ಮನಸ್ಥಿತಿ ಬಹಳ ವಿಚಿತ್ರವಾಗಿರುತ್ತದೆ: ತಾವು ಸ್ವತಃ ಕೆಳಗೆ ಜಾರುತ್ತಿದ್ದರೂ, ಬೇರೆಯವರ ನಡತೆ ಮಾತ್ರ ಹಳೆಯ ಸಂಕೇತಗಳಿಗೆ ಅನುರೂಪವಾಗಿಯೇ ಇರಬೇಕೆಂದು ಅವರ ಆಗ್ರಹವಿರುತ್ತದೆ. ನನಗೆನಿಸು

ವದೆಂದರೆ ವಿಸ್ತಾರವಾದ ಆಕಾಶದಲ್ಲಿ ಪಸರಿಸಿರುವ ಅನಂತ ಗ್ರಹ ಮಂಡಲ ದಲ್ಲಿ ಪ್ರತಿಯೊಂದು ಗ್ರಹವೂ ತನ್ನಷ್ಟಕ್ಕೇ ಸ್ವತಂತ್ರವಾದುದೇ ಆಗಿದ್ದರೂ ಅವುಗಳಲ್ಲಿಯೂ ಒಂದು ಅಂತರಿಕ ಸಂಬಂಧವಿದ್ದೇ ಇರುತ್ತದೆ. ಅದರಂತೆ ಪ್ರತಿಯೊಬ್ಬ ಮನುಷ್ಯನಿಗೂ ಅವನದೇ ಆದ ನೈತಿಕ ಜಗತ್ತೊಂದು ಇರು ವದುಂಟು. ಆದಾಗ್ಯೂ ಅವನ ಈ ಸ್ವತಂತ್ರವಾದ ನೈತಿಕ ಜಗತ್ತು ಸಕಲ ಮಾನವ ಜಾತಿಯ ಸರ್ವ ಸಮಾಜದ ನೈತಿಕ ಜಗತ್ತಿನೊಡನೆ ಒಳಗಿನ ಸಂಬಂಧವೊಂದರಿಂದ ಹೆಣೆಯಲ್ಪಟ್ಟಿರುತ್ತದೆ."

"ಆದರೆ ಈ ನೈತಿಕ ಜಗತ್ತೆಂದರಾದರೂ ಎಂತಹದು? ನನಗಂತೂ ಅದರಲ್ಲಿ ಎಷ್ಟೋ ತಪಹಗಳುಂಟೆಂದು ತೋರುತ್ತದೆ. ಸಮಾಜವು ಸಾಮಾನ್ಯ ವಾಗಿ ನೀತಿಯುತವೆಂದು ಗಣಿಸುವ ಕಲ್ಪನೆಗಳನ್ನು ಪ್ರತಿಯೊಂದು ವ್ಯಕ್ತಿಯೂ ತನ್ನ ಸ್ವತಂತ್ರವಾದ ನೈತಿಕ ಜಗತ್ತಿನಲ್ಲಿ ಆದರ್ಶಗಳೆಂದು ಪ್ರಸ್ಥಾಪಿಸುವದುಂಟು. ನಂತರ ಸದಾಕಾಲದಲ್ಲಿಯೂ ಇರತಕ್ಕವುಗಳೆಂದಾದ ರಾಷ್ಟ್ರ, ಧರ್ಮ, ಕುಟುಂಬವೆಂಬವೇ ಮೊದಲಾದ ಸಾಮಾಜಿಕ ಸಂಸ್ಥೆಗಳೂ ವ್ಯಕ್ತಿಯ ಮೇಲೆ ಪರಿಣಾಮ ಮಾಡದಿರುವದಿಲ್ಲ. ಇದರ ಹೊರತಾಗಿ ಅರ್ಥ ಮರ್ಥ ಮಾತ್ರ ಅವಗತವಾದ ಬೇರೆ ಕೆಲವು ಹಸಿಬಿಸಿ ಆದರ್ಶಗಳನ್ನೂ ಮನುಷ್ಯನು ಅನುಕರಿಸಲೆತ್ನಿಸುತ್ತಿರುತ್ತಾನೆ."

"ಈ ಆದರ್ಶ ಕಲ್ಪನೆಗಳು, ಈ ಸಮಾಜ ಸಂಸ್ಥೆ, ಮತ್ತು ಈ ಅರ್ಥ ಮರ್ಥ ಕಲಿತ ತತ್ವಗಳು ಇವುಗಳಿಂದಲೇ ಸಾಮಾನ್ಯ ಮನುಷ್ಯನಿಗೆ ದಿಕ್ಕು ತಪ್ಪಿದಂತೆನ್ನಿಸುತ್ತದೆ."

"ಸಾಮಾನ್ಯ ಮನುಷ್ಯನಿಗೇನೋ ಹಾಗೆ ದಿಕ್ಕುತಪ್ಪಿಂದಂತಾಗ ಬಹುದು. ಆದರೆ ನಿಜವಾದ ನೈತಿಕ ಉನ್ನತಿ ಈ ಮೂರರ ಸುಗಮವಾದ ಹೊಂದಿಕೆಯಲ್ಲಿಯೇ ಅಡಗಿದೆ. ಅದನ್ನು ಸಾಧಿಸುವದಕ್ಕೆ ಹಳಸಿದ ಕಲ್ಪನೆ ಗಳನ್ನು ಕಿತ್ತೊಗೆಯಬೇಕಾಗುತ್ತದೆ. ಆದರ್ಶ ಕಲ್ಪನೆಗಳ ಸರಿಯಾದ ಅರ್ಥವನ್ನು ಗ್ರಹಿಸಬೇಕಾಗುತ್ತದೆ. ಸಮಾಜ ಸಂಸ್ಥೆಯನ್ನು ಆವರಿಸಿರುವ ದೂಳವನ್ನೆಲ್ಲ ಕೊಡವಬೇಕಾಗುತ್ತದೆ; ಮತ್ತು ಹೊತ್ತು ಹೊತ್ತಿಗೆ ಅವೆಲ್ಲವು ಗಳ ಸರಿಯಾದ ಬೆಳವಣಿಗೆಗೆ ತಕ್ಕ ದಾರಿಗಳನ್ನೂ ಹುಡುಕಬೇಕಾಗುತ್ತದೆ."

"ಅಂದರೆ? ಸಮಾಜ ಸಂಸ್ಥೆಯು ಒಂದೇ ಸ್ವರೂಪದ್ದಾಗಿ ಉಳಿಯ ಲಾರದೆಂಬಂತಾಯಿತು."

“ ಅರ್ಥಾತ್, ಹಾಗೇ ಸರಿ. ಮನುಷ್ಯನ ನಡವಳಿಕೆಯೊಡನೆ ಹೊಂದಿಕೊಳ್ಳಲಾರದ ಸಂಸ್ಥೆಗಳ ವಿಷಯವಾಗಿ ತೀವ್ರವಾದ ಅಸಮಾಧಾನವು ಉತ್ಪನ್ನನಾಗುವದು. ಮತ್ತು ಆದರಿಂದಲೇ ಅವು ನಾಶಹೊಂದುವವು.”

“ಆದರೆ ವಿರಾಗ, ನನಗೊಂದು ಸಂಶಯ — ಪ್ರತಿಯೊಂದು ತಲೆಮಾರಿನವರೂ ಈ ಪ್ರಶ್ನೆಗಳನ್ನು ಬಿಡಿಸುವದಕ್ಕೆಂದು ಒಂದೇ ಸವನೆ ಪ್ರಯತ್ನಪಡುವರು, ಹೊಸ ಕಲ್ಪನೆಗಳನ್ನು ಹರಡುವರು, ಹೊಸ ರೀತಿಗಳನ್ನು ಪ್ರಸ್ತಾಪಿಸುವರು. ಹೀಗಿರುವಲ್ಲಿ ಸಂಪೂರ್ಣವಾದ ಸಮಾಧಾನ ದೊರೆಯುವದೆಂದಿಗೆ, ಅಂತಹ ಸಮಾಜದ ರಚನೆಯಾದರೂ ಎಂಥದು ಮತ್ತು ಅದು ಬರುವದಾದರೂ ಎಂದಿಗೆ ? ”

“ ವರ್ತುಲದ ಪರಘದ ಆದಿ ಮತ್ತು ಅಂತಗಳನ್ನು ತೋರಿಸಲು ಬಾರದು. ಅಂತೆಯೇ ಈ ಅಸಮಾಧಾನದ ಮಾತೂ ಆಗಿದೆ. ಅದೆಂದಿಗೂ ಮುಗಿಯುವದೇ ಇಲ್ಲ. ಯಾರೋ ಅಂದಿದ್ದಾರಲ್ಲ — ಮಹಾಕವಿ ತಾಂಬೆಯವರೆಂಬಂತೆ ಕಾಣುತ್ತದೆ. “ ಮರಣದ ಚಪ್ಪರದಡಿಯಲ್ಲಿಯೇ ಈ ನಮ್ಮ ಬಾಳುವೆಯ ಮದುವೆಯಾಟದ ಸಂಭ್ರಮ ಸಾಗಿದೆ ನಿಜವಾಗಿಯೂ ” ನನಗೆನಿಸುತ್ತದೆ ಅದು ಈ “ ಅಸಮಾಧಾನದ ಚಪ್ಪರದಡಿಯಲ್ಲಿ ” ನಡೆದಿದೆಯೆಂದು.”

“ ಹಾಗಾದರೆ ಇದೆಲ್ಲದರ ಕೊನೆಯಾವದು ? ”

“ ಅಬ್ಬಬ್ಬಾ, ಈ ಪ್ರಶ್ನೆಯ ಉತ್ತರ ಕೊಡಲಿಕ್ಕೆ ನಾನೇನೂ ಮಹಾತತ್ವಜ್ಞಾನಿಯಲ್ಲ. ಅದೆಲ್ಲ ಹೋಗಲಿ ಬಿಡಿರಿ. ಬಹಳೇ ಮಾತನಾಡಿದೆವೆಂದು ಕಾಣುತ್ತದೆ ಇಷ್ಟೊತ್ತು. ಆದರೆ ಅಚಲಾಬಾಯೀ, ಇಷ್ಟು ಮಾತ್ರ ಸತ್ಯವಾದದ್ದು, ನೀವು ಆ ಹೆಣೆಯುವ ಗೋಪನ್ನು ನೋಡಿದ್ದೀರಲ್ಲವೆ ? — ಹೆಣೆಯುವದು, ಮತ್ತೆ ಎಲ್ಲ ಉಚ್ಚಿಬಿಡುವದು. ಈ ಮನುಷ್ಯ ಪ್ರಾಣಿಯಾದರೂ ಹಾಗೆಯೇ ಮಾಡುತ್ತಾನೆಂದು ನನಗೆನಿಸುತ್ತದೆ.”

“ ಎಂದರೆ ? ”

“ ಅಂದರೆ ನೋಡಿರಿ. ಒಮ್ಮೆ ಮನುಷ್ಯನು ತೀರ ಅನಿರ್ಬಂಧಿತವಾದ ಕಾಡು ಸ್ಥಿತಿಯಲ್ಲಿದ್ದ. ಆಗ ಅದರಿಂದ ಅವನಲ್ಲಿ ಅಸಮಾಧಾನವುಂಟಾಗಲು ತನ್ನ ಸಮಾಧಾನಕ್ಕೆಂದು ಅವನು ಬಂಧನಗಳನ್ನು ನಿರ್ಮಿಸಿದ.

ಬಂಧನಗಳ ಈ ಗೋಪನ್ನು ಹೆಣೆದಾಗುವಷ್ಟರಲ್ಲಿಯೇ ಅದರಿಂದ ತನಗೆ ಸಮಾಧಾನವುಂಟಾಗದೆಂದೆನಿಸಿದಕೂಡಲೆ ಅವನು ಅದನ್ನು ಬಿಚ್ಚುವುದಕ್ಕೆ ಪ್ರಾರಂಭಿಸಿದ. ಎಂತಹ ಸುಂದರವಾದ ಉಪಮೆ ಕೊಟ್ಟಿದ್ದೇನೆಯಲ್ಲವೆ?" ವಿರಾಗ ಚೇಷ್ಟೆಯಿಂದ ನುಕ್ಕು ನುಡಿದ.

"ಅಂಥದೇನಿಲ್ಲಿ. ಬಹಳಷ್ಟು ಸುಂದರವಾದುದೇನಿಲ್ಲ, ಬಿಡಿರಿ."

"ಆದರೆ ನಾನು ಹೇಳುವುದಾದರೂ ಸರಿಯಾದುದಹುದೋ ಅಲ್ಲವೋ? —ಸಮಾಜ ಸುಧಾರಣೆಯ ಕೆಲಸವೆಂದರೆ ಅದೊಂದು ಈ ಗೋಪು ಹೆಣೆದು ಉಚ್ಚಿಬಿಡುವ ಆಟವಿದ್ದಂತೆ."

"ಏನು ಸುಡಗಾಡೋ ಏನೋ, ನನ್ನ ತಾಯಿ."

"ಹೋಗಲಿ ಬಿಡಿರಿ ಹಾಗಾದರೆ ನಿಮಗೆ ಬೇಸರ ಬಂದಿದೆ ಅಥವಾ ನನ್ನ ಅಭಿಪ್ರಾಯವಾದರೂ ನಿಮಗೆ ಸಮ್ಮತವಿಲ್ಲ"

"ಹಾಗಲ್ಲರೀ, ಅತ್ಯಂತ ಅಸಮಾಧಾನಿಯಾದ ಮನುಷ್ಯನು ಇಂಥ ಸ್ಥಿತಿಯಲ್ಲಿ ಮಾಡಬೇಕಾದರೂ ಏನು ಎಂದು ನಾನು ವಿಚಾರ ಮಾಡುತ್ತಲಿದ್ದೆ."

"ಹೋ, ನಾನು ಹೇಳುತ್ತೇನೆ ಕೇಳಿರಿ. ಅಸಮಾಧಾನವಂತೂ ಎಲ್ಲರಿಗೂ ಇದ್ದೇ ಇರುತ್ತದೆ. ಆದರೆ ಅನೇಕರಿಗೆ ರೂಢಿಯಿಂದಲೇ ಅಸಮಾಧಾನವನ್ನು ಅಂತಹ ತೊಂದರೆಯೆನಿಸುವದಿಲ್ಲ. ಆದರೆ ಬೇರೆ ಕೆಲವರುಂಟು —ಇಂಥವರು ತೀರ ಸ್ವಲ್ಪ ಜನ ಮಾತ್ರ—ಅವರಿಗೆ ಅಸಮಾಧಾನವು ಒಂದು ನಿರಂತರವಾದ ಶಲ್ಯವಾಗಿ ಚುಚ್ಚುತ್ತದೆ. ಮತ್ತು ಇಂಥವರೇ ಸುಧಾರಕರಾಗುತ್ತಾರೆ. ಅವರೇ ಈಗಿದ್ದ ಬಂಧನಗಳ ಕೆಲಸಗೇಡಿತನವನ್ನು ತೋರಿಸಿಕೊಡುತ್ತಾರೆ. ಇಲ್ಲವೇ ಹೊಸ ಬಂಧನಗಳ ಅವಶ್ಯಕತೆಯನ್ನು ಸ್ಪಷ್ಟಪಡಿಸುತ್ತಾರೆ. ಯಾಕೆ ನಿಮಗೇನಾದರೂ ಸಮಾಜಸುಧಾರಕರಾಗಬೇಕಾಗಿದೆಯೋ ಏನೋ?"

ವಿರಾಗನೇನೋ ಸಹಜವಾಗಿಯೇ ನುಡಿದಿದ್ದ. ಆದರೆ ಅವನು ತೀರ ಅವಳ ಅಂತರಂಗದಲ್ಲಿ ನೆಲೆಸಿದ್ದ ಮಾತಿಗೆ ಕೈಹಾಕಿ ಬಿಟ್ಟಿದ್ದನಾದ್ದರಿಂದ ಅಚಲೆ ಬೆಚ್ಚಿದಳು.

"ಆಹಾ, ಆಗಿಹೋಯಿತು! ನಾನೆಂತಹಳಾಗುವದು! ಹೀಗೆಯೇ

ಸಾಮಾನ್ಯ ಜನರಂತೆ ದಿನದಿನವೂ ಅಸಮಾಧಾನದಲ್ಲಿಯೇ ನವೆದು ನವೆದು ಕೊನೆಗೊಂದು ದಿನ ಸತ್ತುಹೋಗುವದೇ ಜನ್ಮ."

ಅವಳ ಮಾತಿನ ರೀತಿಯು ವಿರಾಗನಿಗೆ ಒಮ್ಮೆಲೆ ಹೊಳೆಯಿತು. ಇಲ್ಲಿಯವರೆಗೆ ನಡೆದಿದ್ದ ಮಾತುಗಳನ್ನೆಲ್ಲವನ್ನೂ ಅವಳು ತನ್ನ ಪರಿಸ್ಥಿತಿಗೇ ಹೊಂದಿಸಿ ನೋಡಿಕೊಳ್ಳುತ್ತಿದ್ದಳೆಂಬುದು ಅವನಿಗೆ ಸ್ಪಷ್ಟವಾಯಿತು. ಹಿಡಿದಿದ್ದ ಕಾಗದದ ತುಂಡೊಂದನ್ನು ಹರಿದು ಸಣ್ಣ ಸಣ್ಣ ಚೂರುಗಳನ್ನಾಗಿ ಮಾಡುವ ಕೆಲಸದಲ್ಲಿ ತೊಡಗಿಹೋಗಿದ್ದ ಅವಳು ಅಂತರ್ಮುಖಳಾಗಿ ತನ್ನನ್ನು ತಾನೇ ಪರೀಕ್ಷಿಸತೊಡಗಿದಳು. ಅವನು ಅವಳ ಹೃದಯದ ಆಳವನ್ನು ಅಳೆಯಲಾರಂಭಿಸಿದ್ದ.

"ಅಚಲಾಬಾಯಿ, ನಿಮಗೆ ಕಾರ್ಲಾಯಿಲನ ಆ ವಾಕ್ಯ ಗೊತ್ತಿದೆಯಲ್ಲವೆ?"

"ಯಾವದು?"

"Mans' unhappiness comes of his greatness It is because there is an infinite in him which with all his cunning he cannot quite bury under the finite.

(ಮನುಷ್ಯನ ಅಸುಖ-ಸಮಾಧಾನಗಳು ಅವನ ಮಾನಸಿಕ ಉನ್ನತಿಯಿಂದಾಗಿಯೇ ನಿರ್ಮಿತವಾಗಿವೆ. ಮೇಲೆ ಕಾಣುವ ಅವನ ಮರ್ಯಾದಿತ ವ್ಯಕ್ತಿ ವಿಶೇಷದಲ್ಲದ್ದುಕೊಂಡೇ ಅವೆಲ್ಲವನ್ನೂ ಮೀರಿ ನಿಂತಿರುವ, ಅವನೆಲ್ಲ ಸಂಕುಚಿತ ಭಾವಗಳನ್ನೂ ಮೆಟ್ಟಿ ನಿಂತಿರುವ ಅನಂತ ತತ್ವವೊಂದರ ಉನ್ಮುಖತೆಯೇ ಅದಕ್ಕೆ ಕಾರಣವಾಗಿದೆ.)

"ವಿರಾಗ, ಜಗತ್ತಿನೊಳಗೆ ರೂಢವಾಗಿರುವ ಎಲ್ಲ ಸಾಮಾಜಿಕ ಬಂಧನಗಳೂ ಯಾವಾಗಲೂ ಹಿತಕಾರಿಯಾಗುಳಿಯಲಾರವು. ಕಾಲಪರಿಸ್ಥಿತಿಗಳಿಗೆ ತಕ್ಕಂತೆ ಅವುಗಳ ಒಳಿತು ಕೆಡಕುಗಳು ನಿರ್ಣಯಿಸಲ್ಪಡುತ್ತವೆ. ಎಂದ ಮೇಲೆ ನಮಗುಂಟಾದ ಅಸಮಾಧಾನವನ್ನು ತೊಡೆದುಹಾಕುವದಕ್ಕೆಂದು ಮುಂದಿನ ಹೆಜ್ಜೆ ಇಡುವದೆಂದರೂ ಅದನ್ನು ಎಲ್ಲಿಡಬೇಕೆಂಬ ಪ್ರಶ್ನೆ ಏಳುವದಿಲ್ಲ?"

"ಅಸಮಾಧಾನೆಂದಿಗೂ ಪೂರ್ಣವಾಗಿ ಇಲ್ಲದಾಗುವ ವಿಷಯವೇ

ಅಲ್ಲ. ಕರಿಕೆಯ ಬೇರನ್ನು ಎಷ್ಟು ಕಿತ್ತು ತಿಂದರೂ ಅದು ಮತ್ತೆಲ್ಲಿಯಾದರೂ ಕಾಣಿಸಿಕೊಳ್ಳದೆ ಇರುವದಿಲ್ಲ. ಹಾಗೆ ವಿಚಾರಗಳ ಧಾರೆಯಿಂದ ಅಸಮಾಧಾನವನ್ನು ಕಡಿದೊಗೆದರೂ ಅದು ನಿತ್ಯವಾಗಿಯೂ ಮೊಳೆಯುತಕ್ಕದ್ದೇ. ಆದ್ದರಿಂದ ಏನಾದರೂ ಮಾಡಲೇಬೇಕಿದ್ದಲ್ಲಿ ಮೊದಲಿಗಿಂತ ಕಡಿಮೆ ಅಸಮಾಧಾನವಾಗುವಂತಹ ದಾರಿಯನ್ನೇ ಹುಡುಕಬೇಕಾಗುವದು."

"ಆದರೆ ಈ ದಾರಿಯನ್ನಾದರೂ ಕಂಡು ಹಿಡಿಯಲು Reasoning power ಬೇಕಲ್ಲ. ನಿಜವಾಗಿಯೆಂದರೆ ಈ Reason ಎನ್ನುವದಾದರೂ ಏನೆಂಬುದೇ ನನಗೆ ತಿಳಿಯದ ಮಾತಾಗಿದೆ. ಯಾಕಂದರೆ ಸಾರಾಸಾರ ವಿವೇಕವೆಂಬ ಮಾತೇನೋ ಉಂಟು, ಆದರೆ ಈ ವಿವೇಕ ಮಾಡುವವರಲ್ಲಿ ನಿಜವಾದ ಯೋಗ್ಯತೆ ಇಲ್ಲದಲ್ಲಿ ಅವನ ಸಾರಾಸಾರ ವಿವೇಕವು ಅವಿವೇಕವಾಗಿಯೇ ಮಾರ್ಪಡುವದಲ್ಲವೆ ?"

"ಹೌದು. ನಿಮಗೆ ಮೋಜೆನಿಸಬಹುದು ನೋಡಿರಿ. ಬರ್ನಾರ್ಡ ಷಾ ಮಹಾಶಯನೂ ಕೂಡ ಒಂದು ಕಡೆಗೆ ಹೇಳಿದ್ದಾನೆ. 'The man who listens to reason is lost. Reason enslaves all whose minds are not strong enough to master her' (ಸಾರಾಸಾರ ವಿವೇಕದಿಂದಲೇ ನಡೆಯುವ ಹುಚ್ಚಿಗೆ ಹುಬ್ಬುಬಿದ್ದ ಮನುಷ್ಯನು ಕೆಲಸಕ್ಕೆ ಬಾರದಂತೆಯೇ ಸರಿ. ಸಾರಾಸಾರ ವಿವೇಕದಿಂದಲೇ ಎಲ್ಲ ವಿಷಯಗಳನ್ನು ತಿಳಿಯುವ ಸಮರ್ಥಕ ಮನುಷ್ಯನ ಮನಸ್ಸಿಗೆ ಕ್ವಚಿತ್ತಾಗಿಯೇ ಇರುವದುಂಟು. ಯಾಕೆಂದರೆ ಸ್ವಂತದ ಮೂಲಪ್ರವೃತ್ತಿಗಳೂ, ಆಶೆ ಆಕಾಂಕ್ಷೆಗಳೂ ಮನುಷ್ಯನ ವಿಚಾರ ಶಕ್ತಿಯನ್ನೆಂದಿಗೂ ಸಂಪೂರ್ಣ ಸ್ವತಂತ್ರವಾಗಿರಗೊಡುವದಿಲ್ಲ.)

"ಈ ಸಾರಾಸಾರ ವಿವೇಕವೆಂಬುದು ಭಾವನೆ, ಇಚ್ಛೆ, ವಿಕಾರಗಳಿಂದ ಕಲುಷಿತವಾದುದೇ ಇರುವದಾದಲ್ಲಿ ಮುಂದೇನು ?"

"ವಿವೇಕಬುದ್ಧಿಯ ಮೇಲೆ ವಿಕಾರಗಳ ಛಾಯೆ ಬೀಳುವದಾದರೂ, ಸುದೃಢವಾದ ಮನಸ್ಸು ಯಾವಾಗಲೂ ಆ ವಿಕಾರ, ಭಾವನೆ ಮತ್ತು ಇಚ್ಛೆಗಳಿಗೆ ಮಾರ್ಗದರ್ಶಕ ಆಗಿರುತ್ತದೆ."

"ಹಾಗಾದರೆ ಈ ಮಾರ್ಗವಾದರೂ ಯಾವದು ? ಎಲ್ಲಿಗೆ ಹೋಗುವದು ? ಜೀವನದ ಧ್ಯೇಯವೇನು ?"

"ತತ್ವಜ್ಞಾನಿಗಳ ಮತದಂತೆ ಆತ್ಮಪ್ರತೀತಿಯೇ ಜೀವಿತದ ಧ್ಯೇಯವಾದ್ದರಿಂದ ಮನುಷ್ಯನು ಪೂರ್ಣತೆಯನ್ನು ದೊರಕಿಸಲು ಪ್ರಯತ್ನಿಸಬೇಕು."

ಅಚಲೆಗೆ ನಗು ಬಂದಿತು.

"ಯಾಕೆ, ನಗುತ್ತೀರಿ?"

"ಅಂಥದೇನಿಲ್ಲ. ಆದರೆ ಇದೆಲ್ಲ ಒಡೆಯಲಾರದ ಒಗಟವಾಗಿದೆಯೆಂಬುದನ್ನು ನೋಡಿ ನಗೆ ಬಂದಿತು ಅಷ್ಟೇ."

## ೨೦

ಮೇಲೆ ಮಾತ್ರ ಬಿರುಸು ಕಲ್ಲುಗಳಿಂದಾದ ಪೃಷ್ಠಭಾಗವುಳ್ಳ ಭೂಮಿಯ ಒಡಲಿನ ಆಳದಲ್ಲಿರುವ ಗುಪ್ತವಾದ ಜೀವಂತ ನೀರಿನ ಸೆಲೆಯನ್ನು ಜಲಶೋಧಕನು ಕೇವಲ ಭೂಮಿಗೆ ಕಿವಿಯಿಟ್ಟು ಕೇಳಿ ತಿಳಿಯಬಲ್ಲನು. ಅದರಂತೆಯೇ ಅಚಲೆಯ ಕಠೋರವಾದ ನಡತೆಯ ಅಂತರ್ಯದಲ್ಲಿ ಗುಪ್ತವಾಗಿ ಪ್ರವಹಿಸುತ್ತಿದ್ದ ಭಾವನೆಯ ಗಂಗೆಯು ಒಂದೇ ಒಂದು ವ್ಯಕ್ತಿಯ ಕಣ್ಣಿಗೆ ಕಾಣಬಲ್ಲದಾಗಿತ್ತು.

ತನ್ನವರೆನಿಸಿಕೊಂಡಿದ್ದ ಎಲ್ಲರ ಸಹಾನುಭೂತಿಯನ್ನೂ ಬಲ್ಲದೆ ಕಿತ್ತು ಬಿಸುಟಿ ಕೇವಲ ತನ್ನ ಸ್ವಂತದ ಕರ್ತೃತ್ವ ಶಕ್ತಿಯ ಜೋರಿನ ಮೇಲೆಯೇ ಬಾಳುವೆ ಮಾಡಲೆಳಸಿದ್ದ ಅಚಲೆಯು ತನ್ನ ಬುದ್ಧಿಯ ಆನೆಗಾಲುಗಳಿಂದ ತನ್ನ ಹೃದಯವನ್ನು ತುಳಿದೆಗೆಯುವ ಕಾರ್ಯದಲ್ಲಿ ಉದ್ಯುಕ್ತಳಾಗಿದ್ದಳು. ಅದರಲ್ಲಿ ತಾನು ಯಶಸ್ವಿಯಾಗಿದ್ದೇನೆಂಬ ಆಸುರೀ ಆನಂದವೊಂದನ್ನು ಅವಳು ತನ್ನ ನಡೆನುಡಿಗಳಲ್ಲಿ ತೋರ್ಪಡಿಸುತ್ತಿದ್ದಳಾದರೂ, ಅವಳ ಹೃದಯದ ಸ್ನಿಗ್ಧಕೋಮಲತೆಯಿನ್ನೂ ಜೀವಂತವಾಗಿಯೇ ಇದ್ದಿತು. ಅಷ್ಟೇ ಅಲ್ಲ ಅದರ ಭಾವೋನ್ಮಾದದ ತನ್ಮಯತೆಯಲ್ಲಿ ಅವಳ ತೀಕ್ಷ್ಣವಾದ, ಸದಾ ಜಾಗೃತವಾದ ಬುದ್ಧಿಶಕ್ತಿಗೆ ಗುಂಗು ಹಿಡಿಯುತ್ತಿತ್ತು. ಅದೆಲ್ಲ ಕಣ್ಣುಗಳನ್ನು ತೆರೆದಿಟ್ಟುಕೊಂಡೇ ಅಚಲೆಯು ಸ್ವಪ್ನದ ನಾಡಿನಲ್ಲಿ ವಿರಮಿಸುತ್ತಿದ್ದಳು. ಕಿವಿಯನ್ನು ತೆರೆದೇ ಇಟ್ಟಿದ್ದರೂ ಅವಳಿಗೇನೂ ಕೇಳಿಸುತ್ತಿರಲಿಲ್ಲ. ಅತೀಂದ್ರಿಯವಾದ ವಾಣಿಯೊಂದು ಅವಳ ನರನರಗಳನ್ನೆಲ್ಲ ವ್ಯಾಪಿಸಿ ತನ್ನ ಸುಮಧುರ ನಾದದಿಂದ ಅವನ್ನೆಲ್ಲ ಅನುರಣಿತವನ್ನಾಗಿಸಿ ಅವಳನ್ನು ಪರವಶಳನ್ನಾಗಿಸು

ತ್ತಿತ್ತು. "ಆಯಿತೇ. ಎಲ್ಲ ಮಾಡಿದೆಯಾ ಎಲ್ಲರಿಗಾಗಿ ಮಾಡಿದೆಯಾ. ಆದರೂ ಇದು ಕೂಡ ಸರ್ವಸ್ವದ ದಾನವನ, ಅದಿಲ್ಲದೆ ಜೀವಿತದ ಸಾರ್ಥಕತೆಯಿಲ್ಲ." ಆ ವಾಣಿ ಹೆಚ್ಚು ಹೆಚ್ಚು ಪ್ರತಿಧ್ವನಿತವಾಗುತ್ತ ನಡೆಯುತ್ತಿತ್ತು. ಅಚಲೆ ಹೆರವರಿಗಾಗಿ ಬೇಕಾದ ಕಷ್ಟಗಳನ್ನೆದರಿಸುತ್ತಿದ್ದಳು. ಆದವಳ ಸ್ವಭಾವವೇ ಆಗಿಬಿಟ್ಟಿತು ಯಾರಿಗೆ ಬೇಕಾದವರಿಗೆ ಬೇಕಾದ ಸಹಾಯವನ್ನು ತನ್ನ ಕೈ ಸಾಗುವವರೆಗೂ ಅವಳು ಮಾಡುತ್ತಿದ್ದಳು. ಆದರೆ ಆತ್ಮದಾನದ ಅಮರ ಸಾಫಲ್ಯವಿನ್ನೂ ಅವಳಿಂದ ದೂರವಾಗಿಯೇ ಇರುವಂತೆನ್ನಿಸುತ್ತಿತ್ತು. ಅವಳು ಅದನ್ನೆಷ್ಟೇ ದುರ್ಲಕ್ಷಿಸಲು ಹವಣಿಸುತ್ತಿದ್ದರೂ ಅವಳಿಗೆ ತಿಳಿಯದಂತೆಯೇ ಅವಳ ಹೃದಯದ ಬೇಗೆಯು ಅಶ್ರುರೂಪವಾಗಿ ಪ್ರವಹಿಸುತ್ತಿತ್ತು. ಆದರೆ ಆ ಕಣ್ಣೀರು ಯಾರ ದೃಷ್ಟಿಗೂ ಬೀಳುತ್ತಿರಲಿಲ್ಲ. ತನ್ನ ಕಂಬನಿಗಳಿಂದ ತನ್ನ ಮನದ ದುರ್ಬಲತೆಯನ್ನು ಇತರರಿಗೆ ಎಳ್ಳಷ್ಟೂ ತಿಳಿಯಗೊಡದಿರುವ ಅಭಿಮಾನವು ಅಚಲೆಯಲ್ಲಿ ಯಾವಾಗಲೂ ಇದ್ದಿತು.

ತನ್ನಂತೆಯೇ ಇದ್ದ ಇತರ ಸ್ತ್ರೀಯರನೇಕರ ಹರಿವ ಕಣ್ಣೀರನ್ನು ಕಂಡು ಹಳಹಳಿಸುವ ಜಗತ್ತಿನ ರೀತಿಯನ್ನವಳು ಬಲ್ಲವಳಾಗಿದ್ದಳು. ಅಂತಹ ಕೃತಕೃತ್ಯತೆಯ ಸಮಾಧಾನಸುಖವನ್ನವಳು ಜಗತ್ತಿಗೆ ಒದಗಿಸಿಕೊಡಲು ಸಿದ್ಧಳಾಗಿರಲಿಲ್ಲ. ಅಸಹಾಯರಾದ ಸ್ತ್ರೀಯರ ಅಳಲನ್ನು ಕಂಡು ಜನರು ತೋರಿಸುವ ಪೊಳ್ಳು ಮರುಕವು ಅವರ ದುಃಖದ ಗಾಯದ ಮೇಲೆ ಉಪ್ಪು ಸುರಿದಂತೆ ಇನ್ನೂ ಹೆಚ್ಚಿನ ವೇದನೆಯನ್ನುಂಟುಮಾಡುತ್ತದೆ. ಇಂಥ ಸ್ತ್ರೀಯರ ಕಂಬನಿಗಳು ಕಲ್ಲಿನ ಮೇಲೆ ಬೀಳುವ ನೀರಿನ ಹನಿಗಳಂತೆ ಕ್ಷಣಮಾತ್ರವೇ ಜನರ ಹೃದಯವನ್ನು ತೋಯಿಸಿ ಆರಿಹೋಗುವವು. "ಸಹಾನುಭೂತಿ"ಯ ಹೆಸರಿನಿಂದ ಅದೆಷ್ಟೇ ಗುಲ್ಲೆಬ್ಬಿಸಿದರೂ ಅದರ ಸ್ವರೂಪವು ಬಹುತರವಾಗಿ ಇಂತಹ ಗಿಲೀಟಿನದೇ ಸರಿ. ಗಂಡಸಿನ ಸಹಾನುಭೂತಿಯೆಂಬುದು ಅನೇಕ ಸಲ ಸ್ವಾರ್ಥಮೂಲವಾದುದಾದರೆ, ಸ್ತ್ರೀಯರದು ಮತ್ಸರಪೂರ್ಣವಾಗಿರುವದುಂಟು! ನಿಜವಾದ ಸಹೃದಯತೆಯುಳ್ಳವರೆಷ್ಟು ಮಂದಿ? ಮಾನವೀ ಸಂಕೇತಗಳ ವ್ಯರ್ಥತೆಯನ್ನು ಅರಿತು ಕೂಡ ನೀವು ಅವುಗಳನ್ನು ಅತಿಕ್ರಮಿಸದೆ ದುಃಖಭೋಗಿಸುತ್ತಿದ್ದರೆ ಮಾತ್ರ ನಿಮ್ಮ ವಿಷಯವಾಗಿ ಜನರ ಸಹಾನುಭೂತಿಯುಳಿದೀತು. ಆದರೆ ಆ ಅರ್ಥಹೀನವಾದ

ಬಂಧನಗಳ ವಿಫಲತೆಯನ್ನರಿತುಕೊಂಡು ಆ ಸಂಕೋಲೆಗಳನ್ನು ಕಡಿದೊಗೆದು, ಧೈರ್ಯವಾಗಿ ನಿಮ್ಮ ಬುದ್ಧಿಯ ಬೆಳಕಿನಲ್ಲಿ ಮುನ್ನಡೆವ ಪ್ರಯತ್ನದಲ್ಲಿಯೂ ನೀವು ಸಾಮಾಜಿಕರ ಸಹಾನುಭೂತಿಯನ್ನಪೇಕ್ಷಿಸಿದಲ್ಲಿ, ಹೊಸತಾಗಿ ಕುದುರೆಯೇರುವದನ್ನು ಕಲಿತ ಸವಾರನನ್ನು ಚಪಲಾಶ್ವವೊಂದು ತೂರಿ ಒಗೆಯುವಂತೆಯೇ ಸಮಾಜವು ನಿಮ್ಮನ್ನು ವಿಪನ್ನಾವಸ್ಥೆಗೆ ಗುರಿಮಾಡದಿರದು. ಅಚಲೆಗೆ ಆ ಅಸಮಂಜಸವಾದ ಬಂಧನಗಳ ದಾಸ್ಯದಲ್ಲಿದ್ದುಕೊಂಡೇ ಅವರ ಒಣಮಾತಿನ ಸಹಾನುಭೂತಿಯನ್ನು ಪಡೆಯುವದು ಬೇಡವಾಗಿದ್ದಿತು. "ಬಂಧನಗಳ ಚೌಕಟ್ಟಿನಲ್ಲಿಯೇ ವಾಸಿಸುವದಾದಲ್ಲಿ ಯಾರ ಆಶ್ರಯವೂ ಇಲ್ಲದೆ ಸ್ವತಂತ್ರದಾಗಿ ಇದ್ದೇನು. ಇಲ್ಲವಾದರೆ ಈ ಬಂಧನದ ಬೇಡಿಗಳನ್ನು ಕಗೆದೊಗೆದು, ಅರ್ಥಶೂನ್ಯವಾದ ಸಂಕೇತಗಳನ್ನು ಕಾಲಿನಿಂದೊಗೆದು ಇಡೀ ಜಗತ್ತಿನೊಡನೆಯೇ ಶತ್ರುತ್ವವನ್ನು ಕಟ್ಟಿಕೊಂಡಾದರೂ ನನ್ನ ಸುಖವನ್ನು ನಾನು ದೊರಕಿಸದಿರಲಾರೆ." ಇದೇ ಅವಳ ಪ್ರತಿಜ್ಞೆಯಾಗಿತ್ತು. ಇಂಥ ಪಣ ತೊಟ್ಟು ತನ್ನ ಜೀವನವನ್ನು ಸಾಗಿಸಿದ ಅವಳ ನಿಜವಾದ ಪರಿಚಯವು ಅವಳ ಆ ಮರ್ಯಾದಿತವಾದ ವಿಶ್ವದಲ್ಲಿ ಯಾರಿಗೂ ಇರಲಿಲ್ಲ. ಅಚಲೆಯ ಸ್ವಭಾವವೆಂತಹದು? ದುಃಖದ ಸ್ಪರ್ಶವೂ ಇಲ್ಲದ ನಿರ್ಭಯರಾದ ಚಿಕ್ಕಮಕ್ಕಳ ಎಳೆಮುಖಗಳ ಮೇಲೆ ಸೂಸುವ ನಿಷ್ಕಪಟವಾದ ಸುಹಾಸ್ಯವೊಂದು ಅವಳ ಮುಖವನ್ನು ಯಾವಾಗಲೂ ವ್ಯಾಪಿಸಿರುವದು. ಅವಳಿಗದು ಚೆನ್ನಾಗಿ ಸಾಧಿಸಿತ್ತು. ದೊಡ್ಡವರಿಂದ ಆದಷ್ಟು ಮಟ್ಟಿಗೆ ದೂರವಾಗಿದ್ದುಕೊಂಡು ಚಿಕ್ಕಮಕ್ಕಳಲ್ಲಿಯೇ ಬೆರೆತುಹೋಗಿರುತ್ತಿದ್ದ ಅಚಲೆಯ ತಪ್ತಹೃದಯದ ಅಂತರಿಕ ಜ್ವಾಲೆಯನ್ನು ಯಾರೂ ಕಂಡಿರಲಿಲ್ಲ. ಪರಸ್ಪರರು ತಮ್ಮ ತಮ್ಮ ಸುಖದುಃಖಗಳನ್ನು ಮತ್ತೊಬ್ಬರಲ್ಲಿ ತೋಡಿಕೊಳ್ಳುವದರಿಂದಲೇ ಗೆಳೆತನದ ಬೀಜ ಮೊಳೆತು ಮರವಾಗುವದುಂಟು. ಅಚಲೆ ತನ್ನ ಗೆಳತಿಯರ ಸಂಗಡ ತಿರುಗಾಡಲು ಹೋಗಿರುವಾಗಲೆಲ್ಲ ಅವರು ತಮ್ಮ ಚಿಕ್ಕಪುಟ್ಟ ಸುಖದುಃಖಗಳನ್ನು ದೊಡ್ಡದಾಗಿ ಮಾಡಿ ಅವಳಲ್ಲಿ ಬಿತ್ತರಿಸುತ್ತಿದ್ದರು. ಅವಳು ಅವರೆಲ್ಲರಿಗೂ ಒಂದು ವಿಶ್ವಾಸಸ್ಥಾನವಾಗಿರುವಂತೆನಿಸುತ್ತಿದ್ದಿತು. ಆದರೆ ಅಚಲೆ? ಅವಳಿಗೆ ದುಃಖಗಳೇ ಇರಲಿಲ್ಲವೇನೋ! ಅವಳು ಯಾರಲ್ಲಿಯೂ ತನ್ನ ಹೃದಯವನ್ನು ಬಿಚ್ಚಿ ತೋರಿ

ಸುತ್ತಿರಲಿಲ್ಲ. ಅವಳ ಮನದ ಉಬ್ಬೆಗವೆಲ್ಲ ಹಿಡಿಸಲಾರದೆ ಹೊರಬರಲೆತ್ನಿಸು ವದು. ಆದರೆ ಅವಳು ಹೊರಗೆ ಅದನ್ನು ತೋರಗೊಡದೆ ಒಳಗೇ ಹತ್ತಿಟ್ಟು ವಿಶ್ರಬ್ಧವಾದ ನಗೆಯೊಂದನ್ನು ನಕ್ಕುಬಿಡುವಳು. ಇಂಥ ಪ್ರಸಂಗಗಳಲ್ಲಿ ಅವಳು ಒಮ್ಮೊಮ್ಮೆ ಹುಡುಗಾಟದ ಸೋಗುಮಾಡುವಳು. ಮತ್ತೊಮ್ಮೆ ನಿಷ್ಕಾರಣವಾಗಿ ಉದ್ಬುದ್ಧವಾದ ಸ್ವಪ್ನ ವರ್ಣನೆಗಳಲ್ಲಿ ತೊಡಗುವಳು. ಕೇಳುತ್ತಿರುವವರಿಗೆ ಇವಳಿಗೆ ದುಃಖವೆಂದರೇನೆಂಬುದರ ಕಲ್ಪನೆಯಾದರೂ ಇದೆಯೋ ಎನ್ನಿಸಬೇಕು! ಅವಳ ಈ ಸಂತುಷ್ಟವೃತ್ತಿಯನ್ನು ಕಂಡು ಯಾರಿಗಾದರೂ ಆಶ್ಚರ್ಯವೆನಿಸುವಂತೆಯೇ ಅವಳ ನಡತೆಯಿದ್ದಿತು. ಅವಳ ಗೆಳತಿಯರು ಒಮ್ಮೊಮ್ಮೆ ಅವಳನ್ನು ಕೆದರಿ ಕೆದರಿ ಪ್ರಶ್ನಿಸುವರು: "ನಿಜವಾಗಿಯೂ, ಅಚಲಾ, ನಿನಗೆ ಜೀವನ ಬಹಳ ಬೇಸರ ಬರುತ್ತಿರ ಬಹುದಲ್ಲವೆ?" ಅಚಲೆ ಅಂಥ ಮಾತನ್ನು ಕೇಳಿ ನಕ್ಕುಬಿಡುವಳು. "ಬೇಸರ? ಅದೇತಕ್ಕಾಗಿ? ಸಂಸಾರದಲ್ಲಿಯೇ ಸರ್ವ ಸುಖವಡಗಿದೆಯೆಂದು ನಂಬುವದಾದರೂ ಹೇಗೆ? ಹಾಗೆ ನೋಡಿದರೆ ಅದರಲ್ಲಿ ತೊಂದರೆಯೇ ಹೆಚ್ಚೆಂದು ತೋರುತ್ತದೆ. ನಾನು ಸಂಸಾರಿಯಾಗಿದ್ದುದಾದರೆ ನನ್ನ ಪತಿ ಮತ್ತು ಮಕ್ಕಳ ಸೇವೆಯನ್ನಷ್ಟೇ ನಾನು ಮಾಡಬಹುದಾಗಿತ್ತು. ಆದರೆ ಈಗ ನಿಮ್ಮಂತಹ ಪ್ರೇಮಮೂರ್ತಿಗಳಾದ ಗೆಳತಿಯರ ಮತ್ತು ಶಾಲೆಯಲ್ಲಿರುವ ನೂರಾರು ಚಿಕ್ಕ ಜೀವಗಳನ್ನು ಬೆಳೆಯಿಸುವದರಿಂದ ನಾಡಿನ ಸೇವೆ ಮಾಡುವ ಸೌಭಾಗ್ಯ ನನಗೆ ದೊರೆಯಬಹುದಾಗಿತ್ತೇ........"

ಆದರೆ ಅದೆಲ್ಲ ಬಣ್ಣದ ಮಾತು. ಬಹುಕಷ್ಟದಿಂದ ಸಂಯಮಿಸಿದ್ದ ಹೃದಯದೊಳಗಿನ ಅಪಾರವಾದ ಅಳಲಿನ ಒಂದೇ ಒಂದಾದ ಕ್ರಂದನದ ಸ್ವರ ಕೂಡ ಇತರರಿಗೆ ಕೇಳದಂತೆ ನೋಡುವದರಲ್ಲಿ ಅಚಲೆ ತತ್ಪರಳಾಗಿರು ತ್ತಿದ್ದಳು. ಕೊನೆಗೊಮ್ಮೆ ದಿವಸ ಕಳೆದು ಸಂಜೆಯಾಗುವದು. ದಿನವೆಲ್ಲ ವಿಚಾರದ ಎಳೆಗಳಿಂದ ಕಟ್ಟಿ ಬಿಗಿದು ನಿಲ್ಲಿಸಿದ್ದ ಧೈರ್ಯವೆಲ್ಲ ಸಂಜೆಯಾಗು ತ್ತಲೇ ದಿನದ ಬೆಳಕಿನೊಡನೆ ಎಲ್ಲಿಯೋ ಇಲ್ಲವಾಗುವದು. ಶಾಲೆಯ ಕೆಲಸ ವನ್ನು ಮುಗಿಸಿ ಕಾಲೆಳೆಯುತ್ತ ಮನೆಗೆ ಬಂದನಂತರ ಅಚಲೆಯು ಮನಸ್ಸಿನ ಲಗಾಮು ಬಿಚ್ಚಿ ಅದನ್ನು ಪೂರ್ಣವಾಗಿ ಸಡಿಲು ಬಿಡುವಳು. ಆಗ ಅವಳ ರುಕ್ಷವಾದ ಜೀವನದ ಹೆದ್ದಾರಿಯುಗುಂಟು ಎರಡೂ ಮಗ್ಗಲು

ಗಳಲ್ಲಿ ಸುಂದರವಾದ ಹಸಿರು ಮುರಿಯುವ ಬನಗಳು ಕಾಣುವವು. ಅದರಲ್ಲಿ ಪಕ್ಷಿಗಳ ಮಧುರ ಕೂಜನ ಪ್ರತಿಧ್ವನಿಗೊಳ್ಳುವದು ಅವಳ ಹೃದಯವು, ಆ ಹೊಂಗನಸಿನ ಸುವರ್ಣಕಾಂತಿಯಲ್ಲಿ ಅವಳು ನಡೆದಂತೆಲ್ಲ ತುಂಬಿ ಬರುವದು. ಆದರೆ ಅವಳೆಲ್ಲ ದಿನದ ತುಂಬು ಹರುಷದ ನಟನೆಯ ತೆರೆಯನ್ನು ಓಸರಿಸಿ ಅವಳ ಗುಪ್ತವಾದ ಕೋಣೆಗನ್ನು ತೆರೆದು ತೋರುತ್ತಿದ್ದ, ಅವಳ ಮನದ ದುರ್ಬಲತೆಯು ಈ ಕೆಲವು ಕ್ಷಣಗಳು ಮಾತ್ರ ಹೆರವರ ಕಣ್ಣಿಗೆ ಬೀಳುತ್ತಿರಲಿಲ್ಲ.

೨೧

ದಿನದಿನವೂ ಮಾಡುತ್ತಲಿದ್ದ ಅದೇ ಕೆಲಸವನ್ನೇ ಮತ್ತೆ ಮಾಡಿ ಮುಗಿಸಿ ದಣಿದು, ಬೇಸತ್ತು ಅಚಲೆ ಮನೆಗೆ ಬಂದಳು. ಶೂನ್ಯಮನಸ್ಕ ಳಾಗಿ, ಎಷ್ಟೂ ಉತ್ಸಾಹವೆಂಬುದಿಲ್ಲದೆ ಮಾಡಿದ್ದನ್ನೇ ಮಾಡುತ್ತ ಯೋಗಿನಿ ಯಂತೆ ಜೀವದ ಜಪಮಾಲೆಯೊಳಗಿನ ಒಂದೊಂದೇ ದಿನಮಣಿಯನ್ನು ಎಣಿಸಲುಪಕ್ರಮಿಸಿದ್ದ ಅಚಲೆಯು ಅದೆಷ್ಟೋ ಹೊತ್ತು ನಿರ್ಹೇತುಕವಾಗಿ ಅತ್ತಿಂದಿತ್ತ ಮನೆಯಲ್ಲಿ ಅಡ್ಡಾಡುತ್ತಿದ್ದಳು. ಕೊನೆಗೆ ಬೇಸರ ಕಳೆಯುವದ ಕ್ಕೆಂದು ವಿರಾಗನಿಂದ ತರಿಸಿದ್ದ ಪುಸ್ತಕವನ್ನು ತೆರದಳು. ಆದರಲ್ಲಿ ಆ ಚಿತ್ರ ವನ್ನು ನೋಡಿದೊಡನೆ ಅವಳ ಇಷ್ಟೊತ್ತಿನ ನಿರುತ್ಸಾಹವು ಎಲ್ಲಿಂದೆಲ್ಲಿಯೋ ಅಡಗಿಹೋಯಿತು. ಅವಳು ಸ್ತಿಮಿತ ನಯನಳಾಗಿ ಆ ಚಿತ್ರದ ಕಡೆಗೆ ನೋಡಲಾರಂಭಿಸಿದಳು. ನೆಪೋಲಿಯನ್, ಮತ್ತು ಅವನ ತೊಡೆಯ ಮೇಲೆ ವಿಶ್ರಬ್ಧತೆಯಿಂದ ಪವಡಿಸಿದ್ದ ಆ ಕೂಸುಳೆಯೊಂದು! ಆ ಚಿತ್ರವು ನೋಡುಗನನ್ನು ಸ್ತಿಮಿತನನ್ನಾಗಿ ಮಾಡದಿತ್ತೆಂಬುದರಲ್ಲಿ ಸಂಶಯ ವಿರ ಲಿಲ್ಲ. ರಕ್ತದ ಕಾಲುವೆಗಳು ಹರಿದರೂ ಯಾವನ ಹೃದಯವು ಒಂದಿಷ್ಟೂ ಅಳುಕದೆ ಹೋಯಿತೋ, ಸಹಸ್ರಾರು ಮಾನವ ಪ್ರಾಣಿಗಳನ್ನು ಕ್ಷುದ್ರಕೀಟ ಗಳಂತೆ ಸಂಹರಿಸಿಬಿಡುವಾಗಲೂ ಯಾವನ ಮನಸ್ಸು ಒಂದು ಕ್ಷಣವಾದರೂ ಹಿಂದು ಮುಂದು ನೋಡಲಿಲ್ಲವೋ, ಅಂತಹ ಜಗಜ್ಜೇತೃತ್ವದ ಮದ ನೆತ್ತಿ ಗೇರಿದ ನೆಪೋಲಿಯನ್! ಪಾಷಾಣಸದೃಶ ಕಾಠಿಣ್ಯ! ಅಪ್ರತಿಮ ಸಾಹಸದ ಕಲ್ಲೆದೆ! ಇಂಥ ನೆಪೋಲಿಯನ್ನನ ತೊಡೆಯ ಮೇಲೆ ಮೈಚೆಳೆ ಬಿಟ್ಟು ಕಣ್ಣು ಮುಚ್ಚಿ ಮಲಗಿರುವ ಆ ಅಸಹಾಯ ಕೋಮಲ ಬಾಲಿಕೆ! ಸಿಂಹದ

ಹೆಗಲ ಮೇಲೆ ತನ್ನ ಗೋಣು ಚೆಲ್ಲಿ ಬಿದ್ದಿರುವ ಹರಿಣಿಯ ಎಳೆಯ ಮರಿಯೊಂದು! ಯಾರೇ ಆಗಲಿ ಆ ಚಿತ್ರವನ್ನೊಂದು ಕ್ಷಣ ದಿಟ್ಟಿಸಿ ನೋಡದಿರುತ್ತಿರಲಿಲ್ಲಿ. ಹೊರಗಿನ ಜಗತ್ತಿನ ಸ್ಥೂಲ ದೃಷ್ಟಿಗೆ ಬೀಳದೆ ಹೋಗಿದ್ದ ನೆಪೋಲಿಯನ್ನನ ಕಲ್ಲಿನಂತಹ ಹೃದಯದೊಳಗೆ ಸುಪ್ತವಾಗಿದ್ದ ಆ ಮನಸೆಳೆಯುವ ಮಧುರ ವತ್ಸಲತೆ! ಅದನ್ನು ಕೋಮಲ ಬಾಲಕಿಯ ರೂಪದಿಂದ ಕಲಾವಿದನು ಜಗದೆದುರಿಗೆ ತೆರೆದು ಹಿಡಿದಿದ್ದ.

ಕಲಾವಿದ! ನಂತರ ಅವನು ಕವಿಯಿರಲಿ, ಗಾಯಕನಿರಲಿ, ಶಿಲ್ಪಿಕಾರನಿರಲಿ. ಒಬ್ಬನು ಶಬ್ದ ಬ್ರಹ್ಮದೊಡನೆ ಆಡುವನಾದರೆ, ಮತ್ತೊಬ್ಬನು ಸ್ವರಗೊಳಡನೆ; ಮಗದೊಬ್ಬನು ರಂಗು ಕುಂಚಲಿಗಳೊಡನಾದರೆ, ಮತ್ತೊಒಬ್ಬನು ಕಲ್ಲು ಮಣ್ಣುಗಳೊಡನೆ ಆಡಿಯಾನು. ಆದರೆ ಅವರೆಲ್ಲರ ಕಲಾಪ್ರತಿಭೆ ಸಾಧಿಸುವ ಕಾರ್ಯವೆಂದೇ ಹೃದಯದ ತಂತಿಗಳನ್ನು ಮೀಟುವದು. ಅವಳ ಮುಂದಿದ್ದ ಆ ಅಸಮ ಸುಂದರವಾದ ಕಲಾಕೃತಿಯೂ ಕೂಡ ಹಾಗೆಯೇ ಅವಳ ಹೃದಯದ ತಂತಿಗಳನ್ನು ಸ್ಪರ್ಶಿಸಿದ್ದಿತು. ಕಲೆಯಲ್ಲಿಯ ಮೋಹಿನಿಯೇ ಅಂಥದಾಗಿದೆ! ಮೃದುವಾದ ಮನವನ್ನು ಇನ್ನೂ ಮೃದುವಾಗಿಸುವ, ಅಥವಾ ಕಲ್ಲೆದೆಯನ್ನು ಕರಗಿಸುವ ಶಕ್ತಿಯು ಕಲೆಯಲ್ಲಿಯೇ ಇದೆ. ಸುಖದ ಸ್ವರ್ಗದಲ್ಲಿ ಬಾಳಿನ ಅಪೂರ್ವವಾದ ಕರುಣೆಯನ್ನೆಲ್ಲ ಮುಳುಗಿಸಿಬಿಟ್ಟು ನಿಶ್ಚಿಂತತೆಯಿಂದ ಮಂದಹಾಸ ಬೀರುತ್ತ ಓಲಾಡುತ್ತಿರುವ ಈ ಕಲೆ ಬದುಕಿನ ಕುಲುಮೆಯಲ್ಲಿ ಬೆಂದು ನೊಂದಿರುವ ಜೀವಗಳಿಗೆ ಹೇಳುತ್ತಿರುವಂತೆ ತೋರುತ್ತದೆ:

‘ಬಾಳಿದು ಹಾಳೆಲ್ಲ’
ಎಂದಳುವದು ಬಲು ಹೊಲ್ಲ,
ಕೇಳು, ಬಾಳಿದೆಲ್ಲ ನಂದನದ ಸವಿಸೊಲ್ಲ....

ಕಲೆಯು ನಮ್ಮನ್ನು ಕೈಕಾಲುಗೆಡಿಸುವದಕ್ಕಿಲ್ಲ. ಜಗದೆಲ್ಲ ದುಃಖಿಜೀವಿಗಳ ದುಃಖದೊಡನೆ ಒಂದಾಗಿ ಅವರ ಕೊರಗನ್ನು ಕಂಡು ನಿಟ್ಟುಸಿರು ಬಿಡುತ್ತಿರುವ “ಕಲೆ ತನ್ನ ಪ್ರತಿಯೊಂದು ಉಸಿರಿನೊಡನೆಯೇ ಆ ಕಂಗಾಲರಿಗೆ ಮೃದುವಾಗಿ ಉಸಿರುತ್ತದೆ, “ಏಳು, ಏಳು, ನನ್ನ ಪ್ರಿಯ ಜೀವವೆ. ಹೀಗೆ ಚಿಂತಿಸಿದರೆ ಏನು ಫಲ? ಸಮಾಧಾನ ಮಾಡಿಕೋ. ಇಗೋ, ಈ

ಮಾರ್ಗ ಹಿಡಿದು ನಡೆ, ನೋಡವಾ” ದುಃಖದ ದಾಹದಿಂದ ಕಂಗೆಟ್ಟ ಅವರಿಗೆ ‘ಕೈಹಿಡಿದು ನಡೆಯಿಸುವ ಕರುಣಾಳು ಬೆಳಕಾಗಿ. ಅವರ ಮನದ ಮೊಗ್ಗೆಯನ್ನರಳಿಸಿ ಬೆಳಕನ್ನು ಸೂಸುವ ಮಂತ್ರ ನುಡಿವ ಸಾಮರ್ಥ್ಯವನ್ನು ಕಲೆಯು ಮಾತ್ರ ಬಲ್ಲದು. ಕಲೆಯಲ್ಲಿ ಇಂತಹ ಜಾದುವು ಇಲ್ಲದಿದ್ದಲ್ಲಿ ಬಾಳಿನ ಸುಖ ದುಃಖ ಸಿಹಿ-ಕಹಿ ರಸಗಳನ್ನುಂಡ ಜನರು ಸುಖಾಂತವಷ್ಟೇ ಅಲ್ಲದೆ, ದುಃಖಾಂತ ನಾಟಕಗಳನ್ನು, ಶೋಕಾಂತ ಕಾದಂಬರಿಗಳನ್ನು, ಹೃದಯ ವಿಧಾರಕ ಚಿತ್ರಗಳನ್ನು, ಹೃದಯದಾಳದ ಅಳಲನ್ನೆಲ್ಲ ಹೊನಲಾಗಿ ಹರಿಯಿಸುವ ರುದ್ರ—ಕರುಣೆಗಳಿಂದ ತುಂಬಿದ ನಿಶಾಂತ ಮಧುರ ಗೀತಗಳನ್ನು ಕೇಳಲು ಅಷ್ಟಾಗಿ ಹಾತೊರೆಯುತ್ತಿರಲಿಲ್ಲ. ಏನೆಲ್ಲ ಸಂಕಟಗಳನ್ನು ಅನುಭವಿಸಿ, ತನ್ನವರ—ಹೆರವರ ಕೋಪ ತಾಪಗಳಿಂದ ಬೆಂದು, ಸಂಶಯದ ಮಡುವಿಗೆ ಸಿಲುಕಿ, ಗರಗರನೆ ತಿರುಗಿಸಲ್ಪಟ್ಟು ಕಣ್ಣು ಕತ್ತಲೆಗೂಡಿದಂತಾಗಿ ಪ್ರಾಣಾಂತಿಕ ತುಮುಲದಲ್ಲಿ ಸಿಲುಕಿ—‘ಅಯ್ಯೋ, ಸತ್ತೆ, ಸತ್ತೆ,’ ಎಂದು ಚೀರುತ್ತಿರುವ ಪ್ರಾಣಿಯನ್ನು ಆದರ ಉರುಲಿನಿಂದ ಹೊರಗೆಳೆದು, ಅವನ ಜರ್ಝರಿತವಾದ ನರನಾಡಿಗಳನ್ನೆಲ್ಲ ಹೊಸದೊಂದು ತಿಳುವಳಿಕೆಯ, ವಿವೇಕದ ಚೈತನ್ಯದಿಂದ ವ್ಯಾಪಿಸಿ ಅವನ ಜೀವನ್ಮೃತನಾಗಿರುವ ಆತ್ಮನಿಗೆ ಸಂಜೀವಿನಿಯಾಗಬಲ್ಲ ಅದ್ಭುತವಾದ ಶಕ್ತಿಯು ಈ ಕಲೆಯಲ್ಲಿಯೇ ಅಡಗಿದೆ. ಮನದ ವಿಕೃತಿಗಳಿಂದ ವಿರೂಪ ಪಡೆದು, ಹಳಸಿ ಹತ್ತಿಕ್ಕಲ್ಪಟ್ಟು ನಿಷ್ಕರ್ಮವಾದ ಹೃದಯದ ಅಂತಸ್ಥ ಸಾತ್ವಿಕತೆಯನ್ನು ಎಚ್ಚರಿಸಿ ಕಾರ್ಯಾಭಿಮುಖವಾಗಿಸಬಲ್ಲದು ಕಲೆ. ಮತ್ತು ಸಾಮಾನ್ಯವಾದ ಬುದ್ಧಿಗೆ ನಿಲುಕದ ಹೃದಯದ ಸೂಕ್ಷ್ಮವಾದ ಎಳೆಗಳ ತೊಡಕನ್ನೆಲ್ಲ ತನ್ನ ಕೋಮಲವಾದ ನಿಡಿ ಬೆರಳುಗಳಿಂದ ಕಲೆಯೇ ಬಿಡಿಸಿ ತೋರಿಸಬಲ್ಲದು! ಕಲಾವಿದನೊಬ್ಬನು ತನ್ನೆಲ್ಲ ದರ್ಶನದ ಸಾರ ಸರ್ವಸ್ವವನ್ನೆಲ್ಲ ಹಾಡಿದ ಕವಿತೆಯ ಒಂದೇ ಒಂದು ಸಾಲು, ತನ್ನ ಅಮೋಘವಾದ ಕಂಠದಿಂದ ಹೊರಡಿಸಿದ ಒಂದೇ ಒಂದು ಕೋಮಲಸ್ವರ, ಅಥವಾ ತನ್ನ ಅಪ್ರತಿಮವಾದ ಕುಂಚಲಿಯ ಒಂದೆರಡೇ ಸ್ವರಗಳಿಂದ ವ್ಯಕ್ತಪಡಿಸಿದ ಒಂದು ಮನಸೆಳೆಯುವ ಭಾವ ಭಂಗಿ, ಇವುಗಳಲ್ಲಿ ಯಾವುದನ್ನೇ ತೆಗೆದುಕೊಂಡರೂ, ಅದರಲ್ಲಿ ತನ್ನದೇ ಆದೊಂದು ಚೈತನ್ಯದಿಂಗೊಡಗೂಡಿ ಎದ್ದು ಬರುವಂತೆ ತೋರುವ ಕಲೆ ನೋಡುವವನ ಕೇಳುವವನ

ಹೃದಯವನ್ನು ಸೆರೆ ಹಿಡಿದು ಮುಗ್ಧಗೊಳಿಸದಿರಲಾರದು. ಕಲೆಯ ಕೈವಾಡ ಇಂದ್ರಜಾಲದ ಪ್ರಭಾವವೇ ಅಂತಹುದು! ಅದರ ಹಿಡಿತಕ್ಕೆ ಸಿಗದ, ಅದರ ಸಿಂಗರದ ವೈಯ್ಯಾರಕ್ಕೆ ಮರುಳಾಗದ, ಅದರ ನಿಶಾಂತ ರಸ್ಯಮಧುರತೆಯ ರಸವನ್ನೀಂಟಿ ಮದದಣಿಯದ, ಅದರ ಮೈಮರೆಯಿಸುವ ಭಾವ—ಭಂಗಿ—ಭಣಿತಕ್ಕೆ ತಕ್ಕ ತಾಳದಿಂದ ಹೃದಯ ಮಿಡಿಯುವ ಅರಸಿಕತೆ ತೀರ ವಿರಳವಾದುದು. ಆದ್ದರಿಂದಲೇ '....ಪುಚ್ಛ ವಿಷಾಣ ಹೀನಃ' ಎಂಬುದು ಸಾವಿರಪಾಲು ಸತ್ಯವಾಗದ ಮಾತು. ತಾನು ಮೈಮರೆತು, ಇತರರನ್ನೂ ಮೈಮರೆಯಿಸುವ ಕಲೆಯ ಕೈಮೆಯನ್ನು ಕಂಡು ಅಚಲೆಯು ಆನಂದ ವಿಸ್ಮಿತಳಾದಳು. ಆ ಅದ್ಭುತವು ಅವಳನ್ನು ವಿಚಾರಕ್ಕೆ ತೊಡಗಿಸಿತ್ತು. "ಹೌದು—ಇದರಂಥ ಸಮಾಧಾನ ಮತ್ತೆಲ್ಲಿಯೂ ದೊರೆಯದು. ಈ ನೀರಸವಾದ ಬಾಳಿನಲ್ಲಿ ಸದಾ ಚೈತನ್ಯವನ್ನು ಜಾಗೃತವಾಗಿರಿಸುವದಾದಲ್ಲಿ ಮನುಷ್ಯನು ಹುಚ್ಚನಾಗಬೇಕು. ಅದು ಯಾವ ರೀ ತರದ ಹುಚ್ಚು ಇರಲಿ. ಅದರೆ ಅದಿಲ್ಲದೆ ನಡೆಯದು. ಅದಿಲ್ಲದೆ ಜೀವನವೆಲ್ಲ ಮುಳ್ಳು ಗಿಡಗಳಿಂದ ತುಂಬಿದ ಕಾಡುವನವೆನ್ನಿಸದಿರಲಾರದು. ಆದರೆ ಆದೇ ಯಾವುದೊಂದು ವಿಷಯದ ಹುಚ್ಚು ಮನುಷ್ಯನಿಗೆ ಹಿಡಿದಿರಲಿ. ಆಗ ದಾರಿಯೊಳಗಿನ ಮುಳ್ಳುಗಳೂ ಕೂಡ ಮಲ್ಲಿಗೆಯ ಮೊಗ್ಗುಗಳಾಗಿಯೇ ಕಂಡಾವು. ಆದರೆ ಅಂಥ ಹುಚ್ಚು ಎಲ್ಲರಿಗೂ ಹಿಡಿಯುವುದಿಲ್ಲ. ಅದಕ್ಕೂ ಭಾಗ್ಯ ಬೇಕು. ಬೇಕೆಂದು ಹುಚ್ಚರಾಗುವದು ಆಗದ ಮಾತು. ಅಂಥ ಹುಚ್ಚು ಕೆಲವರಿಗೆ ಮಾತ್ರ ಇರುವದುಂಟು. ಮತ್ತು ಅಂಥ ಹುಚ್ಚರೇ ಸಮಾಧಾನದಿಂದಿರಬಲ್ಲರು.

ಈ ಹುಚ್ಚರ ರಾಜ ನಿಸರ್ಗ! ಮಂಜಿನ ಹನಿಗಳ ವಜ್ರಗಳಿಂದ ಕೆಚ್ಚಿದ ಹಸಿರು ಮಕಮಲ್ಲಿನ ಹಾಸಿಗೆಯನ್ನವನು ದಿನದಿನವೂ ಹಾಸುತ್ತಲೇ ಇರುವ. ತನ್ನ ಮನಸ್ಸಿಗೆ ತೃಪ್ತಿಯಾಗುವವರೆಗೂ ಅವನು ಅದನ್ನು ಹಾರಿಸುವ ಕೆಲಸ ಮಾಡುತ್ತಲೇ ಇರುವ. ಅವನು ಬಿತ್ತ್ತ ಹೋಗುತ್ತಲೇ ಸೂರ್ಯನ ಕಿಂಕರರು ಬಂದು ದಿನದಿನವೂ ಅದನ್ನು ಕದ್ದುಕೊಂಡುಹೋಗುತ್ತಾರೆ. ಆದರೆ ಆ ಹುಚ್ಚನಿಗದರ ಪರಿವೆಯೇ ಇಲ್ಲ. ಅವನೇನೂ ತಾನು ಮಾಡುವ ಕೆಲಸವನ್ನು ನಿಲ್ಲಿಸ ವದಿಲ್ಲ. ಅವನಿಗೆ ನಿರಾಶೆಯೆಂಬುದೇ ಇಲ್ಲ. ಉತ್ತಮ ಕಲಾವಿದನ ಕಲೆ ಬೇರೆಯವರಿಗಾಗಿ ಇರುವದೇ ಇಲ್ಲ. ಅದು ಕೇವಲ ಸಮಾಧಾನಕ್ಕಾಗಿ ಮಾತ್ರ.

## ೨೨

ಆರಾಮಕುರ್ಚಿಯೊಂದರ ಮೇಲೆ ಬಿದ್ದುಕೊಂಡು ಅಚಲೆಯು ಎದುರಿಗಿದ್ದ ಅದೇ ದೀಪ ಹಚ್ಚಿದ್ದ ಮನೆಯ ಕಡೆಗೆ ನೋಡುತ್ತಲಿದ್ದಳು. ಅವಳ ತೊಡೆಯ ಮೇಲೆ ಅರ್ಧ ತೆರೆದ ಪುಸ್ತಕವೊಂದನ್ನು ಮುಖಪತ್ರ ಮೇಲೆ ಮಾಡಿ ಇಡಲಾಗಿತ್ತು. ತೀರ ಕತ್ತಲೆಯಾಗಿ ಕಣ್ಣಿಗೆ ಕಾಣುವ ವರೆಗೂ ಅವಳು ಓದುತ್ತಿದ್ದಳು. ಅವಳು ಪುಸ್ತಕದಿಂದ ದೃಷ್ಟಿಯನ್ನೇನೋ ತೆಗೆಯದಿದ್ದಳು. ಆದರೆ ಅವಳು ಓದಿದ ವಿಷಯಗಳು ಅವಳ ಮನವನ್ನೆಲ್ಲ ವ್ಯಾಪಿಸಿ ನಿಂತಿದ್ದವು.

ಉತ್ತಮ ತರಗತಿಯ ಲಲಿತ ವಾಙ್ಮಯದ ಪ್ರಭಾವವು ಬಹಳ ವಿಲಕ್ಷಣವಾದುದೇ ಆಗಿದೆ. ಅದನ್ನೋದುವ ಅದಾವ ಬುದ್ಧಿವಂತ ಪುರುಷನೇ ಆಗಲಿ, ಸ್ತ್ರೀಯೇ ಆಗಲಿ, ಅವರ ಮನಸ್ಸಿನಲ್ಲಿ ವಿಚಾರಗಳ ಗೊಂದಲವೆಬ್ಬಿಸಿ 'ಇದರಲ್ಲಿ ನಾನೆಲ್ಲಿದ್ದೇನೆ? ಈ ಪಾತ್ರ ವೈಶಿಷ್ಟ್ಯಗಳಲ್ಲಿ ನನಗೆ ಯಾವದು ಎಷ್ಟರಮಟ್ಟಿಗೆ ಅನ್ವಯಿಸಬಲ್ಲುದು ?' ಎಂಬ ಪ್ರಶ್ನೆಗಳನ್ನು ಎಬ್ಬಿಸದೆ ಬಿಡುವದಿಲ್ಲ. ಅಥವಾ ಜ್ಞಾನವೆಂಬುದು ಮನುಷ್ಯನ ಪ್ರಗತಿಗಾಗಿಯೇ ಇರುವದಾದಲ್ಲಿ ಅದನ್ನು ಆತ್ಮದ ಒರೆಗಲ್ಲಿನ ಮೇಲೆ ತಿಕ್ಕಿ ನೋಡಲಾಗಿದ್ದಲ್ಲಿ ಅದರ ಉಪಯೋಗವಾದರೂ ಏನು? ತಲೆ ತಲಾಂತರಗಳಿಂದ ಇಳಿದು ಬಂದ ಒಳಿತು ಕೆಡಕು ಸಂಸ್ಕಾರಗಳ ರಸಪುಂಡ ದೇಹ ಕೋಶದೊಳಗಿದ್ದ ಆತ್ಮಬೀಜಕ್ಕೆ ಅಂಕುರವೊಡೆಯಲು ಆ ಸಂಸ್ಕಾರಗಳಿಗೆ ಜ್ಞಾನದ ಸಂಘರ್ಷವುಂಟಾಗಲೇ ಬೇಕಾಗುತ್ತದೆ.

ರೋಮಾರೋಲಾರವರ ಆ ವಾಕ್ಯದ ಸುತ್ತಲೂ ಇಂದವಳ ಮನಸ್ಸು ಸುತ್ತುತ್ತಿತ್ತು.

A vigorous, healthy nature like Annette's must create, perpetually create with its whole being, body and spirit Create or else brood over the creation that is to be. It is a necessity and happiness comes only through satisfying it. Every creative period has its own limited field and its rising force follows a trajectory that descends again sharply

ಅವಳಿಗೆ ಅದರ ಸತ್ಯತೆಯು ಅರಿವಾಗುತ್ತಲಿತ್ತು. ಅವಳ ಜೀವನದ ಪ್ರತಿಯೊಂದು ಕ್ಷಣಕ್ಕೂ ಮಹತ್ವವಿತ್ತು. ಕಳೆದು ಹೋಗುತ್ತಲಿರುವ ಒಂದೊಂದೂ ಕ್ಷಣದೊಡನೆ ಅಂತ್ಯದ ಅಪರಂಪಾರದಾಳದೆಡೆಗೆ ಧಾವಿಸಿ ನಡೆದಿರುವ ತನ್ನ ಜೀವನದ ಝರಿಯನ್ನು ನೆನೆದಂತೆಲ್ಲ ಅವಳನ್ನು ಯಾವುದೋ ಒಂದು ಅಸ್ಪಷ್ಟವಾದ ಭೀತಿಯು ಆವರಿಸತೊಡಗಿತು: ನಿಜವಾದ ಸುಖವೆಂಬುದು ನಿರ್ಮಿತಿಯಲ್ಲಿಯೇ ಅಡಗಿದೆಯೆಂಬದು ಅವಳಿಗೆ ಯಾವಾಗಲೂ ತಿಳಿದಿತ್ತು. ಆದರೆ ಆ ನವಸೃಷ್ಟಿಯ ನಿರ್ಮಾಣದ ಆನಂದವನ್ನು ತಾನು ಅನುಭವಿಸುವದಾದರೂ ಎಂತು? ಅದೊಂದು ದಿವ್ಯಾನುಭವವಾಗಿತ್ತು. ಆ ದಿವ್ಯತೆಯ ಉಜ್ವಲತೆಯಲ್ಲಿ ಸಾಗಿ ನಡೆದಿದ್ದ ರೋಲಾ ಅವರ ಅನೆಟ್‌ಳು ಅಚಲೆಯ ಹೃದಯವನ್ನು ಸೆರೆ ಹಿಡಿದು ಅವಳ ಮನವನ್ನೆಲ್ಲ ವ್ಯಾಪಿಸಿ ನಿಂತಿದ್ದಳು. ಅನೆಟ್! ರಾಜರ್ಸನಿಗೆ ಮೋಹಿತಳಾಗಿ ಪರವಶಳಾಗಿದ್ದಳು ಅನೆಟ್. ಆ ಅನುರಾಗದಿಂದಲೇ ಉದ್ಭೂತವಾದ ಅವಳ ಆ ತಾಯಿಯಾಗುವ ಹಂಬಲ! ಆದರೆ ಗಂಡಸಿನ ಜಾತಿಯ ವಿಷಯವಾಗಿಯೇ ಅವಳಲ್ಲಿದ್ದ ಆ ಭಯಂಕರವಾದ ವಯುಲಭೂತವಾದ ತಿರಸ್ಕಾರ. ಲಗ್ನದ ಪೌರೋಹಿತ್ಯವನ್ನು ಧಿಕ್ಕರಿಸಿ ಅವಳು ಅಂಗೀಕರಿಸಿದ ಮಾತೃತ್ವ! ಕುಮಾರೀ ಮಾತೆ! ಜಗತ್ತಿನ ಎಲ್ಲ ಅಸಂಬದ್ಧ ಸಂಕೋಲೆಗಳನ್ನು ಕಡಿದೊಗೆದು ಅದರ ಯಾವ ಅಡ್ಡಿ-ಆತಂಕಗಳನ್ನೂ ಮನ್ನಿಸದೆ ಅದರೆಲ್ಲ ಸುಳ್ಳು ಶಿಷ್ಟಾಚಾರದ, ಪೊಳ್ಳು ಮಡಿವಂತಿಕೆಯ ಹಿರಿತನದ ಸೊಕ್ಕಿನ ಅಧಿಕಾರ ಪೀಠಗಳನ್ನು ಒದ್ದು ಉಳಿಸಿ ತನಗೆ ಸರಿ ತೋರಿದ್ದನ್ನು ಮಾಡುತ್ತ ನಡೆದಿದ್ದ ಈ ಅಸಮ ಸಾಹಸಿಯಾದ ನಿರ್ಭೀತಳಾದ ಅನೆಟ್! ಅನೆಟ್ ಅಚಲೆಯ ಮನವನ್ನು ಸೆರೆಹಿಡಿದಳು. "ಹೊಡೆದಾಟ? ಒಳ್ಳೇದು, ಸಿದ್ಧಳಿದ್ದೇನೆ. ಪ್ರಚಂಡವಾದ ಬಿರುಗಾಳಿ ಮತ್ತೆ ಶಾಂತತೆ, ಇದೇ ಜೀವನದ ಆಟವಾಗಿದೆ. ನಾನೂ ಈ ಹೊಡೆದಾಟದ ಆಟದಲ್ಲಿ ಪಾಲುಗಾರಳಾಗುವವಳೇ. ನಾನದಕ್ಕೆ ಹೆದರಿ ಹಿಂಜರಿಯುವದಿಲ್ಲ." ಹೀಗೆಂದು ಜಯಘೋಷ ಮಾಡುತ್ತ ಬಾಳಿನ ಬಿರುಗಾಳಿ ಭೂಕಂಪದೊಳಗಿಂದ ಸಾಗಿಬಂದಿದ್ದ ಅನೆಟ್‌ಳ ಅದ್ಭುತ ಸಾಮರ್ಥ್ಯವನ್ನು ಕಂಡು ಅಚಲೆ ಬೆರಳು ಕಚ್ಚಿದಳು. ಜಗತ್ತಿನ ಉಪಹಾಸಕ್ಕೆ ಒಂದಿಷ್ಟೂ ಗಮನವೀಯದೆ ಅವಳು ನಡೆದಿದ್ದಳು. ಅನೆಟ್ ಮಾರ್ಕನ ತಾಯಿಯಾದಳು. "ಮಾರ್ಕ"ನು

ಅನೆಟ್‌ಳ ಪ್ರೇಮದ ಪುತ್ಥಳಿ. ಅವಳ ಮಾರ್ಕನು ಅವಳಿಗೆ ಸರ್ವಸ್ವವಾಗಿದ್ದ. ತಕ್ಕಡಿಯ ಒಂದು ಪರಡಿಯಲ್ಲಿ ತನ್ನ ಕಡೆಗೆ ಉಪಹಾಸ ಪೂರ್ವಕವಾಗಿ ನಗುವ ಜಗತ್ತು ಮತ್ತೊಂದರಲ್ಲಿ ಅವಳ ಜೀವದ ಜೀವ—ಅವಳ ಸಾರ ಸರ್ವಸ್ವನಾಗಿದ್ದ ಮಾರ್ಕ. ತನ್ನ ಮಾರ್ಕನು ಅವಳಿಗೆ ಉಳಿದೆಲ್ಲ ಜಗತ್ತಿಗಿಂತ ಹೆಚ್ಚು ಬೆಲೆಯುಳ್ಳವನಾಗಿದ್ದ. ಮಾರ್ಕ ಅವರ ಕೂಸು. ಅವಳ ಮನಸ್ಸು ದೇಹಗಳ ರಸವನ್ನೇ ಎರಕಹೊಯ್ದು ಗಟ್ಟಿ. ಅವನದೆಲ್ಲ ಅವಳದೇ ಆಗಿತ್ತು. ತನ್ನಿಂದ ಅವನೆಂದಿಗೂ ದೂರವಾಗನೆಂದೇ ಅವಳ ತಿಳಿವಳಿಕೆಯಾಗಿತ್ತು. ಅವನನ್ನು ಎದೆಗೊತ್ತಿ ಅವಚಿಕೊಂಡೇ ಇರಲು ಅವಳು ಹವಣಿಸುತ್ತಿದ್ದಳು. ಆದರೆ ಅವನು ಅವಳೆಡೆಗೆ ಉದಾಸೀನತೆಯಿಂದ ನೋಡುತ್ತ ಅವಳಿಂದ ದೂರವಾಗುತ್ತಲಿದ್ದ. ಅವಳಿಗೆ ತನ್ನ ಹೃದಯದ ಗಾಯಕ್ಕೆ ಉಪ್ಪು ಸುರಿದಂತೆನ್ನಿಸಿತು. ಅವಳಿಗೆ ಯಾರೋ ತನ್ನ ಕರುಳನ್ನು ಇರಿದು ಇರಿದು ನುಚ್ಚುನೂರಾಗಿಸುತ್ತಿರುವಂತೆನ್ನಿಸಿತು. ಅವಳೆಲ್ಲ ಆಯುಷ್ಯವೂ ಹೋರಾಟದಲ್ಲಿಯೇ ಕಳೆದಿತ್ತು—ಮುಳ್ಳು, ಕಲ್ಲು, ಹೊಗೆ ಬೆಂಕಿ, ಅವಳು ಯಾವದಕ್ಕೂ ಅಂಜಲಿಲ್ಲ, ಅಳುಕಲಿಲ್ಲ. ಒಂದೇ ಸವನೆ ರುದ್ರಭೀಷಣವಾದ ತನ್ನ ಹೊಡೆದಾಟವನ್ನು ಅವಳು ಅವಿಶ್ರಾಂತವಾಗಿ ಸಾಗಿಸಿದ್ದಳು. ಒಂದು ಕಡೆಗೆ ತಾಯ್ತರುಳಿನ ಕೊರಗು, ಮತ್ತೊಂದು ಕಡೆಗೆ ಪುರುಷನ ಸಾನ್ನಿಧ್ಯಕ್ಕಾಗಿ ಹಾತೊರೆಯುವ ಸ್ತ್ರೀಸಹಜವಾದ ಪ್ರವೃತ್ತಿಯ ಭಯಂಕರವಾದ ಕುಣಿತ, ಮತ್ತೂ ಒಂದೆಡೆಗೆ ದಿನದ ಹೊಟ್ಟೆಯ ಹಿಟ್ಟಿಗಾಗಿ ನಡೆಯಿಸಬೇಕಾದ ಸತತವಾದ ಹೊಡೆದಾಟ, ಹೀಗೆ ಒಬ್ಬಳೇ ಅನೆಟ್ಟಳ ಹೃದಯವನ್ನು ನಡುಗಿಸುವ ಮೂರು ವಿಧವಾದ ಜೀವನ ಸಮರದ ಈ ರುದ್ರ ಭಯಂಕರವಾದ ದೃಶ್ಯ! ಅಂಥದ್ದನ್ನೆಲ್ಲವನ್ನೂ ಎದುರಿಸಿ ನಿಂತು "I challenge God" ಎಂದು ರಣಕಹಳೆಯನ್ನೂದಿ ತನ್ನ ವಿಧಿಗೇ ಆಹ್ವಾನವನ್ನೀವ ಅನೆಟ್ಟಳು ಅಚಲೆಯನ್ನು ದಂಗು ಬಡಿಸಿ ವಿಸ್ಮಿತಳನ್ನಾಗಿ ಸದೆ ಇರಲಿಲ್ಲ. ಮನುಷ್ಯನ ಸುತ್ತೆಲ್ಲ ಬಾಳಿನಲ್ಲಿ ಇಂಥ ಅನೇಕ ಶಕ್ತಿಗಳು ಕುಣಿಯುತ್ತಲಿರುವದುಂಟು. ಅವೆಲ್ಲವುಗಳನ್ನು ಧೈರ್ಯವಾಗಿ ಎದುರಿಸಿ ಹೋರಾಡುವದು—ತನ್ನನ್ನು ತಾನು ಸರಿಯಾಗಿ ಅರಿತುಕೊಂಡು ಹೋರಾಡುವದು, ಇದೀಗ ನಿಜವಾದ ಪರಾಕ್ರಮ. ಅನೆಟ್ಟಳೊಡನೆ ಮದುವೆಯಾಗಲು

ರಾಜರ್ಷಿ ಯಾವಾಗಲೂ ಸಿದ್ಧನಾಗಿಯೇ ಇದ್ದ. ಆದರೆ ಆಗಲೂ ಅವಳು ಅವನನ್ನು ಸನಿಯಕ್ಕೆ ಬರಗೊಡಲಿಲ್ಲ. ರಾಜರ್ಷಿನ ಮಗನೆಂದು ಸರಳವಾಗಿಯೇ ಮಾರ್ಕನಿಗೆ ದೊರೆಯಬಹುದಾಗಿದ್ದ ಪಿತೃತ್ವದ ಸಂಬಂಧವನ್ನು ಅವಳು ಬುದ್ಧಿಪೂರ್ವಕವಾಗಿ ಕಡಿದೊಗೆದಳು. ರಾಜರ್ಷಿ ಬೇರೊಬ್ಬಳನ್ನು ಹೊಂದಿ ನಡೆದುಬಿಟ್ಟ. ಆದರೆ ಮಾರ್ಕನಿಗಾಗಿ, ಜಗತ್ತೂ ಮಾರ್ಕನನ್ನು ಆದರಿಸುವಂತಾಗಬೇಕೆಂದು ಅವಳ ಸತತವಾದ ಪ್ರಯತ್ನ ನಡೆಯಿತು. ಆದರೆ ಒಂದು ಮಗುವಿನ ಮಾತೃತ್ವದಿಂದ ಸ್ತ್ರೀಹೃದಯದ ಹಸಿವೆಲ್ಲ ಹಿಂಗಿ ಅವಳೆಲ್ಲ ಭಾವನೆ—ವಿಕಾರಗಳು ಹೊತ್ತಿ ಹುದುಪಳಿಸಿ ಹೋಗುವದು ಅಷ್ಟರಲ್ಲಿಯೇ ಇದೆ! ಅವು ಮತ್ತೆ ತಮ್ಮ ಮುಖವನ್ನು ಮೇಲಕ್ಕೆತ್ತುವವು. ಅವಳಿಗೆ ತನ್ನ ದಾರಿಯಲ್ಲಿ ಜೂಲಿಯನ್ನನ ಬೆಟ್ಟಿಯಾಯಿತು. ತನ್ನ ಜೋಲಿ ಹೋಗುವದೆಂದೆನಿಸಿತು ಅವಳಿಗೆ. ಆದರೆ ಅವಳು ತನ್ನನ್ನು ತಾನು ಸಾವರಿಸಿ ಹಿಡಿದುಕೊಂಡಳು. ನಂತರ ಫಿಲಿಪ್ಸ ಸಂಧಿಸಿದ. ಅವಳಿಗೆ ಈ ಸಲ ಜೋಲಿ ತಪ್ಪಿತು. ಆದರೂ ಅವಳು ಮತ್ತೂ ಮೇಲೆದ್ದು ಸುಧಾರಿಸಿಕೊಂಡಳು ಆ ರಣಕೋಲಾಹಲವೆಂತಹ ಎದೆಗೆಡಿಸುವಂತಹದು! ಆ ಹೋರಾಟವೆಂತಹದು! ಕೇವಲ ಇತರರೊಡನೆ ಹೋರಾಟವಲ್ಲ, ಅದಕ್ಕಿಂತ ಭಯಂಕರವಾದುದು—ತನ್ನೊಡನೆ ತಾನೇ ಹೋರಾಡುವದು. ಅಂಥ ನಿಕರದ ಕಾಳಗದ ಬೊಬ್ಬಿರಿವ ರಣಕ್ರಂದನವನ್ನೂ ಸೀಳಿ ಬರುತ್ತಿತ್ತು ಅವಳ ಗರ್ಜನೆ: " War or peace ! Thats the game of life." I will have my own share, I challenge God ! "

ರೋಲಾಂದವರ ಅನೆಟ್ಳ ಈ ಮಾತುಗಳು ಅವಳ ಕಿವಿಯಲ್ಲಿ ಮಾರ್ನುಡಿಯುತ್ತಲಿದ್ದವು. ಅವಳು ಹಾಗೆಯೇ ವಿಚಾರ ಮಾಡುತ್ತ ಬಿದ್ದುಕೊಂಡಳು.

೨೩

ಯಾರೋ ಬಾಗಿಲು ತಟ್ಟಿದ ಸದ್ದಾಯಿತು. ಅವಳು ಎದ್ದು ಹೋಗಿ ಬಾಗಿಲು ತೆರೆದಳು. " ಯಾರು, ರಾಧಿಕೆ? ಇಷ್ಟು ಹೊತ್ತಿನಲ್ಲಿ ಬಂದದ್ದು? ಮತ್ತೆ ಬಂದೆಯಾದರೂ ಯಾವಾಗ? "

"ಈವೊತ್ತೇ ಸಂಜೆಗೆ. ಮತ್ತೆ ನಾಳೆ ಮುಂಜಾನೆ ಹೊರಡಬೇಕು. ಆದರೆ ನಿನ್ನನ್ನು ನೋಡದಿರುವದಾಗಲಿಲ್ಲ."

"ಮತ್ತೆ ಇದಾರದು? ನಿನ್ನದೇ ಏನು?" ಅರವಿಂದನನ್ನು ಎತ್ತಿಕೊಳ್ಳುತ್ತ ಅಚಲೆಯೆಂದಳು.

"ಇಶ್ಶ್ಯಾ, ಇದೇನು ಕೇಳುತ್ತೀ. ನನ್ನದಲ್ಲದೆ ಮತ್ತಿನ್ನಾರದಿದ್ದೀತು?"

ರಾಧಿಕೆಯ ಭೆಟ್ಟಿಯಾಗಿ ಎಷ್ಟೋ ದಿನಗಳಾಗಿದ್ದವು. ಮದುವೆಯಾದ ನಂತರ ಗಂಡನ ಮನೆಗೆ ಹೋದ ರಾಧಿಕೆ ಮತ್ತೆ ಈಗ ಒಮ್ಮೆಲೇ ಪುತ್ರವತಿಯಾಗಿಯೇ ಅವಳಿಗೆ ಭೆಟ್ಟಿಯಾಗಿದ್ದಳು.

"ಅಲ್ಲೇ, ಆದರೆ ನೀನು ಒಂದೇ ದಿವಸದಲ್ಲಿ ಓಡುತ್ತ ಬಂದು ಓಡುತ್ತ ಹೋಗುವದೇನಿದು? ಏನು, ಇಷ್ಟೆಲ್ಲ ಅವಸರ ಯಾತಕ್ಕೆ?"

"ಹೌದು. ಆದರೆ ಇವರಿಗೆ ಬೇರೆ ಕಡೆಗೆ ವರ್ಗವಾಗಿದೆ. ನಾಡಿದ್ದು ಅವರು ಮತ್ತೆ ಕೆಲಸಕ್ಕೆ ಸೇರಲೇಬೇಕು."

"ಹಾಗಾದರೆ ಅವರು ಹೋಗಲೊಲ್ಲರು ನೀನು ಇರಲ್ಲ"

"ಅಹ್ಹಂ. ಹಾಗೆಲ್ಲ ಇರಲಿಕ್ಕೆ ಹೇಗಾದೀತು?"

"ಅಬ್ಬಾ, ಹಾಗೋ. ಒಂದು ದಿವಸ ಕೂಡ ಬಿಟ್ಟಿರುವದಾಗುವದಿಲ್ಲವೆ?" ಅರವಿಂದನನ್ನು ಗಟ್ಟಿಯಾಗಿ ಹಿಡಿದು ಒಂದೇ ಸವನೆ ಮುದ್ದಿಡುತ್ತ ಅಚಲೆ ಅವನನ್ನು ಕಕ್ಕಾವಿಕ್ಕಿಯಾಗಿಸಿದಳು.

"ರಾಧಿಕೆ, ಎಂತಹ ಸೊಗಸಾಗಿದ್ದಾನೆ, ನಿನ್ನ ಕುಮಾರ! ಹೌದು. ಆದರೆ ಅವನು ಯಾರಂತಿದ್ದಾನೆಯೋ, ನಿನ್ನಂತೆಯೋ, ಅವರಂತೆಯೋ?"

"ಹೋಗೇ, ನನ್ನನ್ನೇನು ಕೇಳುತ್ತೀ?"

"ಏಕೆ, ಇನ್ನೂ ಇಷ್ಟು ನಾಚಿಕೊಳ್ಳುತ್ತೀಯೇನು? ಹೆಚ್ಚಿನದಾಯಿತು ಬಿಡು ನಿನ್ನದು!"

ಆ ಈರ್ವರೂ ಗೆಳತಿಯರಲ್ಲಿ ಅದೆಷ್ಟೋ ಹೊತ್ತು ಚೇಷ್ಟೆ ವಿನೋದಗಳಾದವು. ಅವರು ಏನೇನೊ ಮಾತನಾಡಿದರು. ಹಿಂದಿನ ನೆನಪುಗಳೆಲ್ಲ ಬಂದು ಹೋದವು. ಅರವಿಂದ ಕಿರಿಕಿರಿ ಮಾಡಲಾರಂಭಿಸಿದ. ರಾಧಿಕೆ ಅವನನ್ನು ಅಚಲೆಯ ಕಡೆಯಿಂದ ತನ್ನ ಕೈಗೆ ತೆಗೆದುಕೊಳ್ಳುತ್ತ ನುಡಿದಳು, "ಬಹುಶರ ರಾಯರು ನಿದ್ದೆ ಮಾಡುವರೆಂಬಂತೆ ತೋರುತ್ತದೆ. ಇಗೋ

ಇವನನ್ನಿಲ್ಲಿಯೇ ಹಾಸಿಗೆಯ ಮೇಲೆ ಮಲಗಿಸಿ ನಾನು ಮತ್ತೊಂದು ಕಡೆಗೆ ಹೋಗಿ ಬರುವೆ."

"ಛೆ, ಛೆ, ಹೆಚ್ಚಿನದಾಯಿತವ್ವ ಈ ನಿನ್ನ ಓಡಾಟ."

"ಮತ್ತೇನು ಮಾಡಲಿ ಹೇಳು? ಯಾವಾಗಾದರೊಮ್ಮೆ ಬರುವದು ಮತ್ತೆ ಕಾಣಲೇ ಬೇಕಾದವರನ್ನು ಕಾಣದಿದ್ದರೆ ಮನಸ್ಸಿಗೆ ಸರಿಯಿರುವುದಿಲ್ಲ." ಅರವಿಂದನನ್ನು ಮೆತ್ತಗೆ ಚಪ್ಪಡಿಸುತ್ತ ರಾಧಿಕೆಯೆಂದಳು. ಅರವಿಂದನಿಗೆ ತೊಟ್ಟಿಲಲ್ಲೇ ಮಲಗುವ ಅಭ್ಯಾಸವಿದ್ದುದರಿಂದ ಬರೀ ಚಪ್ಪಡಿಸುವದರಿಂದ ಅವನು ನಿದ್ದೆಮಾಡಲಾರದಾದ. ಆದ್ದರಿಂದ ರಾಧಿಕೆಯು ಅವನನ್ನು ಹಾಗೇ ಮೆತ್ತಗೆ ಬಡಿಯುತ್ತ ಇಳಿದನಿಯಲ್ಲಿ ಜೋಗುಳ ಹೇಳ ಹತ್ತಿದಳು.

ಅರಮನಿ ಮ್ಯಾಲೊಂದು ಅರಗಿಣಿ ಕೂತದ
ಅರವಿಂದ ಅದ ಕಂಡು ಕರದಾನ
ಅರವಿಂದ ಅದ ಕಂಡು ಕರದರ ಆ ಗಿಣಿ
ಅವನ ಹವಳದ ತುಟಿ ನೋಡಿ ಬೆರಗೇದ ॥ ೧ ॥

ಊರ ಜಾತುರಿಗೆಂದು ಬಂದಾನ ನನತಮ್ಮ
ಜಾತೂರಿಯೆಲ್ಲ ತಿರಿಗಿ ಬಂದಾನ
ಜಾತೂರಿಯೆಲ್ಲ ತಿರಿಗಿ ಬಂದರೂ ನನ ಅರವಿಂದ್ನ
ಸಮರಿಲ್ಲ ಮಗಳೀಗೆ ಎಂದಾನ ॥ ೨ ॥

ಬಾಳೆಲ್ಲಿ ಆಡೇದ ಬ್ಯಾಳೆಲ್ಲ ಚೆಲ್ಲ್ಯಾವ
ಭಾಳ ಮುತ್ತೆಲ್ಲಿ ಉದರ್ಯಾವ
ಭಾಳ ಮುತ್ತೆಲ್ಲಿ ಉದರ್ಯಾವ ಕಂದಯ್ನ
ಬಾವೂಲಿ ಕಂಡವರು ಕೊಡಿರೆವ್ವ ॥ ೩ ॥

ಸರದಾರ ಬರುವಾಗ ಸುರದಾವ ಮಲ್ಲಿಗೀ
ಥೊರಿ ನನ್ನ ಕಂದಯ್ಯ ಬರುವಾಗ
ಥೊರಿ ನನ್ನ ಕಂದಯ್ಯ ಬರುವಾಗ ಯಾಲಕ್ಕಿ
ಗೊನಿ ಬಾಗಿ ಹಾಲು ಸುರದಾವ ॥ ೪ ॥

"ಜೂ಼ಜ಼ ಜೂ಼ಜ಼಼ ಜೂ಼ಜ಼ ಜೂ಼ಜ಼಼ ಬಾಳಾ, ಹೋತ, ಹೊತ, ಮಕ್ಕೋಳ ಕೂಸ" ಎನ್ನುತ್ತ ರಾಧಿಕೆ ಕೇಳುವವರಿಗೆಲ್ಲ ನಿದ್ದೆ ಬರುವಂತೆ ವಾತ್ಸಲ್ಯ ಉಕ್ಕಿ ಹೊರಸೂಸುವ ಸಣ್ಣನ್ನ ದನಿಯಲ್ಲಿ ಮತ್ತೆ ಜೋಗುಳ ಹೇಳ ಹತ್ತಿದಳು.

ಬಾರೋ ಬಾರೋ ನನ್ನ ಬಾಲ ಚಕ್ರವರ್ತಿ
ನಾಲೀಗಿ ವ್ಯಾಲೆ ಸರಸೋತಿ
ನಾಲೀಗಿ ವ್ಯಾಲೆ ಸರಸೋತಿ ಇರುವಂಥ
ನನ ಬಾಲ ಹಾಲು ಕುಡಿಬಾರೋ ॥ ೫ ॥

ಅಡಿ ಬಾ ನನಕಂದ ಅಂಗಾಲ ದೊಳದೇನ
ಟೆಂಗಿನಕಾಯಿ ತಿಳಿನೀರ
ಟೆಂಗಿನಕಾಯಿ ತಿಳಿನೀರು ತಕ್ಕೊಂಡು
ಬಂಗಾರದ ಮಾರಿ ತೊಳದೇನ ॥ ೬ ॥

ಅವಳು ಹೇಳುತ್ತಿದ್ದ ಜೋಗುಳ ಅದೆಷ್ಟು ಮಂಜುಳವಾಗಿತ್ತು. ಸುತ್ತಲಿನದನ್ನೆಲ್ಲ ಮರೆತವರಂತೆ ರಾಧಿಕೆ ತನ್ನ ಸ್ವರದೊಡನೆಯೇ ಏಕತಾನವಾಗಿ ಮೆಲುಮೆಲುನೆ ಹಾಡುತ್ತಿದ್ದಳು. ಆ ಸಾಮಾನ್ಯವಾದ ಸ್ವರಗಳಲ್ಲಿ ಉಕ್ಕಿ ಹರಿಯುತ್ತಿದ್ದ ಮಧುರವಾದ ವತ್ಸಲತೆ ಕೇಳುತ್ತಿದ್ದ ಯಾರನ್ನೂ ಸಾಂತ್ವನ ಗೊಳಿಸಿ ಅವರಿಗೆ ಅದರ ಗುಂಗು ಹಿಡಿಸದಿರುತ್ತಿರಲಿಲ್ಲ. ಅದರಲ್ಲಿಯ ಒಂದೊಂದು ಮಾತನ್ನೂ ಅಚಲೆಯು ಹಸಿದವರಂತೆ ಹೀರಿಕೊಳ್ಳುತ್ತಲಿದ್ದಳು. ಮೇಲೆ ನೋಡುವದಕ್ಕೆ ಅವಳು ಹೊರಗೆ ರಸ್ತೆಯ ಕಡೆಗೆ ನೋಡುತ್ತಿರುವಂತೆ ಕಂಡರೂ ರಾಧಿಕೆ ಜೋಗುಳ ಹಾಡುತ್ತಿದ್ದಾಗ ಅವಳಿಗೆ ತಿಳಿಯದೆಯೇ ಅವಳ ಕಣ್ಣು ತುಂಬಿ ಬಂದವು. ಅರವಿಂದ ತನ್ನ ತಾಯಿಯ ಕೈಗಳ ಮೆತ್ತಗಿನ ಉಯ್ಯಾಲೆಯಲ್ಲಿಯೇ ನಿದ್ರೆಹೋಗಿದ್ದ. ಅವಳು ಅವನೆಡೆಗೆ ನೋಡುತ್ತ "ಮಲಗಿತೆಂದು ತೋರುತ್ತದೆ" ಎಂದು ಮೆಲ್ಲಗೆ ನುಡಿದಳು. ಅವಳು ಒಂದುಕ್ಷಣ ಅವನನ್ನು ಸ್ನೇಹಪೂರ್ಣವಾಗಿ ನೋಡುತ್ತಲಿದ್ದಳು. ನಂತರ ಮೃದುವಾಗಿ ಸೀತ್ಕಾರಮಾಡುತ್ತ ಪ್ರೇಮಪುರಸ್ಸರವಾಗಿ ಮೃದುವಾಗಿ ಮುತ್ತಿಟ್ಟು ಮೆಲ್ಲಗೆ—ತೀರ ಮೆಲ್ಲಗೆ ಅವನನ್ನು ಕೆಳಗೆ ಮಲ

ಗಿಸಿದಳು. "ಆಹಾ ನನ್ನ ಬಂಗಾರದಂಥ ಕೂಸು ಹ್ಯಾಗೆ ಜಾಣನಂತೆ ಮಲಗಿದೆ ನೋಡು."

ರಾಧಿಕೆ ಅಚಲೆಗೆಂದಳು, "ಅಚಲಾ ತಾಯಿ, ನಾನಿನ್ನು ಸ್ವಲ್ಪ ಹೋಗಿ ಬರುವೆ. ಅವನು ಇನ್ನು ಸುಮಾರು ಒಂದು ತಾಸಿನ ವರೆಗಂತೂ ಏಳುವ ಅಂಜಿಕೆಯಿಲ್ಲ."

"ಓಹೋ. ಹೋಗಲ್ಲ. ಅದರಲ್ಲೇನು? ಅವನೆದ್ದರೆ ನಾನೇ ಕರೆಯಲು ಬರುವೆ."

ರಾಧಿಕೆ ತೆರಳಿದಳು. ಅಚಲೆ ಶಾಂತವಾಗಿ ಮಲಗಿದ್ದ ಹಸುಳೆಯನ್ನು ದೃಷ್ಟಿಸುತ್ತಲೇ ಇದ್ದಳು. ಮತ್ತೆ ಅವಳ ಕಣ್ಣುಗಳು ತುಂಬಿ ಬಂದವು.

ಮಾಣಿಕಳು ಕುಂಡೆಯನ್ನು ತೊಡೆಯಮೇಲಿಟ್ಟುಕೊಂಡು ಕುಳಿತಾಗಲೆಲ್ಲ ಅವಳಿಗೆ ಹೀಗೇ ಸಂಕಟವಾಗುತ್ತಿತ್ತು. ತಾಯಿ-ಮಗುವಿನ ನಡುವಿನ ಅಸದೃಶವಾದ ಮಮತೆಯನ್ನು ಹೊರಸೂಸುವ ಅಂಥ ದೃಶ್ಯಗಳನ್ನು ಕಂಡಾಗಲೆಲ್ಲ ಅಚಲೆಗೆ ತನ್ನ ಹೃದಯವು ಯಾವದೋ ಒಂದು ಅಜ್ಞಾತವಾದ ದುಃಖದಿಂದ ಭಾರವಾದಂತೆನ್ನಿಸುತ್ತಿತ್ತು. ಅವಳು ಯಾರಿಗೂ ತಿಳಿಯದಂತೆ ಉಳಿದವರಾರಿಗೂ ಕೇಳಿಸದಂತೆ ಮೆಲ್ಲನೆ ಒಂದು ಬಿಸಿಯುಸಿರು ಸೂಸುವಳು. ಇಂದಂತೂ ಅನೇಕ ಮಾತುಗಳು ಕೂಡಿ ಬಂದಿದ್ದವು. ಮೂರುಸಂಜೆಯ ಮನದ ಸ್ವಾಭಾವಿಕ ಔದಾಸೀನ್ಯ. ಅದೇ ಕೇಳಿದ ಆ ಮೃದುಸ್ವರದ ಜೋಗುಳ ಮತ್ತು ಆ ತಾಯಿ ಮಗುವಿನ ಅನ್ಯೋನ್ಯತೆಯ ಹೃದಯ ಸ್ಪರ್ಶಿಯಾದ ದೃಶ್ಯ—ಅಚಲೆ ಬಿಕ್ಕಿಬಿಕ್ಕಿ ಅಳಹತ್ತಿದಳು. ಅರವಿಂದನೇಕೋ ಒಮ್ಮೆಲೇ ಹೊರಳಾಡಲಾರಂಭಿಸಿದ. ತನ್ನ ಅಳುವಿನಿಂದ ಏನೋ ಅಪಶಕುನವಾದಂತೆನಿಸಿತು ಅವಳಿಗೆ. ಅವಳು ಮೇಲಕ್ಕೆ ಎದ್ದು ಮಗುವಿನೆಡೆಗೆ ಹೋದಳು. ಅರವಿಂದ ಕಿರಿಕಿರಿ ಮಾಡಲಾರಂಭಿಸಿದ. ಅವಳು ಲಾಲಿ ಗೈದಳು. ಆದರೆ ಅವನ ಸಮಾಧಾನವಾಗಲಿಲ್ಲ. ಅವನು ಪೂರ್ಣವಾಗಿ ಎಚ್ಚತ್ತು ಅಳಹತ್ತಿದ.

ಅಚಲೆ ಒಂದು ಕ್ಷಣ ಸುತ್ತೆಲ್ಲ ನಿರುಕಿಸಿದಳು. ರಾಧಿಕೆ ಬರಲು ಇನ್ನೂ ಅವಕಾಶವಿತ್ತು. ಅವಳು ಕೂಡಲೆ ಅರವಿಂದನನ್ನು ತನ್ನ ತೊಡೆಯ ಮೇಲಿಟ್ಟುಕೊಂಡಳು. ಅರವಿಂದ 'ಉಹೂಂ, ಉಹೂಂ,' ಎನ್ನಲಾರಂಭಿ

ಸಿದ. ತಿನ್ನುವುದಕ್ಕೆ ಸಿಕ್ಕರಾಯಿತು. ಅವನಿಗಿನ್ನೂ ತನ್ನ ತಾಯಿ ಮತ್ತು ಇತರರಲ್ಲಿಯುದರ ಅಂತರ ಸರಿಯಾಗಿ ತಿಳಿಯುತ್ತಿರಲಿಲ್ಲ. ಹೊಟ್ಟೆಗೆ ತಿನ್ನುವದಕ್ಕೆ ಕೊಡುವಳು ತಾಯಿ ಇಷ್ಟು ಮಾತ್ರ ಅವನಿಗೆ ಗೊತ್ತು. ಆ ಎಳೆ ದುಟಿಗಳ ಸ್ಪರ್ಶದಿಂದ ಅಚಲೆಯ ಮೈಯಲ್ಲಿ ನವಿರೆದ್ದಿತು. ಅವಳ ದೇಹದಾದ್ಯಂತ ಕಂಪನವುಂಟಾಗಿ ಅವಳ ನರನಾಡಿಗಳೊಳಗಿನ ಶಕ್ತಿಗಳೆಲ್ಲ ಒಂದೆಡೆಗೆ ಕೇಂದ್ರೀಕೃತವಾದಂತೆನ್ನಿಸಿತು. ಅವಳ ಗಟ್ಟಿಯಾಗಿ ಕಣ್ಣು ಮುಚ್ಚಿಕೊಂಡಳು....ಒಂದು....ಎರಡು....ಮೂರು....ಕೆಲವು ಕ್ಷಣ....ಆದರೆ—, ಅರವಿಂದನು ಸಮಾಧಾನವಾಗಲಿಲ್ಲ. ಕಸುವಿನಿಂದ ತನ್ನ ತುಟಿಗಳನ್ನೊತ್ತಿ ಹಲ್ಲಿಲ್ಲದ ಒಸಡುಗಳಿಂದ ಹಿಡಿದು ಜೋರಿನಿಂದ ಗರಗರನೆ ಹೀರಿಕೊಂಡರೂ ಅವನು ಸಮಾಧಾನವಾಗಲಿಲ್ಲ. ಅವಳಿಗೂ ಶಾಂತಿ ದೊರೆಯುಲಿಲ್ಲ. ಅವಳ ಸರ್ವಾಂಗವೆಲ್ಲ ಪುಲಕಿಸಿ ಜುಮ್ಮೆಂದಿತು. ಕಣ್ಣಿನೊಳಗಿನಿಂದ ಒಂದೇ ಸಮನೆ ಅಶ್ರುಗಳು ಸುರಿಯಲಾರಂಭಿಸಿದವು. ಅವಳು ಹತಾಶಳಾದಳು. 'ಇಲ್ಲ, ಅಚಲಾ, ಅದು ಹಾಗೇ ಸುಮ್ಮನೆ ಬರುವ ಮಾತಲ್ಲ. ತಾಯಿಯ ಅಕ್ಕರೆಯೇ ರೂಪವಡೆದು ಬಂದಂಥ ಆ ಹಾಲು ಚಿಮ್ಮುವುದಕ್ಕೆ ಬಹಳ ದೊಡ್ಡ ತ್ಯಾಗವೆಸಗಬೇಕಾಗುತ್ತದೆ. ತನ್ನವೇ ದೇಹಾತ್ಮಗಳ, ತನ್ನದೇ ರಕ್ತ ಮಾಂಸಗಳ ಎರಕದಿಂದಾದ ಆ ಪುಟ್ಟ ಪ್ರತಿಮೆಯೊಂದು ತನ್ನ ಎದೆಗಂಟಿಕೊಂಡಿರುವಾಗ ನಿರ್ವ್ಯಾಜವಾಗಿ ಉಕ್ಕಿ ಹರಿಯುವ ಆತ್ಮೀಯತೆ—ಅಕ್ಕರೆ—ಮಾತೃತ್ವದ ಮಮತೆ ಇಂತಹ ಕೃತಕತೆಯಿಂದ ಎಳೆದು ಜೋಡಿಸಿದ ಸಂಬಂಧದಿಂದ ಉತ್ಪನ್ನವಾಗಲಾರದು. ಹಾಗಾದರೆ....ಹಾಗಾದರಿನ್ನೇನು ಮಾಡಲಿ? ನನ್ನದೇ ಚಿತ್‌ಶಕ್ತಿಯಿಂದಾದ ಪ್ರತಿಮೂರ್ತಿ—ನನ್ನ ಮಗು—ನನ್ನೀ ಜೀವದ ರಸವನ್ನು ಎರಕಹೊಯ್ದು ಮಾಡಿದ ನನ್ನೊಬ್ಬ ಅರವಿಂದ ನನಗೆ ಬೇಕು' ಅವಳು ತೀರ ಪರಕೀಯ ಭಾವದಿಂದ ತನ್ನ ತೊಡೆಯ ಮೇಲಿದ್ದ ಆ ಮಗುವನ್ನು ನೋಡುತ್ತಿದ್ದಳು. ಅದು ಒಂದೇ ಸಮನೆ ಅಳುತ್ತಿತ್ತು. ಅವಳು ಶೂನ್ಯ ಮನಸ್ಕಳಾಗಿ ತನ್ನ ತೊಡೆಯನ್ನು ತೂಗಿ ಅವನನ್ನು ಸಂತೈಸುವ ನಿಷ್ಕಾಮ ಕರ್ಮದಲ್ಲಿ ತೊಡಗಿದ್ದಳು. ಅವನ ಚೀತ್ಕಾರ ಕ್ರಂದನಗಳು ಅವಳ ಕಿವಿಯನ್ನು ಹೊಕ್ಕು ಅವಳನ್ನು ತೊಂದರೆಗೊಳಿಸುವಷ್ಟರ ಮಟ್ಟಿಗೆ ಅವಳ ಮೈಮೇಲೆ ಸರಿಯಾಗಿ ಜ್ಞಾನವಿರಲಿಲ್ಲ.

ರಾಧಿಕೆ ತಿರುಗಿ ಬಂದಳು. "ಅಯ್ಯೋ, ಎದ್ದೇ ಬಿಟ್ಟೇನು?" ಎನ್ನುತ್ತ ಅವಳು ಅವನನ್ನು ತನ್ನೆಡೆಗೆ ತೆಗೆದುಕೊಂಡಳು. ತಾಯಿಯ ಕೇವಲ ಸ್ಪರ್ಶ ದಿಂದಲೇ ಅರವಿಂದನ ಅಳುವಿನ ರೀತಿ ಬದಲಿಸಿತು. ರಾಧಿಕೆಯು ಕೆಲ ಹೊತ್ತಿನಲ್ಲಿಯೇ ಅವನನ್ನು ಸಮಾಧಾನ ಮಾಡಿದಳು. ಅಚಲೆ ನಿರಾಶೆ ತುಂಬಿದ ಕಣ್ಣುಗಳಿಂದ ಅದನ್ನೆಲ್ಲ ನೋಡುತ್ತಲಿದ್ದಳು. 'ನಿನಗೆ ತೀರ ಸಾಕು ಬೇಕೆನ್ನುವಂತೆ ಮಾಡಿಸಿಬಿಟ್ಟನಲ್ಲವೆ ?' ರಾಧಿಕೆಯವಳನ್ನು ಕೇಳಿ ದಳು. ಅಚಲೆಯ ಅಂತರಂಗವನ್ನೆಲ್ಲ ವ್ಯಾಪಿಸಿದ್ದ ಅಪಾರವಾದ ಅಳಲಿನ ಒಂದೇ ಒಂದು ಚಿಕ್ಕ ಸ್ವರವೂ ಕೂಡ ರಾಧಿಕೆಗೆ ಕೇಳಿಸಿರಲಿಲ್ಲ.

## ೨೪

ಅಚಲೆ ತಲೆ ಸಿಡಿದು ಹೋಗುವವರೆಗೆ ವಿಚಾರ ಮಾಡಿದಳು. 'ನಾನು ಇಷ್ಟರಮಟ್ಟಿಗೆ ವಿಕಾರಗಳಿಗೆ ದಾಸಳಾಗಿದ್ದೇನೆಯೇ ?' ಅವಳು ಮತ್ತೆ ಮತ್ತೆ ಯೋಚಿಸಿದಳು. ಭೋಗಮೂಲವಾದ ವಾಸನೆಗಳ ಬಲೆಗೆ ಬಿದ್ದು ಏನಾದರೂ ಮಾಡಿಬಿಡುವದೆ? ಛೆ, ಅದು ಮನುಷ್ಯತ್ವವಲ್ಲ ಕೇವಲ ಇದೇ ವಿಚಾರದಿಂದಲೇ ಅವಳು ಅದೆಷ್ಟೋ ಕಾಲ ವಿರಾಗನನ್ನು ದೂರವಾಗಿರಿಸಿ ದ್ದಳು. ದಾರಿಯಲ್ಲಿ ಹೋಗುವಾಗ ಅವನು ಅನೇಕ ಸಲ ಅವಳ ದೃಷ್ಟಿಗೆ ಬಿದ್ದಿದ್ದ. ಆದರೆ ಅವಳು ಅವನನ್ನು ಕಂಡೂ ಕಾಣದವಳಂತೆ ಮಾಡಿ, ತನ್ನ ಮುಖ ತಿರುವಿ ಅವನ ಪರಿಚಯವಿಲ್ಲವೇನೋ ಎನ್ನುವಂತೆ ನಡೆದುಬಿಡು ವಳು. ವಿರಾಗನಿಗೆ ಅದೆಲ್ಲ ಗೊತ್ತಾಗುತ್ತಿತ್ತು. ಅವಳ ಹೃದಯದಲ್ಲಿ ಪ್ರಾರಂಭವಾಗಿದ್ದ ತಿಕ್ಕಾಟವೆಲ್ಲವನ್ನೂ ಅವನು ಸರಿಯಾಗಿ ಅರಿತಿದ್ದ. ಅವ ಅದೆಲ್ಲ ಸ್ಪಷ್ಟವಾಗಿ ಕಾಣುತ್ತಿತ್ತು. ಅವನೂ ಅದರಂತೆಯೇ ದೂರದಿಂದಲೇ ಪರಿಚಯ ಕೊಡದೆ ನಡೆದುಬಿಡುತ್ತಿದ್ದ. ಅದು ಹೇಗೋ ಯಾರಿಗೆ ಗೊತ್ತು. ಮತ್ತೆ ಅವನು ಅವಳಿಗೆ ದಾರಿಯಲ್ಲಿ ಭೆಟ್ಟಿಯಾದ. ವಿರಾಗನು ಒಮ್ಮೆ ಮಾತ್ರ ಅವಳ ಕಡೆಗೆ ನೋಡಿದ. ಅವನೇನೂ ಮಾತನಾಡಲಿಲ್ಲ ನಿಜ. ಆದರೂ ಅದರಿಂದ ನಂದಿಹೋದಂತಾಗಿದ್ದ ಜ್ಯೋತಿಯು ಮತ್ತೆ ಹೊತ್ತಿ ಕೊಳ್ಳಲಾರಂಭಿಸಿತು. ಅವಳು ತಿರಸ್ಕಾರ ಪೂರ್ವಕವಾಗಿಯೇ ಅವನನ್ನು ನೊಂದಿಸಿಬಿಡುವ ಪ್ರಯತ್ನ ಮಾಡಿದಳು.

" ನಿನಗೇನು ಹುಚ್ಚುಗಿಚ್ಚು ಹಿಡಿದಿಲ್ಲವಷ್ಟೆ? ನೀನು ಸಧವೆಯಾಗಿದ್ದೀ ನಿನ್ನ ಗಂಡನಿನ್ನೂ ಜೀವಂತನಾಗಿದ್ದಾನೆ." ಆ ಪಂಜಿನಂತಹ ಬೆಳಕು ತನ್ನ ನಾಲಿಗೆಯನ್ನು ಮತ್ತೂ ಚಾಚಿ ಉತ್ತರಕೊಟ್ಟಿತು, " ನಾನು ಸಧವೆ ಇದ್ದಿರ ಬಹುದು. ಆದರೆ ನನ್ನಲ್ಲಿ ಮತ್ತು ವಿಧವೆಯರಲ್ಲಿ ಯಾವ ಅಂತರವುಂಟು?"

" ನಿನ್ನ ಗಂಡನಿನ್ನೂ ಜೀವಿಸಿದ್ದಾನೆ."

" ಅವನು ಇದ್ದೂ ಇಲ್ಲದಂತಿದ್ದಾನೆ."

" ವಿರಾಗನ ಮೇಲಿನ ನಿನ್ನ ಪ್ರೇಮವು ವಾಸನಾಮಯವಾದುದಾಗಿದೆ."

" ಹೌದು. ಆದರೆ ವಾಸನಾವಿರಹಿತ ಪ್ರೇಮವೆಂಬುದಾದರೂ ಎಲ್ಲಿದೆ?"

" ಹಾಗಿರದಿದ್ದರೂ ನೀನು ಹಾಗೆ ನಡೆಯಲು ಕಲಿಯಬೇಕು ಅದು ನಿನ್ನ ಪತ್ನೀ ಧರ್ಮವಾಗಿದೆ."

" ನನ್ನನು ಪತ್ನಿಯೆಂದೆನ್ನುವ ಪತಿಯು ಇಲ್ಲವೇ ಇಲ್ಲ. ಆ ಪತಿ ಯೆಂದೆನ್ನಿಸಿಕೊಂಡವನ ದೃಷ್ಟಿಗೆ ನಾನೆಂದೋ ಸತ್ತುಹೋಗಿದ್ದೇನೆ. ಅವರ ದೃಷ್ಟಿಯಿಂದಲೇ ಅವರು ನನಗೆ ಇಲ್ಲದಾಗಿದ್ದಾರೆ."

" ಆದರೆ ಶೀಲ?"

" ಆ ಶೀಲದ ವ್ಯಾಖ್ಯೆಯಾದರೂ ಏನು? ದಿನದ ಬೆಳಕಿಗೆ ಹೆದರಿ ಹೊರಗೆ ಬರಲಾರದೆ ಅಂತರಂಗದಲ್ಲಿಯೇ ದಬ್ಬಿ ಹತ್ತಿಕ್ಕಲ್ಪಟ್ಟ ಕುತ್ಸಿತವಾದ ಲಾಲಸೆಗಳಿಂದ ಕುದಿಯುತ್ತಿರುವ ಹೀನ—ದರಿದ್ರವಾದ ಕೀಳು ಬಾಳುವೆ ಗಿಂತ ತನ್ನ ಮನದ ಬಯಕೆಗಳನ್ನರಿತು ಅವನ್ನು ಧೈರ್ಯವಾಗಿ ಒಪ್ಪಿ ಕೊಳ್ಳುವದರಲ್ಲಿಯೇ ಸುಶೀಲತೆಯು ನಾಲವಡಗಿದೆಯಲ್ಲದೆ ಬೇರೆ ಇಲ್ಲ."

" ಗಂಡನಿನ್ನೂ ಬದುಕಿದ್ದ ಸ್ತ್ರೀಯೊಬ್ಬಳು ಪರಪುರುಷರ ಕಡೆಗೆ ನೋಡುವದು ಶೀಲಭ್ರಷ್ಟತೆ."

" ಅನೇಕ ವರ್ಷಗಳಿಂದ ನನಗವರ ದರ್ಶನ ಕೂಡ ಆಗಿಲ್ಲ. ಅಲ್ಲದೆ ಅಂಥ ಹೊಲಸು ಮನುಷ್ಯನನ್ನು ಪತಿಯೆಂದು ಹೇಳಿಕೊಂಡು ಅದರಲ್ಲಿಯೇ ಸುಖಪಟ್ಟುಕೊಂಡಿರುವದೇ? ಅದೆಂದಿಗೂ ಆಗದ ಮಾತು"

ಹೀಗೆಂದು ಆ ಜ್ಯೋತಿ ಮತ್ತಿಷ್ಟು ಹೊತ್ತಿಕೊಂಡು ಉರಿಯಲಾರಂಭಿ ಸಿತು. ಅದರ ಭಯಂಕರವಾದ ಕುಣಿತದ ಸಪ್ಪಳಕ್ಕೆ ಉಳಿದ ಯಾವ ಸ್ವರವೂ ಕೇಳಲಾರದಾಯಿತು.

೨೫

ವಿರಾಗ, ನೀವು ಈ ನನ್ನ ಪತ್ರವನ್ನು ಕಂಡು ಬೆಚ್ಚಿ ಬೀಳಬಹುದು. ಆದರೆ ಎಲ್ಲ ಮಾತುಗಳನ್ನೂ ಒಮ್ಮೆ ನಿರ್ಧರಿಸಿಬಿಡುವ ಪಣ ತೊಟ್ಟಿದ್ದೇನೆ ನಾನಿಂದು. ಮನದ ಉಯ್ಯಾಲೆಯು ಮೇಲೆ ಆ ಕಡೆಯಿಂದ ಈ ಕಡೆಗೆ ತೂಗಿ ತೂಗಿ ನನ್ನ ಕಣ್ಣಿಗೆ ಕತ್ತಲೆಗೂಡಿದಂತಾಗಿದೆ ಅದರಿಂದೊಮ್ಮೆ ಎಲ್ಲಿ ಯಾದರೂ ತಪ್ಪಿ ಬೀಳಬೇಕು; ಇಲ್ಲವಾದರೆ ಧೈರ್ಯವಾಗಿ ನಾನೇ ಜಿಗಿದು ಬಿಡಬೇಕು. ನಾನು ತೂಗುತ್ತಿರುವ ಈ ಉಯ್ಯಾಲೆಯ ಕೆಳಗಿನ ನೆಲ ವೆಂತಹ ಕಂಟಕಮಯವಾಗಿದೆಯೆಂಬುದನ್ನು ನಾನು ಬಲ್ಲೆ. ತಪ್ಪಿ ಕೆಳಗೆ ಬಿದ್ದರೆ ತಿಳಿಯದೆ ತಲೆಯೊಡೆದು ಸತ್ತುಹೋಗುವೆ; ಧೈರ್ಯವಾಗಿ ನಾನೇ ಇಳಿದರೂ ಕೆಳಗಿರುವ ಮುಳ್ಳು ಬುಚ್ಚದಿರಲಾರವು. ಆದರೆ ವಿರಾಗ, ನನಗೆ ಅಸಹಾಯಳಾಗಿ ಸಾಯುವದು ಬೇಕಿಲ್ಲ. ನಾನು ಜೀವಂತವಾಗಿದ್ದು, ಬಾಳಿ ಬದುಕಬೇಕು, ಬೆಳೆದು ಅರಳಬೇಕು. ಇದು ನನ್ನ ಕದಲಲಾರದ ನಿಶ್ಚಯ.

ವಿರಾಗ, ನಾನೊಮ್ಮೆ ಹೀಗೇ ಕತ್ತಲೆಯಲ್ಲಿ ಕುಳಿತಿದ್ದೆ. ಆಗ ನೀವು ಬಂದಿರಿ. ನಾನೆಂದೆ, "ಇದೇನು ಈಗ ಬರೋಣವಾಯಿತು?" ಆಗ ನೀವೇನು ಉತ್ತರಕೊಟ್ಟಿರಿ—"To lighten the darkness" ನಿಮಗೆ ನೆನಪಾಗುತ್ತದೆಯೇ ಅದು? ಕಣ್ಣನ್ನು ಕುರುಡಾಗಿಸುತ್ತಿರುವ ನನ್ನ ಬಾಳ ನ್ನಾವರಿಸಿರುವ ಕತ್ತಲೆಯನ್ನು ಕಳೆಯುವ ನಂದಾದೀಪವಾಗುವಿರಾ? ಇನ್ನೂ ಮುಚ್ಚುಮರೆಯೇಕೆ? ವಿರಾಗ, ನನಗೆ—ನನಗೆ ನೀವು ಬೇಕು. ಮತ್ತು ನಾನು ತಾಯಿಯಾಗಬೇಕು.

ವಿರಾಗ, ನೀವೂ ನನ್ನನ್ನು ಪಾಪಿಯೆಂದೆನ್ನಬಹುದೆ? "ನಿಮ್ಮ ಮನದೆಲ್ಲ ಆಶೆ ಆಕಾಂಕ್ಷೆಗಳನ್ನು ಜಯಿಸಿ ಜೀವಿಸಿರಿ" ಎಲ್ಲರೂ ಹೇಳು ವದು ಅದನ್ನೇ. ಆದರೆ ಬಯಕೆಗಳ—ಕಾಮನೆಗಳ ಪೂರ್ತಿಯಾಗದೆ ಪೂರ್ಣತೆ ಬಾರದು. ಪೂರ್ಣತೆಯಿಲ್ಲದೆಯೇ ಕಾಮನೆಗಳನ್ನು ಜಯಿಸಲು ಹೇಗೆ ಸಾಧ್ಯ? ವಿರಾಗ, ಇನ್ನೂ ಪ್ರಜೋತ್ಪತ್ತಿಯೆಸಗಿಯೂ ಈಶ್ವರನಿಗೂ ಕೂಡ ಕಾಮನೆಗಳನ್ನು ಜಯಿಸುವದಾಗಲಿಲ್ಲವಲ್ಲವೆ?

ಆ ಮಹಾಭಾರತ! ಆ ಭಾಗವತ! ನನ್ನದೇ ವಿಕೃತ ದೃಷ್ಟಿಯಿದ್ದಿರ ಬಹುದು. ಆದರೆ ಆ ಭಾರತ ಭಾಗವತಗಳು ಇದೇ ಮಾತನ್ನೇ ನನಗೆ

ಹೇಳಿದವೆ—ಧೈರ್ಯವಾಗಿ ಬಾಳುವದೇ ಭೂಷಣವಾದುದು. ಜೀವಂತವಾಗಿದ್ದುಕೊಂಡೂ ಮರಣವನ್ನುಪಭೋಗಿಸುವದೇ ಅಧೋಗತಿ ಮತ್ತು ಆತ್ಮನಾಶ.

ನಾನು ಜನರ ಭೀತಿಯನ್ನು ಎಳ್ಳಷ್ಟೂ ಲೆಕ್ಕಿಸುವದಿಲ್ಲ. ಎಷ್ಟೆಂದರೂ ಹೆರವರು ಹೆರವರೇ. ಅವರು ಹತಾಶಳಾದ ನನ್ನನ್ನು ಕಂಡು, ಬೆದರಿದವರ ಮೇಲೆ ಕಪ್ಪೆ ಬಿಡುವಂತೆ, ನನ್ನ ದುಃಖದ ಗಾಯಗಳ ಮೇಲೆ ಬರೆ ಕೊಟ್ಟರೂ ಅಷ್ಟೇ. ನನ್ನ ಸುಖಜೀವವನ್ನು ಕಂಡು ವೈಷಮ್ಯ ಭಾವನೆಯಿಂದ ಮೂಗು ಮುರಿದರೂ ಅಷ್ಟೇ. ಅದರಿಂದ ನಾನೇನೂ ತೊಂದರೆಪಟ್ಟುಕೊಳ್ಳುವದಿಲ್ಲ. ಯಾಕೆಂದರೆ ವಿರಾಗ, ಬೇರೆಯವರ ಕಡೆಗೆ ನಿರ್ವತ್ಸರವಾದ ದೃಷ್ಟಿಯಿಂದ ನೋಡುವವರೆಷ್ಟು ಜನ ನೀನೆನ್ನಬಹುದು, ತನ್ನ ಸುಖದ ದಾರಿಯಲ್ಲಿ? ಅಡ್ಡಿಯಾಗಿರುವ ಜನತೆಯೆಂಬ ಅವ್ಯಕ್ತದ ಮೇಲೆ ವ್ಯಕ್ತಿಯು ನಿರಾತಂಕವಾಗಿ ಹಲ್ಲು ಕಡಿದು ಸಮಾಧಾನಪಟ್ಟುಕೊಳ್ಳುತ್ತಾನೆಂದು. ಆದರೆ ಹಾಗೆ ಮಾಡದೆ ಇರುವವರೆಷ್ಟು ಜನ? ತಾಯಿಯ ಗರ್ಭಕೋಶದಿಂದ ಹೊರಬಿದ್ದ ಪ್ರತಿಯೊಬ್ಬ ಮನುಷ್ಯನೂ ಈ ಬಾಳೆಂಬ ಮಹಾವಾರಿಧಿಯ ದಂಡೆಯಲ್ಲಿ ಸುಖದ ಸಿಂಪುಗಳನ್ನು ಆರಿಸಲು ಹೊರಡುತ್ತಾನೆ. ಅವನ ಕೈಗೆ ಬರಿದಾದ ಶಿಂಪುಗಳು ಬಂದುದಾದರೆ ಅವನು ಅವನ್ನಿಟ್ಟುಬಿಟ್ಟು ಗುಪ್ತವಾಗಿ ಬೇರೆಯವನ್ನು ದೊರಕಿಸಲು ಹವಣಿಸುತ್ತಾನೆ. ಹೀಗೆ ಅವನ ಕಾರ್ಯ ನಡೆದಿರುವಾಗ ಜನರ ಕಣ್ಣಿಗೆ ಬಿದ್ದುದು ಪಾಪ ಇಲ್ಲದೆ ಅವರ ಕಣ್ಣು ತಪ್ಪಿಸಿ ನಿರಂಕುಶವಾಗಿ ಅವನು ಮಾಡುತ್ತ ನಡೆಯುವದೆಲ್ಲ ಪುಣ್ಯ. ಮಾನವೀ ವ್ಯವಹಾರಗಳ ಪಾಪ ಪುಣ್ಯಗಳನ್ನು ನಿರ್ಧರಿಸುವ ಸಾಮಾಜಿಕರ ವರೆಗಲ್ಲು ಇದೇ ಅಲ್ಲವೆ? ಇಲ್ಲ. ನಾನು ಜನರಿಗೆ ಅಂಜುವದಿಲ್ಲ. ನಾನು ಸರಳವಾಗಿ ಅವರೆದುರಿಗೆ ನಿಂತೇ ನುಡಿಯಲು ಸಿದ್ಧಳಾಗಿದ್ದೇನೆ. "ಹೌದು. ನನಗೆ ಸಂಸಾರ ಸುಖದ ಇಚ್ಛೆ ಯಾಕಾಗಬಾರದು? ನಾನು ನಿಮ್ಮ ಈ ಹುಂಬ ಬಂಧನಗಳನ್ನು ಎಳ್ಳಷ್ಟೂ ಲಕ್ಷಿಸುವದಿಲ್ಲ. ನಾನು ಅವುಗಳ ತೊಂದರೆಯಿಂದ ಒಂದಿಷ್ಟೂ ಅಳುಕುವದಿಲ್ಲ. ನಿಮ್ಮ ಈ ಗಿಲೀಟಿನ ನೀತಿಯು ಅವಶ್ಯಕತೆ ಒಂದಿನಿತೂ ಇಲ್ಲ. ನಿಮ್ಮ ಹಾಗೆ ಅಂತರಂಗವನ್ನು ಹಳಸಿದ ಹೊಲಸು ವಿಚಾರಗಳಿಂದ ತೊಳೆಯಗೊಟ್ಟು ಬಹಿರಂಗದಲ್ಲಿ ಬೇರೆಯವೇ ರೀತಿನೀತಿ

ಗಳನ್ನು ತೋರ್ಪಡಿಸುತ್ತ ನಾನು ಸದಾಚಾರಿಯಾಗಿದ್ದೇನೆ, ಸುಶೀಲಳಾಗಿದ್ದೇನೆಂದು ಮೆರೆಯಲೆಳಸುವವರ ಅಟ್ಟಹಾಸವನ್ನು ಅಣಕಿಸುವ ಹವ್ಯಾಸ ನನಗಿಲ್ಲ. ನೀವು ಪ್ರಸ್ಥಾಪಿಸಿದ ಮಾನವೀ ಸಂಕೇತಗಳ ನೀತಿಮಂದಿರವನ್ನು ನಾನು ಇಲ್ಲಿಯ ವರೆಗೂ ನೋಡುತ್ತ ಬಂದಿದ್ದೇನೆ. ಅದು ಅಲ್ಲಲ್ಲಿ ಬಿದ್ದು ಹೋಗಿದೆ. ಅಲ್ಲಲ್ಲಿ ಅದನ್ನು ಮತ್ತೆ ಸರಿಪಡಿಸುವ ಕೆಲಸವೂ ಸಾಗಿದೆ. ಹೀಗಿರುವಾಗ ಅದು ಆಚಂದಾರ್ಕವಾಗಿ ಅಬಾಧಿತವಾದುದೆಂಬ ಅಸಮರ್ಥ ನೀಯುವಾದ ಕೆಲಸಕ್ಕೆ ಬಾರದ ಹೆಮ್ಮೆಯಿಂದೇನು ಫಲ? ನೀವೇ ಅದಕ್ಕೆ ಅನೇಕ ಕಡೆಗೆ ಕನ್ನ ಕೊರೆದಿದ್ದೀರಿ. ಒಳಗಿನ ಸತ್ಯವನ್ನರಿಯುವದಕ್ಕೆಂದು ನೀವು ಕೂಡ ಅದನ್ನು ಕೆದರಿ ಕೆದರಿ ಪೊಳ್ಳುಗೆಡವಿದ್ದೀರಿ. ನಾನೂ ಕೂಡ ಅದನ್ನು ಕೆದರಿ ನೋಡುವವಳೇ.

ವಿರಾಗ, ಮಾನವ ಪ್ರಾಣಿಯು ಒಂಟಿಯಾಗಿ ಬಾಳುವದು ನಿಸರ್ಗಕ್ಕೆ ಸಲ್ಲದುದೆಂದು ನನಗೆ ತೋರುತ್ತದೆ. ಕೃತ್ರಿಮವಾದ ಮಾನವ ನಿರ್ಮಿತ ಬಂಧನಗಳು ಮನುಷ್ಯನನ್ನು ಒಂಟಿಯಾಗಿರಿಸಲು ನೋಡಿದಲ್ಲಿ ಆ ಭಯಂಕರವಾದ ಒಂಟಿಗತನವು ಅವನನ್ನು ಹಸಿದ ಕ್ರೂರವಾದ ವನ್ಯ ಪಶುವಿನಂತೆ ತನ್ನ ಭಕ್ಷ್ಯವನ್ನಾಗಿಸದೆ ಬಿಡದು. ದೇಹ ಮತ್ತು ಮನದ ಒಂಟಿಗತನದ ಭಯಾನಕತೆಯನ್ನು ಸಹಚರಿಯೊಬ್ಬನ ಮಧುರ ಸಂಗಮದಿಂದ ತಣಿಸದಿದ್ದಲ್ಲಿ ಅಂಥ ಮನುಷ್ಯನ ಮನದಲ್ಲಿ ಜಗತ್ತಿನ ವಿಷಯದಲ್ಲಿಯೇ ದ್ವೇಷದ ಬೇಗೆ ಹಬ್ಬದಿರದು. ತನ್ನಂತೆಯೇ ಇತರರೂ ತಳಮಳಿಸುತ್ತಲೇ ಇರಬೇಕೆಂಬ ಅತೃಪ್ತಿಯ ಪಾಶವೀ ಲಾಲಸೆಯೊಂದು ಅವನಲ್ಲಿ ಉಂಟಾಗದಿರಲಾರದು. ಸಮಾಜದ ವಿಷಯವಾಗಿ ಆಸ್ಥೆ ತಳೆದು ಹೆರವರ ಸುಖದುಃಖಗಳಲ್ಲಿ ಒಂದಾಗಿ ಬೆರೆತು, ಸ್ವಾರ್ಥಪರಾರ್ಥಗಳ ಸರಿಬೆರಕೆಯಿಂದಾದ ತುಂಬು ಜೀವನವನ್ನು ಸಾಗಿಸುವ ಬುದ್ಧಿಯ ಸಮತೂಕವನ್ನು ರಕ್ಷಿಸಿಕೊಳ್ಳಲು ಮನುಷ್ಯನಿಗೆ ತನ್ನ ವಿಕಾರಗಳ ಮಿತವಾದ ಉಪಶಮನವೆನಿಸುವ ಸಾಧನವಿಲ್ಲದೆ ನಡೆಯದು.

ತಾಯಿಯ ಮೇಲೆ ಕುಡಿಯುತ್ತಲಿರುವ ಮಗುವಿನ ದೃಶ್ಯವನ್ನು ನೋಡಿದಾಗಲೆಲ್ಲ ನನಗೆ ನನ್ನ ಜೀವನದ ಪೂರ್ಣತೆಯ ತೀವ್ರವಾದ ಅನುಭವವಾಗುತ್ತದೆ. ನಕ್ಕು ಕಲೆದು ಸಂತಸಬಡುವ ಪತಿ-ಪತ್ನಿಯರನ್ನು

ನೋಡಿದಾಗಲೆಲ್ಲ ನನಗೆ ನಿರಾಶೆಯಾಗುತ್ತದೆ. ಎಲ್ಲೆಲ್ಲಿ ಏನೇನು ನೋಡಿದರೂ ಅದೇ, ಅದೇ ನನ್ನ ತೃಪ್ತಿಹೊಂದದಿದ್ದ ಬಯಕೆಯ ನೆನಪು ಮರುಕಳಿಸುವದು. ನನಗೆ ಒಮ್ಮೊಮ್ಮೆ ಬಹಳ ಹೆದರಿಕೆಯಾಗುತ್ತದೆ—ಇದೆಲ್ಲ ನನ್ನ ಸುತ್ತಲಿನ ಜಗದ ಸೌಖ್ಯಕ್ಕೇ ನನ್ನ ದೃಷ್ಟಿ ತಾಕದಿರಲಾರಲೆಂದು.

ವಿರಾಗ, ನನಗೀಗ ಈ ಮಾತು ನಿಶ್ಚಿತವಾಗಿ ತಿಳಿದಿದೆ—ವ್ಯಕ್ತಿಯ ಒಂದು ಜೀವನದಲ್ಲಿಯೇ ವ್ಯಕ್ತಿತ್ವದ ಅಂತವಾಗುವದಿಲ್ಲ; ಆಗಲಾರದು. ವ್ಯಕ್ತಿತ್ವದ ಸ್ವರೂಪವೇ ಅಂತಹದಾಗಿದೆ—ಅದಕ್ಕೆ ಜಗತ್ತಿನೊಡನೆ ಸಂಬಂಧ ಬರಲೇಬೇಕು. ಅವೆರಡರ ನಡುವಿನ ಭಿನ್ನತೆಯು ಅಳಿವಿನಲ್ಲಿಯೇ ವ್ಯಕ್ತಿತ್ವದ ವಿಕಾಸವಡಗಿದೆ. ಒಲವು, ದುಡಿತ, ಸಂತಾನ ಈ ಮೂರರಲ್ಲಿ ಯಾವುದೊಂದಾದರೆ ಸಾಕು ಎನ್ನುವಂತಿಲ್ಲ. ಅವು ಮೂರೂ ಬೇಕು. ಈ ಮೂರೂ ಸಂಗತಿಗಳ ಮುಖಾಂತರವಾಗಿ ಹೊರಪಿನ ಜಗತ್ತಿನೊಡನೆ ಬರುವ ಸಂಬಂಧದಿಂದಲೇ ವ್ಯಕ್ತಿತ್ವದ ಹಸಿವು ಹಿಂಗಬಲ್ಲದು; ಅದರ ಸಂಪೂರ್ಣವಾದ ಉನ್ಮೀಲನವಾಗಬಲ್ಲದು. ಇಲ್ಲವಾದರೆ ಆ ಒಂಟಿಗತನದ ಸಪ್ಪೆ ಬಾಳಿನ ನೀರಸತೆಯು ಆ ವ್ಯಕ್ತಿಯನ್ನು ಒಳಗಿಂದೊಳಗೆ ಕಟ್ಟಿಗೆಯೊಳಗಿನ ಹುಳು ಕೊರೆದಂತೆ ಕೊರೆಯದಿರದು.

ಈ ಸಮಗ್ರ ವಿಶ್ವದಲ್ಲಿ ಒಂಟಿಯಾಗಿ ಬಾಳುವ ಪ್ರಾಣಿ ಒಂದಾದರೂ ಇದೆಯೇ! ಅಂತಹ ಒಂದಾದರೂ ವಸ್ತು ನೋಡಲು ದೊರೆತೀತೆ? ಇಲ್ಲ. ವಿರಾಗ, ಒಂದೂ ಇಲ್ಲ. ಶಿಲ್ಪಿ ಹೇಳಿದ ಮಾತು ಅಕ್ಷರಶಃ ಸತ್ಯವಾದುದಾಗಿದೆ: "Nothing in the world is single—" ಪ್ರತಿಯೊಬ್ಬರಿಗೂ ಬಾಳನ್ನು ಬಲವಾಗಿ ಅಂಟಿ ನಿಲ್ಲುವಂತೆ ಪ್ರೇರೇಪಿಸುವ ಕಡಿದೊಗೆಯಲಾರದ ಪ್ರೇಮಪಾಶವೊಂದಿದೆ, ಕರುಳಿನ ಕರೆಯಿದೆ. ಆದರೆ ನಾನು? ನಾನೊಬ್ಬಳೇ ಒಂಟಿಗಳಾಗಿರಬೇಕೆ? ಈ ಭಯಪ್ರದವಾದ ಬಾಳಿನ ಕಗ್ಗಾಡಿನಲ್ಲಿ ನಾನು ಎಡವುತ್ತ ಮುಗ್ಗರಿಸುತ್ತ ನಡೆದಿರುವಾಗ, ಎಲ್ಲರೂ, ಎಲ್ಲರೂ ನನ್ನನ್ನು ಬಿಟ್ಟು ಬೇರೆಡೆಗೆ ಹೋಗುತ್ತಿರುವದನ್ನು ನೋಡಿಯೂ ನಾನು ಸೈರಿಸಿಕೊಂಡಿರುವದು ಹೇಗೆ? ನೀವೇನೆನ್ನುವಿರಿ, ವಿರಾಗ? ಒಳಗೆ ಕರುಳುಗಳಲ್ಲೆಲ್ಲ ಕಲಮಲವೆಬ್ಬಿಸಿ ಕುದಿದೇಳುತ್ತಿದೆ ಈ ಜ್ವಾಲಾಮುಖಿ. ಅದನ್ನು ತಡೆದಿರುವದು ಹೇಗೆ? ಇಲ್ಲ. ಅದು ಸಾಧ್ಯವಿಲ್ಲ. ಅದನ್ನು ಹೃದಯ

ದಲ್ಲಿಯೇ ಹುಗಿದಿಡುವದು ಸಾಧ್ಯವೇ ಇಲ್ಲ. ನನ್ನ ಹೃದಯ ತುಂಬಿ ಹೊರ ಚಲ್ಲುವಂತಾಗಿದೆ. ಆದರೆ....? ಆದರೆ ಹೊರಗೆ ಆಡಿ ತೋರಿಸುವದಕ್ಕೂ ಕಳವು. ಹಾಗೇನಾದರೂ ಆದಪಕ್ಷದಲ್ಲಿ ಎಲ್ಲರೂ ನನಗೆ ಹೆಸರಿಡುವವ ರೆಂಬುದರಲ್ಲಿ ಸಂಶಯವಿಲ್ಲ—"ಇವಳೇ ಅವಳು—ಆ ನೀತಿಗೆಟ್ಟ ಹೆಂಗಸು, ವ್ಯಭಿಚಾರಿಣಿ, ವೇಶ್ಯೆ" ಎಂದು ಅವರು ನನ್ನ ಕಡೆಗೆ ಬೊಟ್ಟುಮಾಡಿ ತೋರಿಸಿ ತಮ್ಮ ಮಡಿವಂತಿಕೆಯ ಡೌಲನ್ನು ಮೆರೆಯಿಸದಿರಲಾರರು. ಅದೇ ನಾನು ಕುಮಾರಿಕೆಯಾಗಿದ್ದ ಪಕ್ಷದಲ್ಲಿ, ಮಹಾಕಾರ್ಯ ಮಾಡಿದವ ರಂತೆ—ಮೂಗು ಮೇಲೆ ಮಾಡಿಕೊಂಡು ಮೆರೆಯದಿರುತ್ತಿರಲಿಲ್ಲ. ಒಂದು ವೇಳೆ ವಿಧವೆಯಾಗಿದ್ದರೂ ಕೂಡ ವಿರಾಗ ನಾಲ್ಕು ಜನರೆದುರಿಗೇ ನಾನು ನಿಮ್ಮ ಆಶ್ರಯಕ್ಕೆ ಬರುತ್ತಿದ್ದೆ. ಆದರೆ ಈಗ? ಇದನ್ನು ಅಳುಕಿಸಿಬಿಡಲೆ? ನಾನೇನು ಮಾತನಾಡುತ್ತೇನೆ? ಕುಂಕುಮನ್ನ ಳುಕಿಸುವದೆ? ನನಗೆ ಹುಚ್ಚು ಗಿಚ್ಚು ಹಿಡಿದಿಲ್ಲವಷ್ಟೆ? ಜನರೇನೆಂದಾರು? ಬಾಬಾ, ಮಾಣಿಕ. ಭಾವೂ ಸಾಹೇಬ? ಆದರೆ ವಿರಾಗ, ನಿಜವಾಗಿ ಹೇಳಲೇ? ಪ್ರತಿದಿನ ಮುಂಜಾನೆ ಈ ಕುಂಕುಮವನ್ನಿಟ್ಟುಕೊಳ್ಳುವದೆಂದರೆ ಹಣೆಗೆ ಬರೆಕೊಟ್ಟಂತೆನ್ನಿಸುತ್ತದೆ. ಎಷ್ಟೇ ಮರೆತುಬಿಡುವದೆಂದು ನಿಶ್ಚಯಿಸಿದರೂ ಈ ನಿರ್ಜೀವ ಸೌಭಾಗ್ಯದ ನೆನಪು ನನ್ನನ್ನು ಎಡೆಬಿಡದೆ ಅನುಸರಿಸಿ ಅಸ್ವಸ್ಥಳನ್ನಾಗಿಸುತ್ತದೆ. ಈ ನನ್ನ ದುರ್ದಮ್ಯವಾದ ಮನಸ್ಸನ್ನು ಕೊಂಡುಬಿಡುವದಕ್ಕೆ ನಾನು ಮಾಡಬೇ ಕಾದುದೊಂದೂ ಉಳಿಯಲಿಲ್ಲ. ಎಲ್ಲ ಮಾಡಿ ಮುಗಿಸಿದೆ. ಜಗತ್ತಿನೊಡನಿದ್ದ ಅದರ ಸಂಬಂಧವನ್ನೇ ಕಿತ್ತೊಗೆದೆ. ಆದರೂ ಅದು ಸಾಯಲಿಲ್ಲ; 'ಧರ್ಮ' 'ಧರ್ಮ'ವೆನ್ನುತ್ತಾರಲ್ಲ ಅದರಲ್ಲಿಯೂ ಮುಳುಗಿ ನೋಡಿದೆ. ಅದರಿಂದಂತೂ ನನ್ನ ಮನದ ಬೇಗೆ ಮತ್ತೂ ಪ್ರದೀಪ್ತವಾಯಿತು. ಮಾನವ ಜೀವನದ ಧ್ಯೇಯವು ದ್ವಿವಿಧವಾಗಿದೆಯಲ್ಲವೆ? ಒಂದು ತನ್ನನ್ನು ತಾನರಿತುಕೊಳ್ಳು ವದು, ಎರಡನೆಯದಾಗಿ ಬಾಹ್ಯ ಜಗತ್ತನ್ನರಿಯುವದು. ಎರಡರಲ್ಲಿ ಒಂದನ್ನು ಬಿಡಲು ಬಾರದು. 'ಜೀವನದ ನೊಗ್ಗೆ ಅರಳಿ ಹೂವಾಗುವ ಮೊದಲಿಗೇ ಅದನ್ನು ಚಿವುಟಿಬಿಡೆಂದು' ಧರ್ಮವು ನನಗೆ ಹೇಳುವದಿಲ್ಲ. ಆದರೆ ನಾನು ಈಗ ಮಾಡುತ್ತಿರುವದೇನು? ಜೀವಂತವಾಗಿ ಬದುಕುವದನ್ನು ಬಿಟ್ಟು ಓಡಿಹೋಗಲೆಳಸುತ್ತಿರುವೆನಲ್ಲವೆ? ಅದೇಕೆ? ಧರ್ಮವು ನನಗೆ ಈ ಫಲ್ಪಾ

ಯನ ಸೂತ್ರವನ್ನುಪದೇಶಿಸುವದಿಲ್ಲ. ಅದಕ್ಕೆ ಸ್ತ್ರೀಪುರುಷರಿಬ್ಬರೂ ಸಮಾನರು. ಧರ್ಮಕ್ಕೆ ಅವರಲ್ಲಿ ಹಿಂಚುಮುಂಚು ಎಂಬುದಿಲ್ಲ; ಹೆಚ್ಚುಕಡಿಮೆ ಇಲ್ಲ; ಯಾವ ತರದ ಪಕ್ಷಪಾತವೆಂಬುದೇ ಧರ್ಮಕ್ಕೆ ಗೊತ್ತಿಲ್ಲ. 'ಆತ್ಮ ರಕ್ಷಣೆ ಮತ್ತು ಜಾತಿ ರಕ್ಷಣೆ ಇವು ನಿಮ್ಮ ಕರ್ತವ್ಯವಾಗಿವೆ'ಯೆಂದು ಧರ್ಮವು ಎಲ್ಲರಿಗೂ ಸಾರಿ ಸಾರಿ ಹೇಳುತ್ತದೆ. ನನ್ನ ಮನಸ್ಸು ಸುಳ್ಳು ಧರ್ಮದ ರೂಪದಿಂದ ಉಸಿರುಗಟ್ಟಿ ಸಾಯುವದಿಲ್ಲ. ಅದಿಂದು ತುಂಬು ಬಾಳುವೆಯನ್ನು ಬಾಳಬೇಕೆಂಬ ಹಿರಿಯಾಸೆಯಿಂದ ಕೂಡಿದುದಾಗಿದೆ. ಅದು ಸಂಪೂರ್ಣವಾಗಿ ಜೀವಂತವಾಗಿದೆ.

ವಿರಾಗ, ನಾನೇನು ಮಾಡಬಾರದ ಪಾಪ ಮಾಡಿದ್ದೇನೆ? ನನಗೂ ತಾಯಿಯಾಗಬೇಕೆಂದು ಯಾಕೆ ಅನ್ನಿಸಬಾರದು? ನಾನು ಸುತ್ತೆಲ್ಲ ಕಣ್ಣು ಹರಿಸಿ ನೋಡುತ್ತೇನೆ, ಜಗದೆಲ್ಲ ಸಜೀವ ನಿರ್ಜೀವ ವಸ್ತುಗಳೆಲ್ಲ ನನಗೆ ಹೇಳುತ್ತಿವೆ, "ನೀನಿನ್ನೂ ಪೂರ್ಣತೆ ಪಡೆಯಲಿಲ್ಲಿ." ಬೇಕಾದಷ್ಟು ಹುಡುಗಿಯರನ್ನು ಸಾಕಿದೆ; ಅವರೊಡನೆ ಅಚ್ಚಳಿಯದ ಪ್ರೀತಿಯಿಂದ ನಡೆದುಕೊಂಡೆ. ಆದರೇನು? ಅವರು ತಮ್ಮ ತಮ್ಮ ಮನೆಗೆ ಹೋಗಿ ಮತ್ತೊಬ್ಬಳನ್ನು 'ಅವ್ವಾ' ಎಂದು ಮಮತೆಯಿಂದ ಸಂಬೋಧಿಸುವರು. ನಾನೂ ನನ್ನ ಮನೆಗೆ ತೆರಳುವೆ. ಆದರೆ ಅಲ್ಲೇನಿದೆ? ನಾನೊಬ್ಬಳೇ ಒಬ್ಬಳು. ಒಂದೇ ಒಂದು ಅಂತಪಾರವಿಲ್ಲದ ಭಯಂಕರವಾದ ಏಕಾಂತ. ಸಂಜೆಗೆ ತಮ್ಮ ಮರಿಗಳ ಗೂಡಿನಲ್ಲಿರುವ ಮರಿಗಳ ಚುಂಚಿನಲ್ಲಿ ಚುಂಚನ್ನಿಟ್ಟು ಹಕ್ಕಿಗಳು ಕಲರವಗೈಯುವವು. ಅಲ್ಲಿ ಆಚೆಗೆ ಬೇಲಿಯಲ್ಲಿ ಅರಳಿರುವ ಹೂಗಳೆಲ್ಲ ಕುಣಿದು ನಕ್ಕು ನಲಿಯುತ್ತಲಿವೆ, ಎಳೆಗರುಗಳು ಆಕಳುಗಳ ಹಿಂದೆ 'ಹಂಬಾ' ಎಂದು ಒದರುತ್ತಲಿವೆ, ಜೀವದ ರಸದುಂಬಿ ಹಿಗ್ಗಿ ಹರಹಿ ನಿಂದಿರುವ, ಸಳಸಳ ಸರಿದಾಡುತ್ತಿರುವ, ಪುಟಪುಟನೆ ಓಡುತ್ತ, ಚಿಮ್ಮಿ ನೆಗೆದಾಡುತ್ತಿರುವ, ತೊದಲು ನುಡಿದು ತಮ್ಮ ಆನಂದವನ್ನು ಹಂಚಿ ಹರಹಿ ಸಹಸ್ರಾರು ಪಾಲು ಮಾಡಲು ಹವಣಿಸುತ್ತಿರುವ ಈ ಸೃಷ್ಟಿಯ ಲೆಕ್ಕವಿಲ್ಲದ ಎಳೆಜೀವಗಳು ನನಗೆ ಕಾಣುತ್ತಿವೆ. ಆದರೆ ನಾನು? ಒಂಟಿ, ಒಂಟಿ. ತೀರ ಒಬ್ಬಳೇ ಒಬ್ಬಳು. ಹೀಗೆ ಇಲ್ಲಿಯೇ ಕತ್ತಲೆಯಲ್ಲಿ ಕುಳಿತುಬಿಡುತ್ತೇನೆ. ವಿರಾಗ, ನಾನೊನ್ನೊನ್ನೆ ವಿಚಾರಮಾಡುತ್ತೇನೆ, ನನಗೆ ಒಳಗಿನ ತೀರ

ಒಳಗಿನ ದನಿಯೊಂದು ಹೇಳುತ್ತದೆ ಹೌದೆಂದು....ಆದರೆ ಈ ನನ್ನ ಎನಿಸಿಕೆ ಸತ್ಯವಾದದ್ದೇ? ನಿಜವಾಗಿಯೂ ಹಾಗಾದೀತೆ? ಹಾಗಾಗದೆ ಹೋದರೆ? ಅದು ಅಸಾಧ್ಯವೆಂದಾದರೆ? ಸಾಕು. ವಿರಾಗ, ನೀವು "ಇಲ್ಲ"ವೆನ್ನುವದರಿಂದ ಆಗಬಹುದಾದ್ದರ ವರ್ಣನೆ ಯಾತಕ್ಕೆ ಮಾಡುತ್ತ ಕುಳ್ಳಿರಲಿ.

ಆದರೆ ನೀವು 'ಹೂಂ' ಎನ್ನುವದರಿಂದ ಏನಾಗಬಹುದೆಂಬುದನ್ನು ಬೇಕಾದರೆ ಹೇಳುತ್ತೇನೆ. ನೀರಿನಲ್ಲಿ ಮುಳುಗುತ್ತಿರುವ ಮನುಷ್ಯನು ತನ್ನ ಜೀವರಕ್ಷಣೆಯ ಎತ್ತುಗಡೆಯಲ್ಲಿ ಈಜುವವನನ್ನು ಸುತ್ತಿಕೊಂಡು ತನ್ನೊಡನೆ ಅವನನ್ನೂ ಮುಳುಗಿಸುತ್ತಾನೆ. ವಿರಾಗ, ನನ್ನ ಈ ಪ್ರಯತ್ನ ಅಂತಹ ಕೊಲೆಗಡಕತನದ್ದೇ ಆಗಿದೆ! ನನಗದೆಲ್ಲ ತಿಳಿಯುತ್ತದೆ. ಆದರೆ....ವಿರಾಗ, ನಿಮ್ಮ ರೀತಿ ಎಂತಹದೆಂದು ನನಗೆ ಪೂರ್ಣವಾಗಿ ತಿಳಿದಿದೆ. ನೀವು ಬಹು ಗಟ್ಟಿಗರಾದ ಈಜುಗಾರರೆಂಬುದನ್ನು ನಾನು ಬಲ್ಲೆ. ನಾನು ಧಡಪಡಿಸುತ್ತ ನಿಮ್ಮ ಕೊರಳಿಗೆ ಜೋಲುಬಿದ್ದರೂ ನೀವೇನೂ ಬೆದರುವದಿಲ್ಲ. ಅದನ್ನು ನೀವು ನಿರಾಯಾಸವಾಗಿ ಕಿತ್ತುಹಾಕಬಲ್ಲಿರಿ. ಆದರೆ ಅದು ಕೇವಲ ನಿಮ್ಮ ಆತ್ಮರಕ್ಷಣೆಗಾಗಿಯಲ್ಲ, ಇಬ್ಬರೂ ಸುಸೂತ್ರವಾಗಿ ದಂಡೆಗೆ ಮುಟ್ಟುವದಕ್ಕೇ ಎಂಬುದನ್ನು ನಾನು ಬಲ್ಲೆ. ವಿರಾಗ, ನೀವಿನ್ನೂ ಅವಿವಾಹಿತರಾಗಿದ್ದೀರಿ. ಸಮಾಜದ ಆತ್ಮಸಂತೋಷಕ್ಕೆ ಯಾವ ರೀತಿಯಲ್ಲಿಯೂ ಭಂಗತಾರದೆ ನೀವು ಮನಸೋಕ್ತ ಸುಖವನ್ನು ಸವಿಯಬಹುದು. ನೀವದನ್ನು ನಿರಾಯಾಸವಾಗಿ ಸಾಧಿಸಬಹುದು. ಹೀಗಿರುವಾಗ ನಾನು—ಸ್ತ್ರೀ. ಸಮಾಜದ ದೃಷ್ಟಿಯಿಂದ ಸಧವೆ, ಪಾಪಿಯಾದ ನಾನು ಕೇವಲ ನನ್ನ ಸುಖಕ್ಕೆಂದು ಸಮಾಜ ಬಾಹಿರತೆಯ ಮಾರಿಗೆ ನಿಮ್ಮನ್ನು ಬಲಿಗೊಡಲು ಸಿದ್ಧಳಾಗಿದ್ದೇನೆ. ವಿರಾಗ, ನನಗಿನ್ನೂ ಎಷ್ಟೋ ಬರೆಯಬೇಕೆನ್ನಿಸುತ್ತದೆ! ಆದರೆ ಏನು ಬರೆಯಲಿ?

ನಿಮ್ಮ ಬದುಕನ್ನು ಮಣ್ಣುಗೂಡಿಸಲೆಳಸುವ,

**ಅಚಲಾ**

ಅವಳು ಪತ್ರ ಬರೆದು ಮುಗಿಸಿದಳು.

ಅವಳ ಮನದುಮ್ಮಳವೆಲ್ಲ ಕೋಡಿಗಟ್ಟಿ ಹರಿದುಹೋಗಿತ್ತು. ಅವಳಿಗೊಂದು ತರದ ಸಮಾಧಾನವೆನ್ನಿಸಿತು. ಆ ಮನಃಶಾಂತಿಯಿಂದಾಗಿ ಅವಳಿಗೆ

ಗಾಢವಾದ ನಿದ್ರೆ ಹತ್ತಿತು. ಅಚಲೆ ಮುಂಜಾನೆ ಎದ್ದಳು. ಮತ್ತೆ ಪತ್ರ ವನ್ನೆಲ್ಲ ಓದಿದಳು. 'ನನಗೇನು ಹುಚ್ಚುಗಿಚ್ಚು ಹಿಡಿದಿಲ್ಲವಷ್ಟೆ? ಇಂಥ ಉದ್ದವಾದ ಪತ್ರ ಬರೆಯುವದೆ? ಹೀಗೆಲ್ಲ ತನ್ನ ಮನಸ್ಸನ್ನೇ ತೆರೆದು ಹಿಡಿಯುವದೆ? ಮತ್ತೆ ಅವರು 'ಇಲ್ಲ'ವೆಂದರೆ? ಹೀಗೆಲ್ಲ ಏನೂ ಬಿಡದೆ ಒಪ್ಪಿಸಿಕೊಳ್ಳಿರೆನ್ನುವಂತೆ ಹೇಳಿಬಿಡುವದೆ? ಛೆ, ಬೇಡ, ಬೇಡ. ಹೀಗೆ ಗತಿಗೆಟ್ಟ ಅವಸರ ಕೆಲಸಕ್ಕೆ ಬಾರದ್ದು. ನಾನಿನ್ನೂ ಸರಿಯಾಗಿ ವಿಚಾರ ಮಾಡಬೇಕು. ನನ್ನ ಹೃದಯದಲ್ಲೇಳುತ್ತಿರುವ ಸ್ವರಗಳ ಪ್ರತಿಧ್ವನಿ ಅವರ ಹೃದಯದಲ್ಲಿಯೂ ಏಳುತ್ತಿರುವದನ್ನು ನಾನು ಸರಿಯಾಗಿ ಕಿವಿಗೊಟ್ಟು ಕೇಳಬೇಕು.' ಅವಳು ಆ ಪತ್ರವನ್ನೆಲ್ಲ ಹರಿದು ಚೂರುಚೂರು ಮಾಡಿ ಬಿಟ್ಟಳು. ಆದರೆ ಆ ಕ್ಷಣದಲ್ಲಿ ಅವಳಿಗೆ ತನ್ನ ಅಂಜುಬುರುಕುತನಕ್ಕಾಗಿಯೇ ಕನಿಕರವೆನ್ನಿಸಿತು: ಇಡೀ ಸಮಾಜದ ಅಪಾದನಗಳನ್ನು ಎದುರಿಸಲು ಸಿದ್ಧಳಾದವಳು ನೀನು! ಮತ್ತೆ ವಿರಾಗನ ಎದುರಿಗೆ ನಿನ್ನ ಮನದ ಆಶಯ ವನ್ನು ಸ್ಪಷ್ಟವಾಗಿ ಬಿಚ್ಚಿ ತೋರಿಸುವಷ್ಟು ಕೂಡ ನಿನ್ನಲ್ಲಿಲ್ಲವಲ್ಲ!

ಅವಳು ತನ್ನನ್ನು ತಾನೇ ಧಿಕ್ಕರಿಸಿಕೊಂಡಳು. ಆ ಇಡೀ ದಿನವೆಲ್ಲ ಮನದ ತೂಗುಯ್ಯಾಲೆ ನಿಂತಲ್ಲಿ ನಿಲ್ಲಲಿಲ್ಲ. ಸಂಜೆಯಾಯಿತು. ಕತ್ತಲೆ ಆವರಿದಂತೆಲ್ಲ ಹೃದಯ ತುಂಬಿ ಬಂದಂತಾಗಿ ಅಸಮಾಧಾನದ ತೆರಗಳೇಳ ಲಾರಂಭಿಸಿದವು.

೨೬

ವಿರಾಗನಿಗೆ ಅಚ್ಚರಿಯಾಗದೆ ಇರಲಿಲ್ಲ. ಅಚಲೆ ಅವನ ಮನೆಗೆಂದೂ ಬಂದಿರಲಿಲ್ಲ. ಹೆಣ್ಣು ಮಕ್ಕಳಿಲ್ಲದ ಒಬ್ಬೊಂಟಿಗನಾದ ಪುರುಷನ ಮನೆ ಯೆಂಬ ಕಾರಣದಿಂದ ವಿರಾಗನ ಮನೆಗೆ ಹೋಗುವದನ್ನು ಬಹಳ ದಕ್ಷತೆ ಯಿಂದ ತಪ್ಪಿಸುತ್ತಿದ್ದ ಅಚಲೆಯನ್ನು ಅಲ್ಲಿಗೆ ಎಳೆದು ತಂದಿದ್ದ ಶಕ್ತಿಯು ಬಹಳ ಬಲವತ್ತರವಾದದ್ದಿರಬೇಕೆಂಬುದನ್ನು ಅವನು ಅರಿತಿದ್ದ. ಅವನು ಲಗುಬಗೆಯಿಂದ ಮೇಲಕ್ಕೆದ್ದು ನುಡಿದ, 'ಬನ್ನಿರಿ.'

"ವಿರಾಗ, ಈ ಬಾಗಲಿಕ್ಕಲೇನು?"

"ಆ ಪ್ರಶ್ನೆ ಕೇವಲ ನಿಮ್ಮದೇ ಆಗಿದೆ. ನನ್ನದೇನೂ ಅಡ್ಡಿ ಇಲ್ಲ." ಅವಳು ಬಾಗಿಲಿಕ್ಕಿಕೊಂಡಳು.

“ ಈವೊತ್ತು ಅವಳು ಕಣ್ಣುಮುಚ್ಚಾಲೆಯನ್ನಾಡಲಿಲ್ಲ. ಆಡುತ್ತ ಕುಳ್ಳಿರಲು ಅವಳಿಗೆ ವ್ಯವಧಾನವಿರಲಿಲ್ಲ.

“ ವಿರಾಗ, ನನಗೆ ನಿಮ್ಮೊಡನೆ ಬಹಳ ಮಾತಾಡಬೇಕಾಗಿದೆ.” ಅವಳು ಅವನ ಕಡೆಗೆ ನೆಟ್ಟನೋಟದಿಂದ ನುಡಿದಳು. ಅವನಿಗೆಲ್ಲ ಹೊಳೆಯಿತು. ಅವನು ತೀರ ನಿರ್ವಿಕಾರವಾಗಿಯೇ ನೋಡುತ್ತಲಿದ್ದ. ಅವಳಿಗೆ ಬಹು ಕೋಪ ಬಂದಿತು.

“ ನೀವು ಸೋಗುಮಾಡುತ್ತೀರಿ.”

“ ಇದನ್ನೇ ಹೇಳುವದಿತ್ತಷ್ಟೆ ? ”

“ ನನಗೆ ನಿಮ್ಮ ಹೆದರಿಕೆಯಾಗುತ್ತದೆ.”

“ ಈಗ ಮಾತ್ರ ನೀವು ಇದೇ ಈಗ ನನ್ನ ಮೇಲೆ ಮಾಡಿದ ಆರೋಪ ವನ್ನು ನನಗೆ ನಿಮ್ಮ ಮೇಲೆ ಮಾಡಬೇಕೆನ್ನಿಸುತ್ತದೆ.”

“ ಹೌದು. ನಾನು ಇಲ್ಲವೆನ್ನುವದಿಲ್ಲ. ಆದರೆ ಆ ಸೋಗಿನ ಕವಚ ವನ್ನು ತೆಗೆದು ಬಿಸುಟುವದಕ್ಕೆಂದೇ ಇಂದು ನಾನಿಲ್ಲಿಗೆ ಬಂದಿದ್ದೇನೆ.”

“ ಹಾಗಾದರೆ ಸರಿ. ನಾನೂ ಕಣ್ಣುಮುಚ್ಚಾಲೆಯಾಡುವದಿಲ್ಲ.”

“ ವಿರಾಗ, ನಾನು ವಿವಾಹಿತಳಾಗಿದ್ದೇನೆ. ನನ್ನ ಗಂಡನು ಸೆರೆಮನೆ ಲ್ಲಿದ್ದಾನೆ.”

“ ಹೌದು. ಆದರೆ ಅವರು ಸೆರೆಮನೆ ವಾಸವನ್ನು ಮುಗಿಸಿ ಮತ್ತೆ ನಿಮ್ಮೆದುರಿಗೆ ಬಂದರೆಂದರೆ ನಿಮ್ಮ ಮನಸ್ಸು ಹಿಂದೆಗೆಯಬಹುದು.”

“ ವಿರಾಗ, ನೀವು ನನ್ನನ್ನಿನ್ನೂ ಸರಿಯಾಗಿ ಅರಿತಿಲ್ಲ. ಅವರು ಸೆರೆ ಮನೆಯ ಹೊರಗಿದ್ದಾಗಲೂ—”

“ ಆದರೆ ಈಗ ಅವರು ಸಮಾಜದ ದೃಷ್ಟಿಯಲ್ಲಿ ಘೋರಪಾತಕಿ ಯೆಂದೆನಿಸಿದ್ದರೂ, ಸೆರೆಮನೆಯಿಂದ ಹೊರಬರುವಾಗ ಪಶ್ಚಾತ್ತಾಪದಿಂದ ವಿದಗ್ಧರಾಗಿ ಶುದ್ಧರಾಗಿರಬಹುದು.”

“ ಅಂದೆಂದಿಗೂ ಸಾಧ್ಯವಿಲ್ಲ. ಅವರಲ್ಲಿ ಮನುಷ್ಯತ್ವದ ಅಂಶವೇ ಉಳಿದಿರುವದು ಸಾಧ್ಯವಿಲ್ಲ. ಯಾಕೆಂದರೆ ಅದು ಅವರಿಂದ ಯಾವಾಗಲೋ ಇಲ್ಲವಾಗಿತ್ತು. ಮತ್ತೆ ಇಷ್ಟು ದಿನ ತಿರಸ್ಕೃತಳಾಗಿ ಮತ್ತೆ ಅವರೊಡನೆ ಕೂಡಿ ರುವ ವಿಚಾರವೇ ತೀರ ಅಸಹ್ಯವೆನಿಸುತ್ತದೆ ನನಗೆ. ಈಗ ಹತ್ತು ವರ್ಷ

ಗಳಿಂದಲೂ ಅವರ ನನ್ನ ಸಂಬಂಧ ಕಡಿದು ಹೋಗಿರುವಾಗ, ಮತ್ತು ಅದು ಯಾವ ರೀತಿಯಿಂದ ಕಡಿದುಹೋಯಿತೆಂಬ ಮಾತನ್ನು ಗಣನೆಗೆ ತೆಗೆದು ಕೊಂಡೂ ಕೂಡ ಅವರ ವಿಷಯದಲ್ಲಿ ನನ್ನ ಕಡೆಯಿಂದ ಪತ್ನೀ ಧರ್ಮದ ಅಪೇಕ್ಷೆಯನ್ನಾದರೂ ಮಾಡಿದಲ್ಲಿ, ಅದರಂತಹ ತಪ್ಪು ಮತ್ತೊಂದಿಲ್ಲ. ವಿರಾಗ, ಕೇವಲ ಕಲ್ಪನೆಯಲ್ಲಿಯೇ ಪತ್ನೀತ್ವದ ಸಂಬಂಧದ ಸ್ಮರಣೆಯನ್ನಿರಿ ಸುವದಾದಲ್ಲಿ ವಿಧುರರಿಗೂ ಕೂಡ ಮತ್ತೆ ಮದುವೆಯಾಗುವ ಅವಶ್ಯಕತೆ ಯೇನಿಲ್ಲ. ನನಗೆ ನಿರರ್ಥಕವಾದ ಡಾಂಭಿಕ ಕಲ್ಪನೆಗಳಲ್ಲಿ ವಿಶ್ವಾಸವಿಲ್ಲ."

"ಆದರೆ ಅಚಲಾಬಾಯಿ, ನೀವು ಮತ್ತೊಬ್ಬನೊಡನೆ ಮದುವೆಯಾ ಗುವದಂತೂ ಶಕ್ಯವಿಲ್ಲ. ನಿವೆಷ್ಟೇ ಹೇಳಿದರೂ, ಏನೇ ಮಾಡಿದರೂ ವಿನಾ ಯಕರಾಯರ ಹೆಂಡತಿ ಮತ್ತೊಬ್ಬನೊಡನೆ ಅವನು ಇಟ್ಟುಕೊಂಡ ಹೆಂಗಸಿ ನಂತೆ ಸಂಸಾರ ಮಾಡಿಕೊಂಡಿದ್ದಾಳೆ ಎಂದು ಜನರು ಎನ್ನದೆ ಇರುವದಿಲ್ಲ."

ತಾನು ಪೆಟ್ಟುಹಾಕುತ್ತಿದ್ದ ಖಡ್ಗದ ಧಾರೆ ಅತ್ಯಂತ ತೀಕ್ಷ್ಣವಾಗಿ ತ್ತೆಂಬುದರ ಅರಿವು ಅವನಿಗೆ ಸಂಪೂರ್ಣವಾಗಿಯೂ ಇತ್ತು. ಆದರೆ ಆ ಕ್ರೂರ ಸತ್ಯದ ಮೇಲೆ ತೆರೆಯೆಳೆದು ಕೇವಲ ಬಾಹ್ಯ ಸುಂದರವಾದ ಅಸತ್ಯದ ಮುಖವನ್ನಷ್ಟೇ ಅವಳೆದುರಿಗೆ ತೆರೆ ಹಿಡಿದು ಅವಳನ್ನು ಸಂತೋಷಗೊಳಿ ಸಲು ಹವಣಿಸುವದು ಕೊನೆಯಲ್ಲಿ ಎಂತಹ ಭಯಂಕರ ಫಲಪ್ರದವಾದು ದೆಂಬ ಮಾತನ್ನು ಅವನು ಸರಿಯಾಗಿ ಅರಿತಿದ್ದ. ನಿಜವಾದ ಮಾತನ್ನು ಇದ್ದುದಿದ್ದಂತೆಯೇ, ಅಥವಾ, ಅದಕ್ಕಿಂತ ಹೆಚ್ಚಿಗೆ ಬಣ್ಣ ಬಳೆದು ತೋರಿಸಿ ಅದರಿಂದುಂಟಾಗುವ ಪರಿಣಾಮಗಳೆಲ್ಲವುಗಳ ಸಂಪೂರ್ಣವಾದ ಕಲ್ಪನೆ ಯನ್ನು ಅವಳಿಗೆ ಮಾಡಿಕೊಟ್ಟು ಅವಳ ಮನದ ನಿರ್ಧಾರವನ್ನು ಸರಿಯಾಗಿ ಅಲುಗಾಡಿಸಿ ನೋಡಲು ಅವನಿಂದು ಉದ್ಯುಕ್ತನಾಗಿದ್ದ. ಅಚಲೆ ಅವನ ಅಸ್ಪಷ್ಟೋಕ್ತಿಗೆ ಒಂದು ತಡವೆ ಬೆಚ್ಚಿದಂತಾಗಿ ಹಿಮ್ಮೆಟ್ಟಿದಳು. ಆದರೆ ಆ ಮಾರು ಅವಳಿಗೆ ಗೊತ್ತಿರದಿರಲಿಲ್ಲ. ಅವಳು ಎಲ್ಲ ವಿಚಾರವನ್ನು ಮಾಡಿ ಮುಗಿಸಿಯೇ ಬಂದಿದ್ದಳು.

"ಈ ದೊಡ್ಡ ಸಮಾಜದಲ್ಲಿ ಒಬ್ಬರಿಗಾದರೂ ನನ್ನ ದುಃಖದ ಅರಿವಾ ಗಲಾರದೆ? ಅಂತರಂಗದಲ್ಲಿಯೂ ಕೂಡ ಯಾರೊಬ್ಬರೂ "ಇವಳು ಸ್ವೈರಿಣಿ" ಯಲ್ಲ ಎನ್ನದಿರಲಾರರೆ?"

"ಹಾಗೆ ಹೇಗಾದೀತು? ಸ್ತ್ರೀಯರು ಈ ರೀತಿ ಸ್ವತಂತ್ರವಾಗಿ ಪ್ರವರ್ತಿಸುವದರಿಂದ ಸಮಾಜದ ಬಿಗುವೇ ಸಡಿಲಾಗುವದೆಂದೆಣಿಸಿ ಕೆಲವರು ಇಂಥ ಸ್ತ್ರೀಯರ ವಿರುದ್ಧ ಭಯಂಕರವಾದ ಪ್ರಚಾರವನ್ನೇ ಪ್ರಾರಂಭಿಸಬಹುದು ಮತ್ತೆ ಕೆಲವರು ನೀವು ನಿಷ್ಪಾಪಿಗಳೆಂದು ಬಹಿರಂಗವಾಗಿ ಒಪ್ಪಿಕೊಳ್ಳಲು ಹಿಂದೆ ಮುಂದೆ ನೋಡಬಹುದು. ಆದರೆ ಕೆಲವರು ಆ ಮಾತನ್ನು ನಾಲ್ಕು ಜನರೆದುರಿನಲ್ಲಿಯೇ ಒಪ್ಪಿಕೊಳ್ಳಬಹುದು."

"ವಿರಾಗ, ಇಂತಹ ವಿಶ್ವಾಸಪಾತ್ರರಾದರೂ ನನಗೆ ಭೆಟ್ಟಿಯಾದಲ್ಲಿ ನಾನು ವಿಶ್ವಾಸದಿಂದ ಅವರೆಡೆಗೆ ತಿರುಗುವೆ."

"ಹೌದು. ಆದರೆ ಆ ನಿಮ್ಮ ವಿಶ್ವಾಸದ ಕೊನೆಯ ಪರಿಣಾಮವೇನೆಂದು ಬಲ್ಲಿರಾ? ನೀವು ಅದಕ್ಕೆ ಸಿದ್ಧರಿದ್ದೀರೋ?

"ಎಲ್ಲದಕ್ಕೂ ಸಿದ್ಧಳಾಗಿದ್ದೇನೆ ನಾನು. ವಿರಾಗ, ಇದು ಕೇವಲ ಕ್ಷಣಿಕವಾದ ವಿಕಾರದಿಂದುದ್ಭವಿಸಿದ ತಡೆಯಲಾರದ ಮನದ ಆಸೆಯಲ್ಲ. ಈಗ ಹತ್ತು ವರ್ಷಗಳಿಂದ ಸತತವಾಗಿ ನನ್ನ ಮನಸ್ಸಿನೊಡನೆ ಹೊಡೆದಾಟ ನಡೆಯಿಸಿ ನಾನಿಂದು ಈ ನಿರ್ಧಾರಕ್ಕೆ ಬಂದು ನಿಂತಿದ್ದೇನೆ. ನನಗೆ ಅದರಲ್ಲಿ ಯಾವುದೂ ತಪ್ಪೆನ್ನಿಸುವುದಿಲ್ಲ."

"ಹಾಗಾದರೇತರ ಚಿಂತೆ? ನೀವಿನ್ನು ನಿರ್ಭಯವಾಗಿ ಮುಂದಿನ ಹೆಜ್ಜೆ ಇಡಬಹುದು."

"ಅದು ಹೇಗೆಂಬುದೇ ನನಗೆ ಬಗೆಹರಿಯದಾಗಿದೆ?" "ನಿಮ್ಮೊಡನೆ ಮುನ್ನಡೆಯಲು ಸಿದ್ಧನಾಗಬಹುದೆನ್ನಿಸುವವನನ್ನು ನೀವು ನಿರ್ಭಯರಾಗಿ ಸ್ಪಷ್ಟವಾಗಿ ಕೇಳಬಿಡಿರಿ."

ಅವನು ಅವಳನ್ನು ನಿರುಕಿಸಿ ನೋಡಲಾರಂಭಿಸಿದ. ಅವಳು ನೆಲವನ್ನು ನಿಟ್ಟಿಸಲಾರಂಭಿಸಿದಳು. ಕೆಲಹೊತ್ತಿನಲ್ಲಿಯೇ ಅವಳು ಎದ್ದು ನುಡಿದಳು.

"ಒಳ್ಳೇದು. ನಾನಿನ್ನು ಹೋಗಬೇಕು."

"ಮಾತನಾಡುವದೆಲ್ಲ ಮುಗಿಯಿತೇನು ಈಗಲೆ?"

"ನನಗೆ ಮಾತನಾಡಲೂ ಬರುವದಿಲ್ಲ."

ಅವನು ನಕ್ಕು ನುಡಿದ, "ನೀವಿನ್ನೂ ಹೆದರುತ್ತಿದ್ದೀರಿ."

ಅವಳಿಗೆ ಅದರರ್ಥವೇನೆಂದು ತಿಳಿಯಿತು. ಆದರೂ ಅವಳು ನಡೆದು ಬಿಟ್ಟಳು.

೨೭

ಹೂವುಗಳನ್ನು ಬುಟ್ಟಿಯಲ್ಲಿ ಮುಚ್ಚಿಟ್ಟರೂ ಅವುಗಳ ಸುವಾಸನೆ ಸುತ್ತೆಲ್ಲ ಹರಡದಿರಲಾರದು. ಆದರೆ ಈ ಮಾತು ಅಚಲೆಗೆ ಸರಿಯಾಗಿ ತಿಳಿದಂತೆ ತೋರಲಿಲ್ಲ. ಮರೆಗೆ ಕೂತು ವೈರಿಯ ಮೇಲೇರಿ ಹೋಗುವ ಗತ್ತುಗಾರಿಕೆ ತನ್ನೊಬ್ಬಳಿಗೇ ಗೊತ್ತಿದ್ದವಳಂತೆ ಅವಳು ನಡೆದುಕೊಳ್ಳುವದಕ್ಕೆ ಮೊದಲಿಟ್ಟಳು. ವಿರಾಗನಿಂದ ತನ್ನ ಅಂತರಂಗವನ್ನಿಟ್ಟು ಬಚ್ಚಿಡುವದೆಂದರೆ ಅರಿವೆಯಲ್ಲಿ ನೀರನ್ನು ಕಟ್ಟಿ ಇರಿಸುವ ಸಾಹಸದಂತೇ ಆಗಿತ್ತು. ಅವಳ ಮನೋಗತವೆಲ್ಲ ವಿರಾಗನಿಗೆ ತಿಳಿದುಹೋಗಿತ್ತು. ಆದರೆ ಎಲ್ಲ ಏರಿಳಿತಗಳನ್ನು ಅವನು ಸ್ಪಷ್ಟವಾಗಿ ಕಾಣುತ್ತಿದ್ದ. ಅವಳ ಮನದ ಅಂತರದ ತಿಕ್ಕಾಟವನ್ನು ಕಂಡು ಅವನಿಗೆ ಕೆಡಕೆನ್ನಿಸದಿರುತ್ತಿರಲಿಲ್ಲ. ಆದರೆ ಅವನು ಹಾಗೆಯೇ ಕುತೂಹಲದಿಂದ ನೋಡುತ್ತಲಿದ್ದ.

ವಿರಾಗನ ಕೆಲಸವೇ ವಕೀಲನದಾಗಿತ್ತು. ಕಪಟ ಮನದ ಎಲ್ಲ ಗುಪ್ತ ಆಶಯಗಳನ್ನು ತೆರೆದು ಹಿಡಿದು ಹೊರಗೆ ತೋರಬಲ್ಲ ನಿರ್ದಯತೆ ಅವನಲ್ಲಿತ್ತು. ಅಂತೆಯೇ ಎಳೆಯದಾದ ದುಃಖಿಜೀವಿಯೊಂದರ ರಕ್ಷಣೆಗೆ ಪಣತೊಟ್ಟು ಅದಕ್ಕಾಗಿ ತನ್ನ ಸರ್ವಸ್ವದ ಬಲಿದಾನ ಮಾಡಬಲ್ಲ ಅಸೀಮವಾದ ಔದಾರ್ಯ ಮೃದುತೆಗಳೂ ಅವನಲ್ಲಿ ಅಷ್ಟೇ ಪ್ರಮಾಣದಲ್ಲಿದ್ದವು. ಆದರೆ ಅವನ ಈ ಗುಣ ಕೇವಲ ನಿರಾಧಾರರಾದ ಎಳೆ ಜೀವಿಗಳ ಪ್ರತ್ಯಯಕ್ಕೆ ಮಾತ್ರ ಬರುವಂತಹದಾಗಿತ್ತು.

ಇಲ್ಲಿಯ ವರೆಗಿನ ತನ್ನ ಕಷ್ಟಪೂರ್ಣವಾದ ಜೀವನದ ಕರುಣ ಕತೆಯ ಕುರಿತು ಒಂದಕ್ಕರವನ್ನು ಕೂಡ ಅವನು ಯಾರಲ್ಲಿಯೂ ಉಸಿರಿರಲಿಲ್ಲ. ಬೇರೆಯವರ ದಯೆಗೆ ಪಾತ್ರನಾಗುವದೆಂದರೆ ಅವನಿಗೆ ತನ್ನ ಮಾನಹಾನಿಯೆಂದೆನ್ನಿಸುತ್ತಿತ್ತು. ಅಂತೆಯೇ ತನ್ನ ಜೀವನದ ಘನ ಘೋರ ಸಂಗ್ರಾಮದ ಅದ್ಭುತ ಕತೆಯನ್ನು ಬಣ್ಣಿಸಿ ಯಾರಿಂದಲಾದರೂ ಬೆನ್ನು ತಟ್ಟಿಸಿಕೊಳ್ಳುವ ಹೊಲಸು ಇಚ್ಛೆ ಅವನಿಗೆ ಎಂದೂ ಉಂಟಾಗಿರಲಿಲ್ಲ. ಆದರೆ ತನ್ನ ಗೆಳೆತನವನ್ನು ತಾವಾಗಿ ಬಯಸಿ ಬಂದ ಯೋಗ್ಯ ಜೀವಿಗಳಿಗೆಯಾಗಲೀ ಅಥವಾ

ಅವನು ತಾನಾಗಿ ಯಾರ ಗೆಳೆತನ ಬೆಳೆಯಿಸಲಿಚ್ಛಿಸಿದನೋ ಅಂಥವರಿಗಾಗಲೀ ಅವನು ತನ್ನ ಅಂತರಂಗದ ಪರಿಚಯುವನ್ನು ಪ್ರಾಸಂಗಿಕವಾಗಿ ಮಾಡಿಕೊಡದಿರಲಿಲ್ಲ. ಅಚಲೆಗೆ ತನ್ನ ಹೃದಯುವನ್ನು ಬಿಚ್ಚಿ ತೋರಿಸಿ ಅವಳ ಮನಸ್ಸನ್ನು ಸರಿಯಾಗಿ ಅರಿತುಕೊಳ್ಳುವ ಇಚ್ಛೆ ಅವನಲ್ಲಿದ್ದಿತು. ಹೊರಗೆ ಹೊಚ್ಚಿದ ಒದ್ದೆಯು ಒಳಗಿನ ಜಲವನ್ನು ಸ್ಪರ್ಶಿಸದೆಯೂ ಕೂಡ ಅದಕ್ಕೆ ತಂಪನ್ನುಂಟು ಮಾಡಬಲ್ಲದು. ಅಚಲೆಯ ತಪ್ತಹೃದಯಕ್ಕೆ ವಿರಾಗನು ಶಾಂತಿಯನ್ನುಂಟು ಮಾಡುತ್ತಲಿದ್ದ.

ಅವನಿಗೆ ಅವಳ ಗೆಳೆತನ ಬೇಕಾಗಿತ್ತು. ಅವಳು ಈಗಿದ್ದಂತೆಯೇ ಅವನಿಗೆ ಬೇಕಾಗಿದ್ದಳು. ಆದರೆ ಹಾಗಾದಲ್ಲಿ ಅದರ ಸಲುವಾಗಿ ಅವನಾಗಲೀ ಆಕೆಯಾಗಲೀ ಯಾವ ಮಹತ್ತರವಾದ ಬೆಲೆ ಕೊಡಬೇಕಾದೀತೆಂಬ ಮಾತೂ ಅವನಿಗೆ ಗೊತ್ತಿತ್ತು. ಅವನಿಗಿಂತಲೂ ಅವಳೇ ಹೆಚ್ಚಿನ ಬೆಲೆ ಕೊಡಬೇಕಾಗಿತ್ತೆಂಬುದರಲ್ಲಿ ಸಂಶಯವಿರಲಿಲ್ಲ. ಆದ್ದರಿಂದಲೇ ಅವನು ಅವಳು ಸಂಪೂರ್ಣವಾಗಿ ತನ್ನ ಮನಸ್ಸನ್ನು ಗಟ್ಟಿ ಮಾಡುವವರೆಗೆ ಮುಂದಿನ ಹೆಜ್ಜೆ ಇಡಲು ಸಿದ್ಧನಾಗಿರಲಿಲ್ಲ. ಇಲ್ಲಿಯವರೆಗೆ ತಾನು ನಡೆಯಿಸಿದ ಅಸಾಧ್ಯವಾದ ಹೋರಾಟದ ಜೀವನದಲ್ಲಿಯೇ ಅವನ ಕ್ಷಾತ್ರವೃತ್ತಿ ಸಮಾಧಾನ ಹೊಂದಿತ್ತು. ಮತ್ತು ಹಾಗೆಯೇ ಆ ತುಮುಲ ಕಾಳಗವನ್ನು ಸಾಗಿಸುವದರಲ್ಲಿಯೇ ಅವನು ಸಂಪೂರ್ಣವಾಗಿ ಸಮಾಧಾನ ಪಡೆಯಬಹುದಾಗಿತ್ತು. ಅವನು ಜನರೇನೆನ್ನಬಹುದೆಂದು ಯಾವ ವಿಷಯದಲ್ಲಿಯೂ ವಿಚಾರ ಮಾಡುತ್ತ ಕೂಡ್ರುವಂತಿರಲಿಲ್ಲ. ತನ್ನ ವಿಷಯದಲ್ಲಿಯೂ ಅವನು ಅಷ್ಟು ನಿಷ್ಠುರವಾಗಿಯೇ ನಡೆದುಕೊಳ್ಳುತ್ತಲಿದ್ದ.

ಲಗ್ನಸಂಸ್ಥೆಯೆಂಬುದು ಸ್ವಾರ್ಥ ಪರಾರ್ಥಗಳೆರಡಕ್ಕಾಗಿಯೂ ನಿರ್ಮಿತವಾಗಿದೆ. ಕಾಮನೆಗಳ ಮರ್ಯಾದಿತ ಪೂರ್ತಿಯೊಂದಿಗೆ ಮಕ್ಕಳನ್ನು ಹಡೆದು ಸಮಾಜವನ್ನು ಕಟ್ಟಿ ಅದನ್ನು ಸಂರಕ್ಷಿಸುವ ಈ ಕೆಲಸದಲ್ಲಿ ಸ್ವಾರ್ಥ ಪರಾರ್ಥಗಳೆರಡೂ ಸಮಾವೇಶವಾಗಿರುವದುಂಟು. ವಿವಾಹದ ಆದ್ಯ ಹೇತುವನ್ನು ಸರಿಯಾಗಿ ಸಾಧಿಸಲು ಹವಣಿಸದೆ ಕೇವಲ ಮೇಲು ಮೇಲಿನ ಉಪಚಾರವಿಧಿಗಳಿಂದ ವಿವಾಹದ ಪರಮೋಚ್ಚ ಮಂಟಪವನ್ನು ಕಟ್ಟಬಯಸಿದಲ್ಲಿ, ಹುಳುತಿಂದು ಪೊಳ್ಳಾದ ತೊಲೆಕಂಬಗಳು ಕೇವಲ ಅಲ್ಪ ಭಾರ

ದಿಂದಲೇ ಕೆಳಗೆ ಬಿದ್ದು ಮುರಿದು ತುಂಡಾಗುವಂತೆಯೋ ಈ ವಿವಾಹ ಸಂಸ್ಥೆಯೂ ನಶಿಸಿ ಹೋಗುವುದೆಂಬುದರಲ್ಲಿ ಅವನಿಗೆ ಸಂಶಯವಿರಲಿಲ್ಲ.

ಮದುವೆಯೆಂಬುದೊಂದು ಒಮ್ಮೆ ಆಗಿದ್ದರೂ ಜೀವಿಸಿದ್ದೂ ಮೃತನಾಗಿದ್ದಂಥ ಗಂಡನೊಬ್ಬನ ಬಂಧನದಿಂದ ಪಾರಾಗಲೆಳಸುವ ಅಚಲೆ ಆ ಜಗ್ಗಾಟಕ್ಕೆ ಗಾಸಿಗೊಂಡಿದ್ದಾಳೆ, ಅವಳು ತನ್ನಲ್ಲಿದ್ದ ಸ್ತ್ರೀತ್ವದ ಸಾರ್ಥಕತೆಗಾಗಿ ತೀರ ಉತ್ಸುಕಳಾಗಿದ್ದಾಳೆ. ಸಮಾಜದ ಅರ್ಥವಿಲ್ಲದ, ಕೆಲಸಕ್ಕೆ ಬಾರದ, ಕೃತ್ರಿಮ ಸಂಕೇತಗಳ ವಿರುದ್ಧವಾಗಿ ಒಂದೇಸಮನೆ ನಡೆಯಿಸಿದ ತನ್ನ ಹೋರಾಟದ ಕೊನೆಯ ಮೆಟ್ಟಿಲನ್ನಿಂದು ಮುಟ್ಟಿದ್ದಾಳೆ ಎನ್ನುವ ಮಾತಿನ ಸತ್ಯತೆಯನ್ನವನು ಸ್ಪಷ್ಟವಾಗಿ ಕಾಣುತ್ತಲಿದ್ದ. ಕೇವಲ ಗಿಡವೊಂದರ ಆಧಾರವಿದ್ದಲ್ಲಿ ಮಾತ್ರ ಬದುಕಬಲ್ಲ ಕೋಮಲವಾದ ಬಳ್ಳಿಯಾಗಿರಲಿಲ್ಲ ಅಚಲೆ. ಅವಳಲ್ಲಿ ಪರಾವಲಂಬನೆಯ ಅಸಹಾಯಕ ನಿಃಶಕ್ತಿಯ ಒಂದಂಶವೂ ಇರಲಿಲ್ಲ. ಅವಳು ತನ್ನ ಕಾಲಮೇಲೆಯೇ ತಾನು ನಿಂತಿದ್ದಳು. ಗಂಡನಿಂದ ತಿರಸ್ಕೃತಳಾಗಿ ದಿನದ ಒಂದು ತುತ್ತು ಅನ್ನ ಮತ್ತು ಮೈ ಮುಚ್ಚುವುದಕ್ಕೆ ಒಂದು ಗೇಣು ಬಟ್ಟೆಗಾಗಿ ತಮ್ಮ ಆಪ್ತೇಷ್ಟರಲ್ಲಿ ಎಲ್ಲ ಅಪಮಾನ ದುಃಖಗಳನ್ನು ಸಹಿಸುತ್ತ ಹೇಗೋ ದಿನ ನೂಕುತ್ತಿರುವ ಸ್ತ್ರೀಯರಲ್ಲಿ ಅವಳೊಬ್ಬಳಾಗಿರಲಿಲ್ಲ. ಅಸಂಬದ್ಧ ಕೃತಕತೆಯಿಂದೊಡಗೂಡಿದ ನಮ್ಮ ಈ ಸಮಾಜಜೀವನದ ಬಂಧನಗಳನ್ನು ಕೇವಲ ಮುಚ್ಚುಮರೆಯಿಂದ ಕಡಿದೊಗೆಯದೆ, ಅವುಗಳ ಅರ್ಥಹೀನತೆಯನ್ನು ಬಯಲಿಗೆಳೆದು, ನಿರ್ಭಯವಾಗಿ ನಾಲ್ವರ ಎದುರಿನಲ್ಲಿ ಅವುಗಳನ್ನು ಖಂಡಿಸಿ, ನ್ಯಾಯವಾದ ತನ್ನ ಸುಖವನ್ನು ದೊರಕಿಸುವದಕ್ಕೆಂದು ಸ್ವತಃ ತನ್ನನ್ನೇ ಬಲಿಯಾಗಿ ಅರ್ಪಿಸಿ ರಣಕಹಳೆಯನ್ನೂದಿ ಸಮಾಜದ ವಿರುದ್ಧವಾಗಿ ಅವಳು ಬಂಡಾಯಕ್ಕೆ ಸಿದ್ಧವಾಗಿದ್ದಳೆನ್ನುವ ಮಾತು ಅವನಿಗೆ ಸರಿಯಾಗಿ ತಿಳಿದಿತ್ತು. ಆದ್ದರಿಂದಲೇ ಅವಳು ಅವನಿಗೆ ಅಷ್ಟು ಪ್ರಿಯಳಾಗಿದ್ದಳು. ಪಿಂಜಾರಸಾಹೇಬನು ಹತ್ತಿಯನ್ನು ಹಿಂಜಿ ಹಿಂಜಿ ಹೊಲಸನ್ನು ತೆಗೆಯುವಂತೆ—ಅವಳು ತನ್ನ ವಿಚಾರಗಳನ್ನು ಬೆದಕಿ ನೋಡಿ ಅವು ಹದಿನಾರಾಣೆ ಶುದ್ಧವಾಗಿವೆಯೋ ಇಲ್ಲವೋ ಎಂದು ನಿರುಕಿಸಿ ನೋಡುತ್ತಿದ್ದಳು. ಕುಡಿದು ಕುಡಿದು ಮದ ನೆತ್ತಿಗೇರಿದ ಕುಡುಕನು ಮತ್ತೆ ಮತ್ತೆ ಕುಪ್ಪಿಯನ್ನು ತುಂಬಿ ಗಂಟಲಿಗೆ ಇಳಿಬಿಡುವಂತೆ,

ಎಂದೂ ಶಾಂತವಾಗದ ಕಾಮನೆಗಳ ಕಾವು ನೆತ್ತಿಗೇರಿದ ಪ್ರಮತ್ತಾವಸ್ಥೆ ಯವಳದಾಗಿರಲಿಲ್ಲವೆಂಬ ಮಾತು ಅವನಿಗೆ ಗೊತ್ತಿದ್ದಿತು. ತಾನು ಬೆಳೆದು ದೊಡ್ಡದಾಗುವದಕ್ಕೆ ಭೂಮಿಯೊಳಗಿನ ಸತ್ವವನ್ನು ಹೀರಿಕೊಂಡು ಬೆಳೆಯುವ ಆಕಾಂಕ್ಷೆ ಸಣ್ಣ ಸಸಿಯೊಂದಕ್ಕೆ ಎಷ್ಟು ನ್ಯಾಯವಾದುದೋ ಅಷ್ಟೇ ತನ್ನಲ್ಲಿಯ ಸ್ತ್ರೀತ್ವದ ಪೂರ್ಣ ವಿಕಾಸಕ್ಕಾಗಿ ಅವಳಿಗೆ ವೈವಾಹಿಕ ಜೀವನದ ಅವಶ್ಯಕತೆ ಬಲವತ್ತರವಾಗಿತ್ತೆಂಬುದನ್ನು ಅವನು ಅರಿತಿದ್ದ

೨೮

ವಿರಾಗ,

ನಾನು ಅಂಜುಬುರುಕಳಲ್ಲ. ಸಮಾಜಕ್ಕೆ ನಾನೆಷ್ಟೂ ಹೆದರುವದಿಲ್ಲ. ಆದರೆ ನಿಮ್ಮ ನೋಡಿಯೂ ಮಾತನಾಡದಿರುವ ಸೋಗಲಾಡಿತನಕ್ಕಾಗಿ ನಾನು ಹೆದರುತ್ತೇನೆ. ನಿಮ್ಮ ಮನದಲ್ಲೇಳುವ ಎಲ್ಲ ಭಾವನಾತರಂಗಗಳ ಎಲ್ಲ ಸೂಕ್ಷ್ಮವಾದ ಏರಿಳಿತಗಳನ್ನು ನಾನು ಕಾಣಬಲ್ಲೆ; ಆದರೆ ನಿಮ್ಮ ಹೊರತೋರಿಕೆಯ ನಿರ್ವಿಕಾರತೆಯ ಮುಖವಾಡವು ನನ್ನನ್ನು ಸಾಶಂಕಳ ನ್ನಾಗಿಸುತ್ತದೆ.

ನನ್ನೊಡನೆ ಮುನ್ನಡೆಯಲು ಸಿದ್ಧನಾಗಬಹುದೆಂದೆನಿಸಿದವನನ್ನು ಸ್ಪಷ್ಟವಾಗಿ ಕೇಳಿಬಿಡೆಂದು ನೀವು ನನಗೆ ಹೇಳಿದ್ದಿರಲ್ಲವೆ? ಆ ನಿಮ್ಮ ಮಾರ್ಗದರ್ಶನವನ್ನೇ ನಾನು ಅನುಸರಿಸುತ್ತೇನೆ. ವಿರಾಗ, ನಾನು ನಿಮ್ಮನ್ನೇ ಆ ಮಾತು ಕೇಳಬಯಸುತ್ತೇನೆ. ಬರೆಯುತ್ತಿದ್ದಂತೆಯೇ ಅವಳು ನಿಲ್ಲಿಸಿ ದಳು. "ಸಾಕು. ಸಾಕು. ಶಕ್ಯವಿದ್ದಷ್ಟುಮಟ್ಟಿಗೆ ಭಾವನೆಗಳನ್ನು ತಡೆದು ಹಿಡಿಯುವದೇ ಒಳ್ಳೆಯದು. ಪತ್ರದ ಕೊನೆಯಲ್ಲಿ ಅವಳು "ಅಚಲಾ" ಎಂದು ಸಹಿ ಮಾಡಿ ಮುಗಿಸಿದಳು. ಪತ್ರ ಪೋಸ್ಟಿನ ಡಬ್ಬಿಯಲ್ಲಿ ಬಿದ್ದಿತು. ಅವಳಿಗೊಂದು ದೊಡ್ಡ ಭಾರವಿಳಿದಂತೆನ್ನಿಸಿತು. "ಭಾವನೆಗಳಿಗೆ ಕಠಿಣ ಕವಚ ತೊಡಿಸಬೇಕಾಗುತ್ತದೆ. ಪ್ರಕ್ಷುಬ್ಧ ಮನದ ಭಾವನೆಗಳ ಪ್ರದರ್ಶನದಲ್ಲಿ ಯಾವ ಅರ್ಥವೂ ಇಲ್ಲ." ಆದರೂ ಅವಳ ಮನಸ್ಸು ನಿಂತಲ್ಲಿ ನಿಲ್ಲದೆ ಪರಿತಪಿಸುತ್ತಿತ್ತು. ಆ ಪತ್ರವೆಂದರೆ ಎದುರಿನಲ್ಲಿಯೇ ನಿಂತು ಕೊಡಲಿ ಏಟು ಹಾಕಿದಂತಿತ್ತು. ಅದಕ್ಕೆ ಪ್ರತಿಯಾಗಿ ಬರಬಹುದಾದ ಅದಕ್ಕಿಂತ ಭಯಂಕರವಾದ ಏಟಿಗಾಗಿ ಅವಳು ಸಿದ್ಧಳಾಗಿ ನಿಂತಿದ್ದಳು.

ವಿರಾಗನ ಕೈಗೆ ಆ ಪತ್ರ ಬಂದು ಮುಟ್ಟಿತು. ಅಪರಾತ್ರಿಯಲ್ಲಿ ಅಕಲ್ಪಿತವಾಗಿ ಬಾಗಿಲು ಬಡಿದ ಸಪ್ಪಳವಾದರೆ ಹೊರಗಿನವರಾರಾಗಿರ ಬಹುದೆಂಬ ಕಲ್ಪನೆ ಸಾಧಾರಣವಾಗಿ ಇದ್ದರೂ, ಮನುಷ್ಯನು ಎಚ್ಚರ ದಿಂದಲೇ ಬಾಗಿಲು ತೆರೆಯಲು ಹೋಗುತ್ತಾನೆ. ಆ ಪತ್ರವನ್ನೋದಿ ವಿರಾಗನಿಗೆ ಆಶ್ಚರ್ಯವೇನೂ ಎನ್ನಿಸಲಿಲ್ಲ. ಹಾಗೆಂದಾದರೂ ಆಗಲೇ ಬೇಕಾಗಿತ್ತು. ಆದರೆ ಇಷ್ಟು ಬೇಗನೆ ಆ ಸಂಗತಿ ಘಟಿಸೀತೆಂದು ಅವನ ಕಲ್ಪನೆಯಿರಲಿಲ್ಲ. ಆದ್ದರಿಂದ ಅವನು ಸ್ವಲ್ಪ ಸಾವಧಾನವಾಗಿಯೇ ಹೆಜ್ಜೆ ಯಿಕ್ಕುತ್ತಲಿದ್ದ

ಅವನು ಆ ಪತ್ರವನ್ನು ಒಂದು, ಎರಡು, ಮೂರುಸಲ ಓದಿ ನೋಡಿದ. ಕೇವಲ ತನ್ನ ವಿಷಯಕ್ಕೆ ಹೊರಸೂಸಿದ ಆ ಪ್ರೀತಿಯ ಮಧುರಸವನ್ನು ಮತ್ತೆ ಮತ್ತೆ ಸವಿದು ಸುಖಪಡುವುದಕ್ಕೆಂದಲ್ಲ. ಆದರೆ ಅವಳ ಒಂದೊಂದು ಶಬ್ದವನ್ನೂ ತೂಗಿ ನೋಡಿ ಅವಳ ಮನಃಸಾಮರ್ಥ್ಯವನ್ನು ಪರೀಕ್ಷಿಸು ವದಕ್ಕಾಗಿ. "ಇಲ್ಲ. ಮನದ ಸಿದ್ಧತೆಯಿನ್ನೂ ಸಂಪೂರ್ಣವಾಗಿ ಆದಂತೆ ಕಾಣುವದಿಲ್ಲ." ವಿವಾಹಿತ ಸ್ತ್ರೀಯೊಬ್ಬಳು ಅನ್ಯಪುರುಷನೊಬ್ಬನನ್ನು ತನ್ನ ಪತಿಯೆಂದು ಅಂಗೀಕರಿಸುವದೆಂದರೆ ಸಮಾಜದ ಮೇಲೆ ಕತ್ತಿಯೆತ್ತಿ ದಂತೆಯೇ ಸರಿ. ಅವನಿಗೆ ಹೆದರಿಕೆಯೆನ್ನಿಸುತ್ತಿದ್ದುದು ತನ್ನ ವಿಷಯವಾಗಿ ಯಲ್ಲ, ಅಚಲೆಯ ವಿಷಯವಾಗಿ. ಅವಳು ಸಮಾಜದ ಮೇಲೆ ಎತ್ತಿದ ಅಸ್ತ್ರವು ಅವಳ ಮೇಲೆಯೇ ತಿರುಗಿ ಅವಳ ಮನದ ಮೇಲೆ ಪುನಃ ಪ್ರಹಾರ ಮಾಡದೆ ಇರಲಾರದೆಂದು ಅವನಿಗೆನ್ನಿಸಿತು.

ಅಚಲೆಯ ಗಂಡನು ಬಂಧಮುಕ್ತವಾಗಿ ಹೊರಬಿದ್ದು ಅವಳನ್ನು ಪೀಡಿಸುವದಕ್ಕೆಂದು ಅವಳ ಹತ್ತಿರವೇ ಸುಳಿದಾಡಹತ್ತಿದರೆ ತನ್ನ ಹತ್ತಿರ ವಿರುವ ಅವಳ ಮನದ ನಿಶ್ಚಯವು ಎಷ್ಟರಮಟ್ಟಿಗೆ ತಡೆದೀತು? ಅವಳು ಮೊದಲ ಹುರುಪಿನಲ್ಲಿ ಕೆಲವು ದಿನ ಸಮಾಜವನ್ನು ಎದುರಿಸಿ ನಿಲ್ಲಬಹುದಾ ದರೂ ಒಮ್ಮೆ ಅವಳ ಮೇಲೆ "ಪಾಪಿಣಿ"ಯೆಂಬ ಮುದ್ರೆಯೊತ್ತಲ್ಪಟ್ಟಿ ತೆಂದರೆ ಸಾಮಾಜಿಕ ಭಹಿಷ್ಕಾರದಿಂದಾಗುವ ಆ ಮುಖ ಭಂಗಿತವನ್ನು ಅವಳೆಷ್ಟರ ಮಟ್ಟಿಗೆ ಸಹಿಸಿಕೊಂಡಿರಬಲ್ಲಳು? ಅವನಿಗೆ ಅವಳದೇ ಹೆದರಿಕೆ ಯೆನ್ನಿಸುತ್ತಿತ್ತು. ಇಂದೇನೋ ಅವಳು ಸಂಸಾರಮಾಡಿಕೊಂಡಿರುವದಕ್ಕೆ

ಆತುರಳಾಗಿದ್ದಾಳೆ. ಆದರೆ ನಾಳೆ ಅವಳಿಗೆ ತಿಳಿದೂ ತಿಳಿಯದಂತೆ ಅವಳಲ್ಲಿ ಸಾಮಾಜಿಕ ಜೀವನದ ಇಚ್ಛೆ ಮತ್ತೆ ಉದ್ಭವಿಸಿದರೆ? ಅವಳ ಈ ಸಾಹಸಕ್ಕಾಗಿ ಅವಳ ಮಕ್ಕಳೂ ಸಮಾಜದಿಂದ ಬಹಿಷ್ಕೃತರಾಗದೆ ಇರರು. ಅದರ ಫಲವನ್ನವರು ಅನುಭವಿಸಲೇ ಬೇಕಾಗುವದು. ತನ್ನ ಸಲುವಾಗಿಯಲ್ಲದಿದ್ದರೂ, ತನ್ನ ಮಕ್ಕಳ ಸಲುವಾಗಿಯಾದರೂ ಅವಳಿಗೆ ಪಶ್ಚಾತ್ತಾಪವುಂಟಾದರೆ?

ಅವನಿಗಂತೂ ಸಮಾಜದ ವಿಷಯದಲ್ಲಿ ಎಳ್ಳಷ್ಟೂ ಭೀತಿಯಿರಲಿಲ್ಲ. ಗಂಡಸಾದವನಿಗೆ ಸಮಾಜದದಲ್ಲಿ ಮಾನ ಸನ್ಮಾದ ಸ್ಥಳವೊಂದಿದ್ದಲ್ಲಿ ಆಯಿತು; ನಂತರ ಅವನು ಯಾವ ಮುಚ್ಚು ಮರೆಯೂ ಇಲ್ಲದೆ, ತನ್ನ ಮನೆಯಲ್ಲಿಯೇ ಒಬ್ಬ ಹೆಂಗಸನ್ನಿಟ್ಟುಕೊಂಡಿದ್ದರೂ ನಡೆಯುವದು. ಆದರೆ ವಿವಾಹಿತಳಾದ ಸ್ತ್ರೀಯೊಬ್ಬಳ ಮೇಲೆ ನಿಜವಾದ ಅನ್ಯಾಯವಾಗುತ್ತಿದ್ದಾಗ್ಯೂ, ಅವಳಿಗೆ ಆಶ್ರಯಕೊಡುವ ಮನುಷ್ಯನು ಸಮಾಜದ ದೃಷ್ಟಿಯಲ್ಲಿ ಅದಕ್ಕಿಂತ ದೋಷಿಯೆಂದೆಣಿಸಲ್ಪಡುತ್ತಾನೆಂಬದು ಅವನಿಗೆ ಗೊತ್ತಿತ್ತು. ಆದರೆ ತನ್ನ ವಿವೇಕಕ್ಕೆ ಸಮ್ಮತವಾದುದನ್ನು ಮಾಡುವಾಗ ಅವನು ಸಮಾಜದ ನಾಲ್ಕು ಜನರು ಏನೆಂದಾರೆಂದು ಅವನು ಎಳ್ಳಷ್ಟೂ ಚಿಂತಿಸುವಂತಿರಲಿಲ್ಲ. ಆ ಅವರ ಸಮಾಜದಲ್ಲಿ ಅವನು ತಾನಾಗಿ ಮುಂಬಿದ್ದು ಯಾರ ಗೆಳೆತನವನ್ನೂ ಅಷ್ಟಾಗಿ ಬಯಸಿರಲಿಲ್ಲ. ಬೇರೆಯವರೇ ತಾವಾಗಿ ಅವನ ಗೆಳೆತನವನ್ನು ಬಯಸಿ ಅವನ ಹತ್ತಿರ ಬಂದಿದ್ದರು. ಅವನ ಉದ್ಯೋಗ ವ್ಯವಹಾರಗಳು ಕೂಡ ಅದರಿಂದ ಯಾವ ಅಡೆ ತಡೆಯಿಲ್ಲದೆ ನಡೆಯುಬಹುದಾಗಿತ್ತು. ಅವನ ವಕೀಲಿಯ ವ್ಯವಸಾಯವು ಅಲ್ಲಿಯವರೆಗೆ ಹೇಗೆ ನಡೆದು ಬಂದಿತ್ತೋ ಹಾಗೆಯೇ ನಡೆಯುಬಹುದಾಗಿತ್ತು. ವ್ಯವಹಾರದಲ್ಲಿ ಜನರು ನಿಮ್ಮ ವೈಯುಕ್ತಿಕ ಜೀವನದ ನೈತಿಕ ಮೂಲ್ಯಗಳನ್ನು ಗಣನೆಗೆ ತಂದುಕೊಳ್ಳುವದಿಲ್ಲ; ಅಲ್ಲಿ ನಿಮ್ಮ ಬುದ್ಧಿಶಕ್ತಿಯ ಪ್ರಭಾವಕ್ಕಷ್ಟೇ ಬೆಲೆಯುಂಟು. ಅವನಿಗೆ ಆ "ಬಾರ ರೂಮು" ಅಲ್ಲಿ ನೀತಿವಂತರೆಂದು, ಸದ್ಗೃಹಸ್ಥರೆಂದು ಮೆರೆಯುವ ಆ ಜನ, ಅವರ ನೀತಿ, ತತ್ವದ ವ್ಯಾಖ್ಯೆ ಇವೆಲ್ಲ ಸರಿಯಾಗಿ ತಿಳಿದಿದ್ದವು ಅಲ್ಲಿಯ ಆ 'ಸಕಲಗುಣಸಂಪನ್ನ'ರು ತನ್ನನ್ನು ಅನೀತಿವಂತನೆಂದು ಕರೆದರೆ ಆ ಮಾತಿಗೇನು ಬೆಲೆಯೆಂಬುದನ್ನು ಅವನು ಅರಿತಿದ್ದ.

ಅವನ ದೃಷ್ಟಿಯಲ್ಲಿ ಅವರ ಆ ಅಭಿಪ್ರಾಯಗಳಿಗೆ ಒಂದು ಒಡಕು ಕವಡಿಯಷ್ಟೂ ಬೆಲೆಯಿರಲಿಲ್ಲ. ಅವನು ಯಾರನ್ನೂ ಎಳ್ಳಷ್ಟೂ ಲೆಕ್ಕಿಸುತ್ತಿರಲಿಲ್ಲ. ಅವನ ಮನಸ್ಸು ಅಷ್ಟು ಗಟ್ಟಿಯಾದುದಿತ್ತು; ಆದರೆ ಅವನು ಸಮಾಧಾನವಾಗಿದ್ದುದು ಅವಳ ಸಲುವಾಗಿ—ಅಚಲೆಗಾಗಿ.

ಒಂದು–ಎರಡು–ಮೂರು–ನಾಲ್ಕು ದಿನ ಕಳೆದವು. ಎಂಟು ದಿನಗಳಾದವು. ಅವನು ಅವಳನ್ನು ಕಾಣಲೂ ಇಲ್ಲ; ಪತ್ರಕ್ಕೆ ಉತ್ತರ ಕಳುಹಲೂ ಇಲ್ಲ. ಅಚಲೆಯನ್ನು ಸಂಪೂರ್ಣವಾಗಿ ಅಸ್ವಸ್ಥಳನ್ನಾಗಿಸುವ ಸಂಜೆಯೂ ಸಮೀಪಿಸಿತು. ಅವಳು ಒಂದೇ ಏಟಿಗೆ ವಿರಾಗನ ಮನೆ ಕಂಡಳು. ಆದರೆ ಅಲ್ಲಿ ಅವನನ್ನು ನೋಡುತ್ತಲೆ ಅವಳ ಧೈರ್ಯವೆಲ್ಲ ಒಮ್ಮೆಲೆ ಇಲ್ಲದಾಯಿತು. ಅವಳಿಗೆ ಅವನನ್ನು ಕಣ್ಣೆಟ್ಟು ಕೂಡ ನೋಡುವದಾಗಲಿಲ್ಲ. ಎಂಟು ದಿನಗಳಿಂದ ಕೂಡಿಟ್ಟಿದ್ದ ಮನದ ಶೋಕವೆಲ್ಲ ಕಟ್ಟೆಯೊಡೆದು ಅಶ್ರುರೂಪವಾಗಿ ಹೊರಸೂಸಬಹುದೆಂದು ಅವಳಿಗೆ ಹೆದರಿಕೆಯಾಯಿತು. ‘ಇಲ್ಲ. ಅದು ಶಕ್ಯವಿಲ್ಲ. ನಾನು ಅವರಿಗೆ ಎಲ್ಲವನ್ನೂ ತಿಳಿಸಿಬಿಡುವೆ.’

“ಅಚಲ!” ಅವನದೊಂದೇ ಶಬ್ದ! ಅದು ಅಚಲೆಯ ಹೃದಯದ ಕಟ್ಟೆಯನ್ನೊಡೆದುಬಿಟ್ಟಿತ್ತು. ಅವಳೇ ಮೇಲಕ್ಕೆದ್ದು ಮುನ್ನಡೆದಳು. ಅವನೆರಡೂ ಕೈಗಳನ್ನು ಗಟ್ಟಿಯಾಗಿ ಹಿಡಿದು ನುಡಿದಳು “ವಿರಾಗ, ಏನು ಹೇಳುವಿರಿ? ಸ್ವಚ್ಛವಾಗಿ ಹೇಳಿಬಿಡಿರಿ. ನಾನೊಬ್ಬ ಪಾಪಿಷ್ಠೆಯೆಂದಷ್ಟೆ—ಇದೇ ಅಲ್ಲವೆ, ನಿಮಗೆ ಹೇಳಬೇಕೆನ್ನಿಸುವುದು?” ಆ ಮಾತಿನ ಹಿಂದೆ ಎಂಟು ದಿನಗಳಲ್ಲಿ ಒಟ್ಟುಗೂಡಿದ್ದ ಅವಳ ಅಪ್ರತಿಹತವಾದ ದುಃಖವಾರಿಧಿ ಹೊಯ್ದಾಡುತ್ತಿದ್ದಿತು.

“ನಾನು ಹೀಗೆ ಹೇಳುವೆನೆಂದು ನಿನಗೆನ್ನಿಸಿದ್ದಿತೆ? ಹಾಗಿದ್ದರೆ ತಿಳಿದೂ ತಿಳಿದೂ ನನಗೆ ಪತ್ರ ಬರೆಯುವ ಹುಚ್ಚುತನ ಮಾಡದಿದ್ದರೆ ಒಳ್ಳೆಯದಿತ್ತಲ್ಲ” ಮೃದುವಾದ ಭಾವನೆಯನ್ನೂ ಕೂಡ ಕಠೋರವಾದ ಶಬ್ದಗಳಲ್ಲಿಯೇ ವ್ಯಕ್ತಪಡಿಸುವ ಅದೇ, ಅದೇ ಅವನ ರೀತಿ.

“ವಿರಾಗ, ಇಲ್ಲ. ನನಗೆ ಹಾಗೆನ್ನಿಸುವುದಿಲ್ಲ.”

“ಅಚಲ!” ಎಂದೆಂದಿಗೂ ದೃಷ್ಟಿಗೆ ಬೀಳದ ಮೃದುತೆಯೊಂದು ಅವನ ಕಣ್ಣುಗಳಲ್ಲಿ ಅವಳಿಗಿಂದು ಕಂಡಿತು. ಅವನು ಅವಳನ್ನು ಹತ್ತಿರ ಸೆಳೆದು

ಕೊಂಡ. ಶಬ್ದ ಮೌನದಲ್ಲಿ ಲೀನವಾಯಿತು. ಹೃದಯಕ್ಕೆ ಹೃದಯ ಸಾಕ್ಷಿಯಾಗಿ ನಿಂತಿತ್ತು. ಅವಳು ಮೆಲ್ಲಗೆ ನುಡಿದಳು.

"ನನ್ನ ಸ್ವಾರ್ಥಕ್ಕಾಗಿ ನಿಮ್ಮ ಸರ್ವಸ್ವದ ಹೋಳಿಮಾಡಲಿದ್ದೇನೆ ನಾನಿಂದು."

"ಇದೊಂದು ನನ್ನ ನಿಸ್ವಾರ್ಥವೆ? ಹುಚ್ಚಿ, ಸ್ವಾರ್ಥ ಯಾರನ್ನು ಬಿಟ್ಟಿದೆ? ನಾನೂ ಕೂಡ ಇದೇ ದಿನವನ್ನೇ ಎದುರುನೋಡುತ್ತಲಿದ್ದೆ."

೨೯

ಮನುಷ್ಯಸ್ವಭಾವವೆಂಬುದು ತೀರ ಅಕರ್ತ್ಯವಾದುದೆಂಬ ಮಾತೇನೂ ಸುಳ್ಳಲ್ಲ. ಯಾವ ಜಗತ್ತಿನೆಡೆಗೆ ಬೆನ್ನು ತಿರುಗಿಸಿ ಅಚಲೆ ಕುಳಿತಿದ್ದಳೊ, ಅದೇ ಜಗತ್ತಿನ ಜನರ ಪ್ರಲಾಪವನ್ನು ಕೇಳುವದಕ್ಕಾಗಿ ಅವಳು ತೀರ ಉತ್ಸುಕಳಾಗಿದ್ದಳು. ತನ್ನೆಲ್ಲ ಶಕ್ತಿಯನ್ನು ಕರ್ಣೇಂದ್ರಿಯದಲ್ಲಿ ಕೇಂದ್ರೀಕರಿಸಿ ಅವಳು ಕೇಳುತ್ತಿದ್ದಳು. ದಿನದಿನಕ್ಕೆ ಅಧಿಕವಾಗುತ್ತಿದ್ದ ಅವಳ ಅಪನಿಂದೆಯು ಜಗತ್ತಿನೊಳಗಿನ ಪ್ರತಿಯೊಂದು ವ್ಯಕ್ತಿಯನ್ನು—ತೀರ ಚಿಕ್ಕವರಿಂದ ಹಿರಿಯರವರೆಗೆ—ಅವಳ ನಡತೆಯ ವಿಷಯದಲ್ಲಿ ನ್ಯಾಯಾಧೀಶನನ್ನಾಗಿ ಮಾರ್ಪಡಿಸಿತ್ತು. ಹಾಗೆ ನೋಡಿದರೆ, ಅವಳ ನಡತೆಯ ವಿಷಯವಾಗಿ ಹೀಗೆ ತಮ್ಮ ನಿರ್ಣಯ ಕೊಡಲು ಅವರನ್ನು ಯಾರೂ ಕೇಳಿಕೊಂಡಿರಲಿಲ್ಲ. ಅವರಿಗೆ ಅಂಥ ಅಧಿಕಾರವನ್ನು ಯಾರೂ ಕೊಟ್ಟಿರಲಿಲ್ಲ. ಆದರೆ ದೇವರು ಮನುಷ್ಯನಿಗೆ ನಾಲಗೆ ಬಾಯಿಗಳನ್ನು ದಯಪಾಲಿಸಿದಾಗಲೇ ಅವನಿಗೆ ಒಂದು ಅಭೂತಪೂರ್ವವಾದ ಶಕ್ತಿಯನ್ನು ಕೊಟ್ಟುಬಿಟ್ಟಿದ್ದಾನೆ. ಮಾಂಸದ ಮೆತ್ತಗಿನ ಒಂದು ತುಂಡು ಹಲ್ಲೆಯಿಂದ ಮಾಡಲ್ಪಟ್ಟಿರುವ ಈ ನಮ್ಮ ನಾಲಗೆ ತೀಕ್ಷ್ಣವಾದ ಅಸಿಧಾರೆಗಿಂತಲೂ ಭಯಂಕರವಾದ ಸಾಮರ್ಥ್ಯವುಳ್ಳದ್ದಾಗಿದೆ. ಬಾಲ್ಯದಲ್ಲಿ ತೊದಲು ನುಡಿಯುತ್ತ ಹಿರಿಯರಿಗೆ ಪ್ರೀತಿಯುಕ್ಕಿಬರುವಂತೆ ಮಾಟಾದ ಬೈಗಳನ್ನು ಬೈಯುವ ಈ ನಾಲಗೆ ಮುಂದೆ ದೊಡ್ಡದಾದಂತೆಲ್ಲ ಮಹಾ ಆಘಾತಗಳನ್ನುಂಟುಮಾಡಬಲ್ಲ ಶಕ್ತಿಯುಳ್ಳದ್ದಾಗುತ್ತದೆ. ಅದೆಂದಿಗೂ ಸುಮ್ಮನೆ ಕೂಡುವದಿಲ್ಲ. ಅದು ಯಾವಾಗಲೂ ತನ್ನ ಭಕ್ಷ್ಯವನ್ನು ಹುಡುಕುತ್ತಲೇ ಇರುತ್ತದೆ. ತನ್ನ

ಕಕ್ಷೆಯಲ್ಲಿ ಬರುವ ಪ್ರತಿಯೊಂದು ವಸ್ತುವಿನ ಮೇಲೆಯೂ ಅದು ತನ್ನ ಮುದ್ರೆಯನ್ನೊತ್ತದೆ ಇರುವದಿಲ್ಲ. ಅಚಲೆಯಂತೂ ಹೇಳಿಕೇಳಿ ಜಗತ್ತಿಗಿಂತ ಬೇರೆಯಾಗಲೆಳಸುವವಳು. ಸಮಾಜಕ್ಕೆ ಪೂಜ್ಯವೆನಿಸಿದ ಪರಂಪರೆಗಳನ್ನು ಧಿಕ್ಕರಿಸಿ, ಬಹಿರಂಗವಾಗಿ, ನಾಲ್ಕು ಜನರೆದುರಿನಲ್ಲಿಯೇ ತನ್ನ ಮನದಿಂಗಿತವನ್ನೆಲ್ಲ ಸ್ಪಷ್ಟೋಕ್ತಿಗಳಲ್ಲಿ ಒಡನುಡಿದು, ಜಗತ್ತಿಗಿಂತ ಬೇರೆಯದಾದ ಮಾರ್ಗದ ಆವಶ್ಯಕತೆಯನ್ನು ಸಿದ್ಧಪಡಿಸಿ ಸಾರಲೆಳಸುವ ಅಚಲೆಯ ಮೇಲೆ ಸಹಸ್ರಾರು ನಾಲಗೆಗಳು ತಮ್ಮ ಕ್ರೂರವಾದ ವಾಗ್ಬಾಣಗಳನ್ನು ಸುರಿಸಿ ಗಾಯಗೊಳಿಸಿದುವಾದರೆ ಅದರಲ್ಲಿ ಆಶ್ಚರ್ಯವೇನು? ಆದರೆ ತುಂಬಿ ಬಂದ ಗಂಗೆಯು ತನ್ನೆರಡೂ ದಂಡೆಗಳನ್ನು ತುಂಬಿ ಹೊರಚೆಲ್ಲಿ ಹರಿಯುತ್ತಿರುವಾಗ ಚಿಕ್ಕಪುಟ್ಟ ತಗ್ಗು-ತೋಡುಗಳಷ್ಟೇ ಅಲ್ಲ, ದೊಡ್ಡದೊಡ್ಡ ಹಳ್ಳಗಳೂ ಕೂಡ ಮುಚ್ಚಿಹೋಗಿ ಒಂದೇ ಒಂದಾದ ಧೀರ ಗಂಭೀರ ಪ್ರಶಾಂತ ಪ್ರವಾಹವಾಗಿ ಕಾಣುತ್ತದೆ. ಹಾಗೆಯೇ ಅಚಲೆಯ ಹೃದಯವನ್ನೆಲ್ಲ ವ್ಯಾಪಿಸಿದ್ದ ಭಾವನೆಗಳ ಮಹಾಪೂರ ಉಳಿದೆಲ್ಲ ವಿಷಯಗಳನ್ನು ಅಳಿಸಿಬಿಟ್ಟಿತ್ತು.

## ೩೦

ವಿರಾಗ ಮತ್ತು ಅಚಲಾ! ಕಲ್ಲು ಮುಳ್ಳುಗಳಿಂದ ತುಂಬಿಹೋಗಿ ಸಂಚಾರಕ್ಕೆ ಕಡುದುಸ್ತರವಾಗಿದ್ದ ದೂರದ ಮಾರ್ಗವನ್ನು ಕ್ರಮಿಸಿ ಬಂದು, ಆ ಮಹಾ ಸಾಹಸ ಕಾರ್ಯದಲ್ಲಿ ಬಳಲಿ ಬೆಂಡಾಗಿ ಸತ್ತು ಸುಣ್ಣವಾಗಿದ್ದ ಆ ಎರಡು ಜೀವಗಳು ಕೊನೆಗೊಮ್ಮೆ ಒಂದುಗೂಡಿ ಪರಸ್ಪರ ಪ್ರೇಮದ ತನಿರಸವನ್ನೀಂಟಲಾರಂಭಿಸಿದ್ದವು

ಬಹಳ ದಿನಗಳ ಹಾರೈಕೆಯಿಂದ ಕೈಗೂಡಿ ಬಂದಿತ್ತು. ಅಪರಂಪಾರವಾದ ಪ್ರೇಮೋದಧಿ ಉಕ್ಕಲಾರಂಭಿಸಿತ್ತು. ಸಫಲಿತವಾದ ಪ್ರೇಮದ ನ್ಯೆಮರೆಯಿಸುವ ಮಧುರಮಿಲನದ ಅಪ್ಪುಗೆಯಲ್ಲಿ ಅವರು ಒಬ್ಬರನ್ನೊಬ್ಬರು ಗಟ್ಟಿಯಾಗಿ ಅಂಟಿಕೊಂಡಿದ್ದರು. ಅವರನ್ನು ಎಳೆದು ತಂದು ಒಂದುಗೂಡಿಸಿದ್ದ ಅವರ ಹೃದಯದ ಅಪ್ರತಿಹತವಾದ ಸೆಳೆತವಿಂದು ಹೊನಲಾಗಿ ಕಡಲಾಗಿ ಅವರನ್ನು ಸುತ್ತುಗಟ್ಟಿತ್ತು. ಆ ಸೆಳೆತದ ರಭಸಕ್ಕಿಂದು ಅವರು

ಮಾರುಹೋಗಿದ್ದರು. ಆದರ ಮಂತ್ರಶಕ್ತಿಯ ಮೋಹಿನಿಗೆ ಇಂದು ಅವರು ಮುಗ್ಧರಾಗಿ ಹೋಗಿದ್ದರು. ಇಂದು ಆ ಎರಡು ಎದೆಗಳಲ್ಲಿ ತರಂಗೋತ್ತ ರಂಗವಾಗಿ ಪಸರಿಸಿ ರಿಂಗಣಗಟ್ಟಿ ಕುಣಿಯುತ್ತಿದ್ದ ಭಾವನೆಗಳ ಉಬ್ಬೆಗವು ಕಾರು ತಿಂಗಳಿನ ಕಡಲ ಕುಣಿತವನ್ನೂ ಮೀರಿ ನಿಂತಿತ್ತು. ಓ, ಆ ಘೂರ್ಣಿಸುವ ಅರ್ಣವ! ಅವರ ಭಾವೋನ್ಮಾದದ ಉನ್ಮತ್ತ ವಾರಿಧಿಯಿಂದು ಅವೆರಡೂ ಹೃದಯಗಳ ದಂಡೆಯನ್ನು ಮೀರಿ ಹೊರಚೆಲ್ಲಲೆಳಸುತ್ತಿದ್ದಿತು. ಅವರ ಮನದಂಬೊಲದಲ್ಲಿ ಅದೇ ಅರಳಿ ಪೂರ್ಣ ಪ್ರಭೆಯಿಂದ ಬೆಳಗುತ್ತಲಿದ್ದ ಪ್ರೀತಿ ಚಂದ್ರನ ಅಮೃತಕಿರಣಗಳ ಆಹ್ವಾನಕ್ಕೆ ಮಾರುತ್ತರವಾಗಿ ಸಾಗಿ ನಡೆದಿದ್ದ ಅವರ ಹೃದಯಸಾಗರದ ಮೇಲಿನ ಹೆದ್ದೆರೆಗಳು! ಹಾಗೆ ಎತ್ತರಕ್ಕೆ ಜಿಗಿದು, ಕೆಳಗೆ ಬಿದ್ದು, ಮತ್ತೆ ಮೇಲಕ್ಕೆದ್ದು ಮುಂದಕ್ಕೆ ಸಾಗಿ ನಡೆದಿದ್ದ ತಮ್ಮ ಎದೆಗಡಲ ತೆರೆಗಳ ಮೇಲಿನಿಂದ ಸಾಗಿ ನಡೆದಿದ್ದರವರೀರ್ವರೂ— ವಿರಾಗ ಮತ್ತು ಅಚಲಾ!....ವಿರಾಗ ಮತ್ತು ಅಚಲಾ?

ಅಲ್ಲ, 'ವಿರಾಗ ಅಚಲಾ.'

ಈರ್ವರೂ ಒಬ್ಬರನ್ನೊಬ್ಬರು ಹೊಂದಿಕೊಂಡು ನಡೆದಿದ್ದರು. ಒಂದಾಗಲೆಂದು ನಡೆದಿದ್ದರು. ಇಂದು, ತೋಳುಗಳ ಬಿಗಿತಾದ ಬಂಧನದ ಮಧ್ಯದಲ್ಲಿ ಎದೆಗೆ ಎದೆ ಕೂಡಿದ್ದಿತು; ಕಣ್ಣಿಗೆ ಕಣ್ಣು, ಹಣೆಗೆ ಹಣೆ, ತುಟಿಗೆ ತುಟಿ. ಓ—ಅದೆಲ್ಲಕ್ಕಿಂತ ಹೆಚ್ಚಾಗಿ ಮನಕ್ಕೆ ಮನ, ಹೃದಯಕ್ಕೆ ಹೃದಯ, ಚೈತನ್ಯಕ್ಕೆ ಚೈತನ್ಯ ಒಂದಕ್ಕೊಂದು ಎದುರಾಗಿ ಹೊಂದಿ ನಿಂದಿದ್ದವು. ಈ ಒಳಗಿನ ಸ್ಪಂದನ ಪ್ರತಿಸ್ಪಂದನಗಳ ಮೇಳದಾಟವಿಂದು ಅವರಿಬ್ಬರ ಎದೆಗಳ ಹೊಡೆತವನ್ನು ಮೀರಿ ನಿಂದಿತ್ತು. ಆ ಪ್ರಚಂಡ ತಾಂಡವದ ಉನ್ಮತ್ತತೆಯ ಆನಂದವಿಂದು ಅವರನ್ನು ಮೈಮರೆಯಿಸಿತ್ತು. ಅವರಿಂದು ತಮ್ಮತನವನ್ನು ಮರೆತು ಒಬ್ಬರೊಡನೊಬ್ಬರು ಬೆರೆತು ಒಂದಾಗಿ ಹೋಗಿದ್ದರು. ಅವರಿಬ್ಬರೇ! ವಿರಾಗ ಮತ್ತು ಅಚಲಾ. ಅಲ್ಲ, ಅಲ್ಲ, ವಿರಾಗ-ಅಚಲಾ. ಅಚಲಾ-ವಿರಾಗ. ಆ ನಿರ್ವಿಕಲ್ಪ ಏಕತಾನತೆಯಿಂದು ಅವರನ್ನು ಒಂದೇ ಒಂದಾಗಿಸಿ ನಿಂದಿತ್ತು.

ಸರ್ವ ಸಚೇತನ ಸೃಷ್ಟಿಯನ್ನೆಲ್ಲ ಅಪ್ರತಿಮವಾದ 'ಸೆಳೆತ'ವೊಂದು ವ್ಯಾಪಿಸಿ ನಿಂತಿದೆ. ಈ ಕರುಳನ್ನು ಕೊರೆಯುವ ಸೆಳೆತಕ್ಕೇ ಕೆಲವರು

'ಪ್ರೇಮ'ವೆನ್ನುವುದುಂಟು. ಅದಕ್ಕೆ ಹೇಗೆ ಹೆಸರಿರಿಸಿದರೂ ಸರಿಯೆ. ಆದರೆ ಯಾವದೇ ಅರ್ಥದ ಅಥವಾ ಯಾವದೇ ಸ್ವರೂಪದ ಪ್ರೇಮವನ್ನು ಜಗದ ಜೀವದಿಂದ ಕಿತ್ತೊಗೆಯುವದಾದರೆ ಮನುಷ್ಯನ ಕಾರ್ಯಶಕ್ತಿಯೇ ಅರ್ಧಾಂಗವಾಯುವಿನಿಂದ ಗ್ರಸ್ತವಾದ ಶರೀರದ ಭಾಗದಂತೆ ನಿಃಸತ್ವವಾಗಿ ನಿಷ್ಕ್ರಿಯವಾಗದಿರದು. ಮನುಷ್ಯನ ಕರ್ತೃತ್ವ ಶಕ್ತಿಯೆಂಬುದು ಅವನು ತನ್ನ ಹೃದಯಸ್ಥ ಪ್ರೇಮಕ್ಕೆ ಅರ್ಪಿಸುವ ಕಾಣಿಕೆಯಲ್ಲದೆ ಬೇರಿಲ್ಲ. ಪ್ರೇಮವೇ ಇಲ್ಲದಿದ್ದಲ್ಲಿ ಮಾಡುವದಾದರೂ ಏನೆಂದು? ಯಾತಕ್ಕೆಂದು? ಯಾರಿಗಾಗಿ ಧಡಪಡಿಸುವದು? ಆ ಬಾಲವೃದ್ಧರನ್ನೆಲ್ಲ ಒಂದೆಡೆಗೆ ಕರೆ ತಂದು ಅವರಲ್ಲಿ ಪರಸ್ಪರ ಸಖ್ಯವನ್ನುಂಟು ಮಾಡಿ ಅವರನ್ನು ಒಬ್ಬರೊಬ್ಬರ ಸಹವಾಸಕಾತರರನ್ನಾಗಿಸಬಲ್ಲ ಈ ಅಖಿಲ ಸೃಷ್ಟಿಯೊಳಗಣ ವಿವಿಧಾಕಾರ ರೂಪರಂಗಗಳುಳ್ಳ, ಭಿನ್ನಭಿನ್ನವಾದ ಅನಂತವಾದ ಚರಾಚರವನ್ನೆಲ್ಲ ಏಕತ್ರ ಗೊಳಿಸುವ, ಮಧುರವಾದ ವಾತ್ಸಲ್ಯದ ಬಂಧನವೊಂದರಿಂದ ಬಿಗಿದಿಡುವ ಈ ಪ್ರೇಮರಜ್ಜುವನ್ನು ಕಡಿದೊಗೆಯವಿರಾದರೆ, ಸುಂದರವಾಗಿ ಹೊಂದಿಕೆಯಾಗಿ, ಚೆಂದವಾಗಿ ಕಾಣುವ ಈ ನಮ್ಮ ಬುವಿಯು ಬಾಳೆಲ್ಲ ಪೋಣಿಸಿದ ದಾರವೇ ಹರಿದುಹೋದ ಮುತ್ತಿನ ಹಾರದಂತೆ ದಿಕ್ಕಿಲ್ಲದೆ ಸೂರೆಯಾಗಿ ಹಸಗೆಟ್ಟು ಹೋಗಬಹುದು 'ಪ್ರೇಮ'ವೆನ್ನುವ ಭಾವನೆಯೇ ಅಂತಹದಾಗಿದೆ. ಅದು ಕೋಮಲ ವಸ್ತುಗಳಲ್ಲಿಯೇ ಅತ್ಯಂತ ಕೋಮಲತರವಾದುದು ಆದರೆ ಮನುಷ್ಯನ ಶಕ್ತಿಸರ್ವಸ್ವವೆಲ್ಲಕ್ಕೂ ಮೂಲಶಕ್ತಿಯಾಗಬಲ್ಲ ಅಮೋಘವಾದ ಸಾಮರ್ಥ್ಯವೂ ಅದರಲ್ಲಿಯೇ ಇದೆ. ಇಂತಹ ಈ ಎದೆಯೊಲವನ್ನು ಅಲ್ಲಿಯೇ ಕುತ್ತಿಗೆ ಹಿಸುಕಿಬಿಡುವ ಯತ್ನವನ್ನಾದರೂ ಮಾಡಿದಾದಲ್ಲಿ ಅವರ ಇತರೆಲ್ಲ ಶಕ್ತಿಗಳೂ ಅಲ್ಲಿಂದಲ್ಲಿಯೇ ಕಮರಿ ನಿಃಶೇಷವಾಗದಿರಲಾರವು. ಆದರೆ ಈ ಭಾವನೆಯೆಂತು ಅಂಕುರಿಸಿ ಪ್ರಫುಲ್ಲಿತವಾಗಲಾರಂಭಿಸುವದೋ ಅಂತೆಯೇ ಉಳಿದೆಲ್ಲ ಅಂತಸ್ಥ ಶಕ್ತಿಗಳೂ ಎಚ್ಚತ್ತು ಕಾರ್ಯಾಭಿಮುಖವಾಗಬಲ್ಲವು. ಮನುಷ್ಯನ ವ್ಯಕ್ತಿತ್ವದ ಎಲ್ಲ, ಎಲ್ಲ ಕಾರ್ಯಶಕ್ತಿಗಳ ಉನ್ಮೀಲನವಾಗುವದಾಗಲಿ ಅಥವಾ ಅಧೋಗತಿಯಾಗಲಿ ಇದೇ ಅಪ್ರತಿಮವಾದ ಭಾವನೆಯ ಉನ್ಮೀಲನ ಅಥವಾ ನಾಶವನ್ನವಲಂಬಿಸಿದೆ. ಹೃದಯಮಂದಿರದಲ್ಲಿ ಪ್ರಜ್ವಲಿತವಾಗಿ ಪ್ರಕಾಶಿಸುತ್ತಿರುವ ಈ ದಿವ್ಯಜ್ಯೋತಿ

ಯನ್ನು ಆದಾರು ಅಕಾಲದಲ್ಲಿಯೇ ನಂದಿಸಿಬಿಡುವ ಘೋರ ಪ್ರಯತ್ನ ಮಾಡಿದ್ದಾರೆಯೋ ಅಂತಹ ಶರೀರ ಮತ್ತು ಮನಸ್ಸುಗಳನ್ನು ಈ ಭಯಂಕರ ಶಕ್ತಿಯುತವಾದ ಜ್ಯೋತಿಯು ತನ್ನ ಪ್ರಚಂಡವಾದ ರೋಷಾವೇಶದ ರಭಸದ ತುಳಿತದಿಂದ ಗಾಸಿಗೊಳಿಸಿ ನುಗ್ಗು ನುಗ್ಗು ಮಾಡಿ ದುರ್ಬಲಗೊಳಿಸದೆ ಇಲ್ಲ. ಅಂಥವರ ಮನುಷ್ಯತ್ವವೇ ಅದರ ಮಹಾಜ್ವಾಲೆಗಳ ಕಾಡ್ಗಿಚ್ಚಿಗೀಡಾಗಿ ಸುಟ್ಟು ಸುಣ್ಣವಾಗದೆ ಇಲ್ಲ

ಎಲ್ಲವನ್ನೂ ಮೀರಿಸಿ ನಿಂದಿರುವ ಆ ಉನ್ಮತ್ತತೆಯ ಕುಣಿತ! ಅದನ್ನು ತಡೆವವರಾರು? ಈ ಬಾಳುವೆಯ ದೊಡ್ಡ ನಾಟ್ಯಗೃಹದಲ್ಲಿ ಹರೆಯದ ಮಿರಿ ಮಿರಿ ಮಿಂಚುವ ನೃತ್ಯರಂಗದ ಮಧ್ಯದಲ್ಲಿ ಅಭಿಮುಖರಾಗಿ ಅನುರಾಗದ ಮದಿರೆಯನ್ನುಂಟಿ ನಿಂದಿರುವ ಈ ಹೆಣ್ಣು—ಈ ಗಂಡು! ಸುಮಧುರ ಗಂಧಸ್ವನಗಳಿಂದೊಡಗೂಡಿ ಸೃಷ್ಟಿಸೂತ್ರಧಾರನಾಗಿ ಮೊದಲು ಗಂಟೆ ಬಾರಿಸುವದೊಂದೇ ತಡ, ಆ ನಿಸರ್ಗದ ಅನುಪಮವಾದ ಹಿಮ್ಮೇಳದ 'ತಾಳಲಂಗವು ತರಂಗವಾಗಿ ತೆರೆಯುತಿರಲು ನರ್ತಸೋನ್ಮಾದವೊಂದನ್ನು ಮೈದುಂಬಿ ತರುವದು.' ಧಮನಿ ಧಮನಿಗಳಲ್ಲಿ ಬಿಸಿಬಿಸಿಯಾದ ನೆತ್ತರು ಪ್ರಚಂಡ ವೇಗದಿಂದ ಧಾವಿಸುತ್ತಿರಲು ಧಿಮ್ ಧಿಮ್ ಧಿಮಿ ಧಿಮ್ಮೆಂದು ಕುಣಿವ ಅವರ ಕುಣಿತಕ್ಕೆ ತಡೆಯೊಡ್ಡುವವರಾರು? ಪ್ರಕೋಪಿಸಿ ಪುಟಿದೆದ್ದು ಧಾವಿಸಿ ಪ್ರವಹಿಸುತ್ತಿರುವ ಜ್ವಾಲಾಮುಖಿಯನ್ನು ತಡೆವವರಾರು? ಉಕ್ಕಿ ಹೊರ ಚೆಲ್ಲುತ್ತಿರುವ ಸಾಗರವನ್ನು ಒಡ್ಡುಗಟ್ಟಿ ನಿಲ್ಲಿಸುವವರಾರು?

ತರುಣ-ತರುಣಿಯರ ಪ್ರೇಮ! ಅದು ತಾರುಣ್ಯದ ಕೇವಲ ಒಂದು ಉನ್ಮಾದವೆಂದು ಕೆಲವರೆನ್ನಬಹುದು! ಆದರೆ ಈ ಉನ್ಮಾದವೆಂತಹ ಅದ್ಭುತ ಶಕ್ತಿಯ ಆಗರವಾಗಿದೆಯೆಂಬುದನ್ನು ಅವರರಿಯರು. ಅಖಿಲ ಮಾನವ ಜಾತಿಯ ಬಾಳ್ವಿಯ ಚಕ್ರವನ್ನು ಒಂದೇ ಸವನೆ ತಿರುಗುತ್ತಲಿರಿಸುವ ಸಾಮರ್ಥ್ಯವು ಈ 'ಪ್ರೇಮ'ದಲ್ಲಿಯೇ ಇದೆ. ಇಡೀ ಸಮಾಜದ ಧಾರೆಯೇ ಈ ಅವ್ಯಕ್ತವೂ, ದಿವ್ಯವೂ, ಸೂಕ್ಷ್ಮವೂ ಮತ್ತು ಅತ್ಯಂತ ಬಲಶಾಲಿಯೂ ಆದ ಪ್ರೇಮಪಾಶವನ್ನೇ ಅವಲಂಬಿಸಿದೆ.

ಎಂತಹ ಕಠೋರವಾದ ವಜ್ರದೇಹಿಯಾದ ಪುರುಷನೂ ಕೂಡ ಈ ಪ್ರೇಮದ ಸೆಳೆತದಿಂದ ಆಕರ್ಷಿತನಾಗಿ ಸ್ತಿಮಿತನಾಗದೆ ಇಲ್ಲ. ಹೂವಿನೆಸಳ

ಗಿಂತಲೂ ಮೃದುವಾದ ಈ ಪ್ರೇಮರಜ್ಜುವಿನಿಂದ ಬಂಧಿತರಾಗಿ ಪರಸ್ಪರರೆಡೆಗೆ ಎಳೆಯಲ್ಪಡುತ್ತಿರುವ ಎರಡು ಜೀವಗಳು ಕ್ಷಣಮಾತ್ರ ಉಳಿದೆಲ್ಲ ಜಗತ್ತನ್ನು ಮರೆಯುತ್ತವೆ. ಅವರಿಗೆ ಆ ಮತ್ತೊಂದು ವ್ಯಕ್ತಿಯ ಪದದೆಡೆಯಲ್ಲಿ ತಮ್ಮೆಲ್ಲ ಸರ್ವಸ್ವವನ್ನೂ ಅರ್ಪಿಸಿಬಿಡುವ ಹಂಬಲವುಂಟಾಗುತ್ತದೆ. ಸತ್ವವನ್ನೇ ಮರೆಯಿಸಿಬಿಡುವ ಈ ಒಲವಿನಲ್ಲಿ ಅಂಥದಾವ ಮೋಹನಿಯಡಗಿದೆಯೋ ದೇವರೇ ಬಲ್ಲ! ಇಡೀ ಜಗತ್ತೇ ತನ್ನ ಮೇಲೆ ಬಿದ್ದರೂ ಲೆಕ್ಕಿಸದೆ ಅದನ್ನೆದುರಿಸಿ ನಿಲ್ಲುವ ಸಾಮರ್ಥ್ಯವನ್ನು ಮನುಷ್ಯನಿಗೆ ಆ ಅಬಲೆಯ ಪ್ರೇಮದ ಮೆಲ್ನುಡಿಗಳಲ್ಲಿ ಮೈಗೂಡಿಬರುವದು. ಮತ್ತೆ ಅವಳಿಗೂ ಸರ್ವಸ್ವವೇ ಲಭಿಸಿದ ಮಹಾನಂದವುಂಟಾಗುವದು!

ಪ್ರೇಮದ ಜಾದುವಿನಿಂದ ಮೋಹಿತರಾಗಿಹೋಗಿ ತಮ್ಮನ್ನೇ ಮರೆತು ಒಂದನ್ನೊಂದು ಆಶ್ರಯಿಸಿ ಸುಖಿಸಲೆಳಸುವ ಎರಡು ಜೀವಿಗಳಲ್ಲಿ ವೃಕ್ಷವಾವುದು, ಲತೆ ಯಾವುದು? ಪ್ರೇಮಮುಗ್ಧರಾಗಿಹೋಗಿರುವ ಎರಡು ವ್ಯಕ್ತಿಗಳಲ್ಲಿ ಶ್ರೇಷ್ಠವಾವುದು, ಕನಿಷ್ಠವಾವುದು? ಇಬ್ಬರೂ ಪ್ರೇಮದ ಸೆರೆಯಾಳುಗಳು ಇಬ್ಬರೂ ಒಬ್ಬರೊಬ್ಬರ ದಾಸರು, ಒಬ್ಬರೊಬ್ಬರ ಯಜಮಾನರು. ದಪ್ಪನ್ನ ಅಹಂಕಾರದ ಪೊರೆಯಿಂದ ಆವೃತವಾದ ಜೀವವು ಕೂಡ ತನ್ನನ್ನು ಸುತ್ತಿರುವ ಆ ಕೋಶವನ್ನು ಭೇದಿಸಿ, ಹೊರಬಂದು, ತನ್ನನ್ನು ಆ ಎರಡನೆಯದರಲ್ಲಿ ಲಯಗೊಳಿಸಲು ಹವಣಿಸುತ್ತದೆ. ಅಲ್ಲಿ ಎರಡೆಂಬುದೇ ಇಲ್ಲ.

ತೀರ ಹತ್ತಿರದ ಪ್ರಿಯ ವ್ಯಕ್ತಿಯ ಸಾನ್ನಿಧ್ಯದಲ್ಲಿ ಯಾರು ಸೂರ್ಯೋದಯ ಅಥವಾ ಸೂರ್ಯಾಸ್ತದ ಸೌಂದರ್ಯವನ್ನು ನೋಡಿರುವರೋ, ಎತ್ತರವಾದ ಪರ್ವತದ ಉನ್ನತ ತುದಿಯಲ್ಲಿ ನಿಂತು, ಅಥವಾ ಗಿರಿಕಂದರಗಳಲ್ಲಿ ಕಾಡುಮೇಡುಗಳನ್ನು ಸುತ್ತುತ್ತ ಅಲ್ಲಿಯ ಗಭೀರ ಸೌಂದರ್ಯವನ್ನು ಯಾರು ಕೆಲಕಾಲ ಅನುಭವಿಸಿರುವರೋ, ಪೂರ್ಣಿಮೆಯ ಚಂದ್ರನನ್ನು ಕಂಡೊಡನೆ ಉಕ್ಕಿಬರುವ ಸಾಗರವನ್ನು ನೋಡಿ ಯಾರು ಆನಂದಿಸಿರುವರೊ ಅಥವಾ ನಿತಾಂತಮಧುರವಾದ ಗೀತಸ್ವರಗಳನ್ನು ಆಲಿಸಿ ಯಾರು ಮೈಮರೆತು ಆ ನಾದದೊಡನೆ ಏಕತಾನವಾಗಿ ಹೋಗಿರುವರೋ ಅಂಥವರಿಗೆ ಹೃದಯಕಮಲದ ಒಂದೊಂದೇ ಪಕಳೆಗಳನ್ನು ತೆರೆದು ಅದನ್ನು ಅರಳಿಸುವ ಈ ಪ್ರೇಮದ ಜಾದು ಎಂತಹುದೆಂಬುದು ತಿಳಿದೀತು. ಜಂಜಾಟ

ಗಳಿಂದೊಡಗೂಡಿದ ಮಾನವಲೋಕದ ಈ ಅನಂತವಾದ ಕೋಲಾಹಲದಲ್ಲಿ ಸಾಮಾನ್ಯವಾಗಿ ಲಕ್ಷ್ಯಕ್ಕೆ ಬಾರದಿರುವ ಆದರೆ ಪ್ರತಿಯೊಂದು ವಸ್ತುವಿನಲ್ಲಿಯೂ ನಿನದಿಸುತ್ತಿರುವ ನಿತಾಂತರಮ್ಯವಾದ ಸಂಗೀತವು ಕೇಳಿಬರುವದು, ದೈವಿಕವಾದೊಂದು ಕೋಮಲತೆಯೋ ವೈವೆತ್ತು ನಿಂದಂತಿರುವ ಈ 'ಪ್ರೇಮ'ದಿಂದೊಡಗೂಡಿ ಪ್ರಶಾಂತ ಗಂಭೀರವಾದ ವಾತಾವರಣದಲ್ಲಿಯೇ.

ಚಕಚಕಿಸುವ ಚಿಕ್ಕೆಗಳಲ್ಲಿ, ತೂಗಿ ತೊನೆವ ವನಂಗಳಲ್ಲಿ, ಜುಳುಜುಳು ಹರಿಯುವ ಅಬ್ಬಿಗಳಲ್ಲಷ್ಟೇ ಅಲ್ಲ, ಆದರೆ ನಿಸ್ತಬ್ಧವಾದ ಕಲ್ಲುಬಂಡೆಗಳಲ್ಲಿಯೂ ಕೂಡ ನಿನದಿಸುವ ಸಂಗೀತ ಕೇಳಿಬರುವದುಂಟು ಒಮ್ಮೊಮ್ಮೆ. ತೀರ ಹತ್ತಿರದವರ ಸಾನ್ನಿಧ್ಯದಲ್ಲಿ ಮಾತ್ರ ಈ ದೈವಿಕವಾದ ಸಂಗೀತ ಕೇಳಿಬರುವದು. ಯಾವುದೋ ಒಂದು ದೈವೀಶಕ್ತಿಯಿಂದ ನಿರ್ಮಿತವಾಗಿರುವ ಸಕಲ ವಸ್ತುಜಾತಗಳಲ್ಲಿ ವಾಸಿಸುತ್ತಿರುವ ಸತ್, ಚಿತ್ ಮತ್ತು ಆನಂದವನ್ನು ಕಾಣುವದಕ್ಕೆ ಮತ್ತು ಅನುಭವಿಸುವದಕ್ಕೆ ಈ ಪ್ರೇಮ ಜಲದಿಂದ ಸಿಂಚಿತವಾಗಿ ಪವಿತ್ರವಾಗಿರುವ ಆತ್ಮಗಳಿಗೆ ಮಾತ್ರ ಸಾಧ್ಯ. ಆಗ ಪ್ರೇಮದ ಸೊದೆಯಿಂದ ಸೇಚನಗೊಂಡ ಸಕಲೇಂದ್ರಿಯಗಳೂ, ಹೂತು, ಕಾತು, ಮಾಗಿ, ಬಾಯ್ಬಿಟ್ಟು ನೀದಿರುವ ಪೂರ್ಣಫಲದಂತೆ— ಸಿದ್ಧವಾಗಿ ನಿಲ್ಲುವವು. ಕೊನೆಮೊದಲಿಲ್ಲದ ಹಾರೈಕೆಯೊಂದನ್ನು ಹೊತ್ತು, ಕೊಂಡು ಆತುರವಾಗಿ ನಿಂದಿರುವ ಹೃದಯದ ಪ್ರತಿಯೊಂದು ಬಡಿತವೂ ನರನರಗಳಲ್ಲಿ ಧಾವಿಸುತ್ತಿರುವ ಬಿಸಿ ರಕ್ತದ ಪ್ರತಿಯೊಂದು ಹನಿಯೂ 'ತ್ಯಾಗ' 'ತ್ಯಾಗ' 'ತ್ಯಾಗ'ವೆಂದು ಒಳನುಡಿಯಲಾರಂಭಿಸುತ್ತದೆ.

ವಿರಾಗ ಮತ್ತು ಅಚಲೆಯರಿಬ್ಬರೂ ಇದೇ ತ್ಯಾಗಕ್ಕೆ ಉತ್ಸುಕರಾಗಿದ್ದರು.

ಜೇನ್ನೊಣಗಳ ಹುಟ್ಟಿಗೇ ಕಲ್ಲೊಗೆದಂತಾಗಿದ್ದಿತು. ಅದರಿಂದ ಖತ್ತಿಗೊಂಡೆದ್ದು ಎಲ್ಲೆಡೆಗೂ ಸಿಡಿದೆದ್ದ ಆ ನೊಣಗಳು ವಿರಾಗ ಮತ್ತು ಅಚಲೆಯರಿಬ್ಬರನ್ನಷ್ಟೇ ಅಲ್ಲ, ದಾರಿಯಲ್ಲಿ ಸಿಕ್ಕಿದ ಪ್ರತಿಯೊಬ್ಬರನ್ನೂ ಸಿಟ್ಟಿನಿಂದ ಕ್ರೂರವಾಗಿ ದಂಶಿಸುತ್ತ ನಡೆದವು. ಸ್ತ್ರೀಯರು, ಸ್ತ್ರೀಶಿಕ್ಷಣ, ಸ್ತ್ರೀಸ್ವಾತಂತ್ರ್ಯ, 'ಇಂಗ್ಲೀಷ್ ಶಿಕ್ಷಣ, ಪಾಶ್ಚಿಮಾತ್ಯ ಸಂಸ್ಕೃತಿ—ಮುಂತಾದ ಎಲ್ಲ ವಿಷಯಗಳ ಮೇಲೂ ಹರಿಹಾಯ್ದವು. ಅಲ್ಲಲ್ಲಿ ಸಭೆಗಳೇರ್ಪಟ್ಟು ಸಾರ್ವಜನಿಕ ನಿಷೇಧ

ಗಳಾದವು. ವರ್ತಮಾನಪತ್ರದ ಮುಖಪುಟಗಳೆಲ್ಲ ದೊಡ್ಡ ಅಕ್ಷರಗಳಿಂದ ತುಂಬಿಹೋದವು. ಅನೇಕ ಛಾಪಖಾನೆಗಳ ಮೊಳೆ ಜೋಡಿಸುವವರು, ಪ್ರೂಪುಗಳನ್ನು ತಿದ್ದುವವರು, ಎಷ್ಟೋ ಜನ ಸಂಪಾದಕರು, ಅವೆಷ್ಟೋ ಧರ್ಮಪಾಲಕರು, ಸಂಸ್ಕೃತಿ ರಕ್ಷಕರೇ ಮೊದಲಾದವರಿಗೆಲ್ಲ ಕೆಲವು ತಿಂಗಳು ಗಳವರೆಗೆ ಕೆಲಸ ದೊರೆಯಿತು!

ಪರಕೀಯರ ಪ್ರಭುತ್ವದ ಅಡಿಯಲ್ಲಿ ಸ್ವಾಭಿಮಾನಶೂನ್ಯರಾಗಿ ಶಿರ ಬಾಗಿ ನಮಿಸುವಾಗ ಯಾರ ಹೃದಯಗಳು ಒಂದು ಕ್ಷಣ ಕೂಡ ಕಂಪಿಸ ಲಿಲ್ಲವೋ ಒಂದಿನಿತು ಕೂಡ ಅಳುಕಲಿಲ್ಲವೋ ಅಂಥವರೀಗ ಅನ್ಯಾಯದ ವಿರುದ್ಧವಾಗಿ ಬಂಡು ಹೂಡಿದ್ದ ಅಚಲಾ ವಿರಾಗರ ಎದುರಿನಲ್ಲಿ ತಮ್ಮ ಉಚ್ಚವಾದ ಸಂಸ್ಕೃತಿಯ ತೇಜಸ್ವಿತೆಯನ್ನು ತೆರೆದುಹಿಡಿಯುವ ಆಢ್ಯತೆಯ ಪರಾಕ್ರಮವನ್ನು ಕೈಕೊಂಡಿದ್ದರು.

ಆದರೆ ಈ ನಮ್ಮ ಸಮಾಜದಲ್ಲಿ ಈ ತರದ ಜನರಲ್ಲದೆ ಬೇರೆ ಅಭಿ ಪ್ರಾಯದವರೂ ಇಲ್ಲದೆ ಇಲ್ಲ. ಉದಯೋನ್ಮುಖವಾದ ತರುಣ ವರ್ಗವು ಕೆಲವಂಶದಲ್ಲಿ ಬಂಧನಗಳನ್ನು ಕಡಿದೊಗೆಯಲು ಯಾವಾಗಲೂ ಹವಣಿಸು ತ್ತಲೇ ಇರುತ್ತದೆ. ಅವರಲ್ಲಿ ಅನೇಕರಿಗೆ ಅಚಲಾ ವಿರಾಗರಂತಹರ ವಿಷಯವಾಗಿ ಸಹಾನುಭೂತಿ ಇದ್ದೇ ಇರುತ್ತದೆ. ತಲೆಹರಟೆ ಹೊಡೆಯುವ ತರುಣರನೇಕರು ತಾರುಣ್ಯದ ಉನ್ಮಾದದ ಭರದಲ್ಲಿ ಅಚಲಾ ವಿರಾಗರ ವಿಷಯವಾಗಿ ಕುಚೇಷ್ಟೆಮಾಡಿ ಬಾಯಿಗೆ ಬಂದದ್ದನ್ನು ನುಡಿದಿದ್ದರೂ ಅವರ ಆ ಮಾತುಗಳಲ್ಲಿ ತಥ್ಯವಿರಲಿಲ್ಲ. ಮತ್ತೆ ಕೆಲವರಂತೂ ಅವರಿಬ್ಬರ ವಿಷಯ ವಾಗಿ ಮಾತು ಬಂದಾಗಲೆಲ್ಲ ಅವರ ನಡತೆಯ ಸಮರ್ಥನೆಯನ್ನೂ ಮಾಡ ಲಾರಂಭಿಸಿದರು. ಆದರೆ ಇದೆಲ್ಲ ಯಾವಾಗ? ಮೊದಲು ದಿನಗಳ ಅಚ್ಚರಿಯ ಪ್ರತಿಕ್ರಿಯೆಯ ಮಹಾಪೂರವು ಇಳಿದನಂತರ, ಕ್ರಿಯೆ-ಪ್ರತಿಕ್ರಿಯೆಗಳ ದ್ವಂದ್ವವು ಯಾವಾಗಲೂ ಇದ್ದೇ ಇದೆ. ಒಮ್ಮೆ ಒಂದು ಸಲ ಮೇಲಿನಿಂದ ಕೆಳಗಿನವರೆಗೆ ಎಲ್ಲರೂ ಏಕಮುಖವಾಗಿ ಅಚಲಾ ವಿರಾಗರ ಕೃತ್ಯವನ್ನು ಖಂಡಿಸಿ ಅವರನ್ನು ನಿಂದಿಸಿದರು. ಅನಂತರ ಅದರ ಪ್ರತಿಕ್ರಿಯೆಗೆ ಪ್ರಾರಂಭ ವಾಗುವದೊಂದೇ ತಡ, ಅನೇಕ ಬಿಚ್ಚುಮನದ ಸಾಮಾಜಿಕರು ಅವರಿಬ್ಬ ರನ್ನೂ ಅವರ ಧೈರ್ಯಕ್ಕಾಗಿ ಅಭಿನಂದಿಸಲೂ ತೊಡಗಿದರು. ಆದರೆ

ಇಂಥವರು ತೀರ ಸ್ವಲ್ಪ ಜನ ಮಾತ್ರ. ಆದರೆ ಇದು ಆಶ್ಚರ್ಯಪಡಬೇಕಾದ ಮಾತೇನೂ ಅಲ್ಲ. ಯಾಕೆಂದರೆ ಶಂಕ್ವಾಕೃತಿ ಸಮಾಜದ ದಿನ್ನೆಯ ತುದಿಯಲ್ಲಿ ಕುಳಿತು ಸೂಕ್ಷ್ಮವಾಗಿ ಸಮಾಜದ ನಿರೀಕ್ಷಣೆ ಮಾಡಬಲ್ಲವರು ತೀರ ವಿರಳ. ಮತ್ತು ಇಷ್ಟೇ ಅಲ್ಲದೆ, ಹಾಗೆ ಮಾಡುವದಾದಲ್ಲಿ ಆ ಉನ್ನತ ಸ್ಥಳವೇ ಅವರ ಶೂಲವಾಗುವದೂ ಉಂಟು. ಇಂಥ ಸ್ವತಂತ್ರ ವಿಚಾರಿಗಳು ಮಹತ್ತರವಾದ ತ್ಯಾಗವೆಸಗಿದನಂತರವೇ ಅವರ ಕೆಳಗಿರುವ ದೊಡ್ಡ ಸಮಾಜ ಎಚ್ಚರಗೊಳ್ಳುತ್ತದೆ.

ವಿರಾಗನೊಡನೆ ಇರಹತ್ತುವದಕ್ಕಿಂತ ಮೊದಲೇ ಅಚಲೆ ಶಾಲೆಯ ಕೆಲಸಕ್ಕೆ ರಾಜೀನಾಮೆ ಕೊಟ್ಟಿದ್ದಳು. ಈಗ ಅವಳು ಅವನ ಮನೆಯ ತಣ್ಣೆಳಲಲ್ಲಿ ಸುರಕ್ಷಿತವಾಗಿ ಸುಖವಾಗಿದ್ದಳು. ವಿರಾಗನು ಮಾತ್ರ ಹೆರವರ ದೃಷ್ಟಿಭಲ್ಲೆಗಳ ಮತ್ತು ಖಡ್ಗಧಾರೆಗಿಂತಲೂ ತೀಕ್ಷ್ಣವಾದ ಅವರ ನಿಂದೆಯ ನುಡಿಗಳ ಪ್ರಹಾರಗಳನ್ನು ನಿರ್ಭೀತಿಯಿಂದ ಸ್ವೀಕರಿಸುತ್ತ ಮುನ್ನಡೆದಿದ್ದ. ಅವನ ಮನಸ್ಸೇ ಅಂತಹ ಉಕ್ಕಿಗೆ ಕವಚ ತೊಟ್ಟಿದ್ದಂತೆ ಗಟ್ಟಿಯಾದುದಿತ್ತು. ತಮ್ಮಿಬ್ಬರ ವಿಷಯವಾಗಿ ನಡೆದಿದ್ದ ಅಪನಿಂದೆಯ ವಿಷಯವಾಗಿ ಅವನು ಸಂಪೂರ್ಣವಾಗಿ ಉದಾಸೀನನಾಗಿದ್ದ.

ಬೊಗಳುವ ನಾಯಿಗೆ ನೀವು ಹೆದರಿಕೊಳ್ಳುತ್ತೀರೆಂದು ಕಂಡರೆ ಅದು ಮತ್ತೆ ಮತ್ತೆ ಜೋರು ಜೋರಿನಿಂದ ಒದರುತ್ತ ನಿಮ್ಮ ಮೈಯೇರಿ ಬರುವದು. ನೀವು ಧೈರ್ಯದಿಂದ ಅದನ್ನು ದುರ್ಲಕ್ಷಿಸಿ ನಡೆದರೆ ಅದು ಅಲ್ಲಿಯೇ ಒದರಿಕೊಂಡು ಸುಮ್ಮನಾಗಿ ಬಿಡುವದು. ಸಮಾಜದ ನಡವಳಿಕೆಯೂ ಸ್ವಲ್ಪಮಟ್ಟಿಗೆ ಹೀಗೇ ಆಗಿದೆ. ನೀವು ಜನರ ಮಾತಿಗೆ ಬಹಳ ಬೆಲೆ ಕೊಡುವಿರೆಂದು ಕಂಡರೆ ನಿಮ್ಮನ್ನವರು ಸುಮ್ಮನಿರಗೊಡುವದಿಲ್ಲ. ಅನಂತರ ಬೆಕ್ಕಿನ ಕೈಗೆ ಸಿಕ್ಕುಬಿದ್ದಂತೆ ನಿಮ್ಮ ಗತಿಯಾಗದಿರದು. ಆದರೆ ನೀವು ಅವರೇನೇ ಎಂದರೂ ನಿರ್ಲಕ್ಷಿಸಿ ಸಾಗುವಿರಾದರೆ ಕೆಲವರು ನಿಮಗೆ ನಿರ್ಲಜ್ಜರೆನ್ನಬಹುದು. ಮತ್ತೆ ಕೆಲವರು ನಿಮಗೆ ಗಟ್ಟಿಗರೆಂದೆನ್ನಬಹುದು." ಆದರೆ ಅದಕ್ಕಿಂತ ಹೆಚ್ಚಿನದೇನನ್ನೂ ಅವರು ನಿಮಗೆ ಮಾಡಲಾರರು. ಅಚಲಾ ವಿರಾಗರ ನಿರುದ್ವಿಗ್ನತೆಗೂ ಜನರು ಹೀಗೇ ಏನೇನೋ ಹೆಸರಿರಿಸಿದರು.

## ೩೧

ಒಬ್ಬರೊಬ್ಬರ ಸಲುವಾಗಿ ಸರ್ವಸ್ವವನ್ನೂ ತೊರೆದುಬಿಡಲು ಸಿದ್ಧರಾಗಿ ನಿಂತಿದ್ದ ವಿರಾಗ ಮತ್ತು ಅಚಲಾ! ಆದರೆ ಅವಳ ಮನಸ್ಸು ಯಾವದೋ ಒಂದು ಸಂದೇಹದ ಮಡುವಿಗೆ ಸಿಕ್ಕುಬಿದ್ದಿತ್ತು. ಭಾವನೆಗಳ ಅತ್ಯಂತಿಕ ಪರಿಸೀಮೆಯನ್ನು ಮುಟ್ಟಿ ಭಾವೋದ್ವೇಗದ ಯಾತನೆಯಿಂದ ತನ್ನ ದೇಹ ವನ್ನು ಬಳಲಿಸುತ್ತಿದ್ದ ಅಚಲೆಗೆ ಎನ್ನಿಸುತ್ತಿತ್ತು, 'ಛೆ, ನನ್ನ ತ್ಯಾಗವೆಂತ ಹದು? ವಿರಾಗನ ತ್ಯಾಗ ನಿಜವಾಗಿಯೂ ದೊಡ್ಡದು! ಅವನ ಜೀವನ ಮಾರ್ಗದಲ್ಲಿ ಮುಳ್ಳುಗಳನ್ನು ಹರವಲೆಳಸುವವಳು ನಾನು. ನನ್ನದೆಲ್ಲಿಯ ತ್ಯಾಗ.' ಅವಳು ಅವನನ್ನೇ ನೋಡುತ್ತಲಿದ್ದಳು. 'ನನ್ನ ಸ್ವಾರ್ಥಕ್ಕೆಂದು ನಾನು ಈ ಮಹಾನುಭಾವನ ಬಲಿಗೊಡುತ್ತಲಿದ್ದೇನೆ. ಎತ್ತರದಲ್ಲಿ ಹಾರುತ್ತ ಲಿರುವ ಈ ವಿಹಂಗಮನ ರೆಕ್ಕೆಗಳನ್ನು ನಾನು ಕಡಿದೊಗೆಯುತ್ತಲಿದ್ದೇನೆ.'

ಅನೇಕ ಸಲ ಅವಳು ಸಂಕಟಪಟ್ಟು ವಿರಾಗನನ್ನು ಕೇಳುವಳು, "ವಿರಾಗ, ಕೋಪ-ತಾಪ-ಅನಾದರಗಳಿಗೆ ನಿಮ್ಮನ್ನು ಗುರಿಮಾಡಿ, ಈ ಮನೆಯ ನಾಲ್ಕು ಗೋಡೆಗಳ ಆವಾರದಲ್ಲಿ ನನ್ನ ಮನೋದೇಹಗಳನ್ನು ಹಾಯಾ ಗಿರಿಸಿ ಸುಖಿಸಲೆಳಸುವ ನಾನು ಸ್ವಾರ್ಥಿಯಲ್ಲವೆ? ಮಹಾ ಕೃತಘ್ನಳಲ್ಲವೆ?"

"ಅಚಲಾ, ನಿನಗಿನ್ನೂ ನನ್ನ ಪರಿಚಯವಾಗಲಿಲ್ಲ."

"ವಿರಾಗ, ನಾನು ನಿಮ್ಮನ್ನು ಅರಿತಿದ್ದೇನೆ. ಮತ್ತೆ ನಿಮ್ಮ ತ್ಯಾಗದ ಫಲವನ್ನು ಸ್ವಾರ್ಥಿಯಾಗಿ ಉಪಭೋಗಿಸುತ್ತಲಿದ್ದೇನೆ."

"ಇಲ್ಲ. ನಿನಗಿಂತ ನಾನೇ ಹೆಚ್ಚಾಗಿ ಸ್ವಾರ್ಥಿಯಾಗಿದ್ದೇನೆ. ಯಾವ ವಸ್ತು ಜೀವನದಲ್ಲಿ ನನಗೆಂದಿಗೂ ದೊರೆಯಲಾರದೆಂದು ನಾನು ತಿಳಿದಿದ್ದೆನೋ ಅದು ಕೈಗೆ ದೊರೆಯುತ್ತಲೇ ಅದನ್ನು ಅಪಹರಿಸುವ ನಾನೆಷ್ಟು ಸ್ವಾರ್ಥಿಯೆಂಬುದನ್ನು ಬಲ್ಲೆಯಾ?"

ಅವಳನ್ನು ಅವನು ಸಮಾಧಾನಪಡಿಸಲು ಪ್ರಯತ್ನಪಟ್ಟಂತೆಲ್ಲ ಅಚಲೆಗೆ ವಿರಾಗನ ದೊಡ್ಡಸ್ತಿಕೆಯ ವಿಷಯವಾಗಿ ಹೆಚ್ಚೆಚ್ಚು ಆದರವೆನ್ನಿಸಲಾರಂಭಿ ಸಿತು. ಅವಳು ತನ್ನನ್ನು ತಾನೇ ತಿರಸ್ಕರಿಸಿಕೊಳ್ಳುವಳು. ಆದರಿಂದ ಅವಳ ಔದಾಸೀನ್ಯ ಹೆಚ್ಚುವದು. ತಾನು ವಿರಾಗನಿಗೆಂತಹ ಅನ್ಯಾಯವೆಸಗು ತ್ತಿದ್ದೇನೆಂದೆನ್ನಿಸುವದು.—ತಾವು ಮಾಡಿದ ನಿವಾರಿಸಲಾಗದ ಪಾಪದ

ಸ್ಮರಣೆಯಿಂದ ಪರಿತಪಿಸುತ್ತಿರುವವರಂತೆ ಅವಳು ಪುನಃ ಪುನಃ ವಿಹ್ವಲಗೊಳ್ಳುವಳು. ಆ ಆತ್ಮಾವಹೇಳನೆ ಅವಳನ್ನು ಬೆನ್ನು ಹತ್ತಿದ ಭೂತದಂತೆ ದಿಕ್ಕುಗೆಡಿಸಿತ್ತು. ಚಳಿಯಿಂದ ನಡುಗುತ್ತಿರುವ ದರಿದ್ರನಿಗೆ ಉಣ್ಣೆಯ ವಸ್ತ್ರ ದೊರೆತಲ್ಲಿ ಅವನಿಗೆ, ಅದನ್ನು ತಾನು ಧರಿಸಿದಲ್ಲಿ ಅದೆಲ್ಲಾದರೂ ಹರಿದೀತು, ಹೊಲಸಾದೀತೆಂದು ಹೆದರಿಕೆಯಾಗುತ್ತದೆ. ತಾನು ಚಳಿಯಿಂದ ನಡುಗುತ್ತಿದ್ದರೂ ಅದನ್ನು ಎದುರಿಗಿಟ್ಟುಕೊಂಡು ಹಾಗೆಯೇ ಅದನ್ನು ನೋಡುತ್ತ ಕೂಡ್ರುವದರಲ್ಲಿಯೇ ಅವನಿಗೆ ವಿಶೇಷ ಆನಂದವೆನ್ನಿಸುತ್ತದೆ! ಅದಕ್ಕೆ ಯಾರೇನು ಮಾಡಬಲ್ಲರು? 'ವಿರಾಗನ ಮಾಯೆಯ ಶಾಲನ್ನು ಹೊದ್ದುಕೊಳ್ಳಲು ನಾನು ಯೋಗ್ಯಳಲ್ಲ' ಎಂದು ಅವಳದವಳಿಗೇ ಎನ್ನಿಸುತ್ತಿತ್ತು.

ವಿರಾಗನ ಬುದ್ಧಿಯ ಪ್ರಖರತೆ, ಭಾವನೆಗಳ ಆಳ, ಅವನ ಮನಃಸಾಮರ್ಥ್ಯ ಇವೆಲ್ಲ ಅವಳನ್ನು ದಂಗುಗೊಳಿಸಿದ್ದುವು. ಜನರೆಲ್ಲ ಹೇಗೆ ಅವನ ಚೇಷ್ಟೆ ಮಾಡಿ ನಗುತ್ತಿರಬಹುದೆಂಬುದರ ವಿಕಾರ ಚಿತ್ರಗಳು ಅವಳ ಕಣ್ಣಿಗೆ ಕಟ್ಟುವವು; ಅವರ ವಿಕಟ ಹಾಸ್ಯದ ಕರ್ಕಶ ಸ್ವರ ಅವಳ ಕಿವಿಗೆ ಕೇಳಿಸುವದು. ಆದರೆ ಅವನೋ? ಅದೇ ಶಾಂತ, ಗಂಭೀರ ಮುಖ. ಅವನ ನಿಶ್ಚಲವಾದ ಮನಃಸಾಮರ್ಥ್ಯವನ್ನು ಕಂಡು ಅವಳು ಆಶ್ಚರಿಗೊಳ್ಳುವಳು. ಅವಳ ಹೃದಯ ಯಾವದೋ ಒಂದು ಅವ್ಯಕ್ತವಾದ ಹೊಯ್ದಾಡುವ ಆನಂದ ಮತ್ತು ಅಷ್ಟೇ ಅಪಾರವಾದ, ತೀವ್ರವಾದ ಅಳಲಿನಿಂದ ತುಂಬಿ ಬರುವದು. 'ಓ ವಿರಾಗ, ವಿರಾಗ.' ತನ್ನ ಸಲುವಾಗಿ ಅವನು ತನ್ನ ಮನದ ಅಸಮಾಧಾನವನ್ನು ತೋರಗೊಡದೆ ಅಲ್ಲಿಂದಲ್ಲಿಯೇ ಹತ್ತಿಕ್ಕುತ್ತಿರುವನೆಂದು ಅವಳಿಗೆನ್ನಿಸುವದು.

ಕಷ್ಟದಿಂದ ಅಸಾಧ್ಯವಾದುದನ್ನು ಸಾಧ್ಯಗೊಳಿಸಿ ಅದರಲ್ಲಿಯೇ ಸುಖಪಡುವ ವಿರಾಗನಿಗೆ ಸಮಾಜದ ಹೆದರಿಕೆಯೆಂಬುದು ಎಳ್ಳಷ್ಟೂ ಇರಲಿಲ್ಲ. ಆ ಕ್ಷಣದ ಮಟ್ಟಿಗೆ ಮಾತ್ರ ಅವನು ಜನರ ಟೀಕೆಯಿಂದ ಅಸ್ವಸ್ಥನಾಗುವನು. ಆದರೆ ತಪ್ಪಿ ಕೂಡ ಅವನಿಗೆ ಒಮ್ಮೆಯೂ ಪಶ್ಚಾತ್ತಾಪವೆನ್ನಿಸುತ್ತಿರಲಿಲ್ಲ. ಸಮಾಜದ ಔದಾರ್ಯದ ಕಲ್ಪನೆಯೂ ಅವನಿಗಿದ್ದಿತು. ಗಣ್ಯತೆ ಪಡೆದು ಸಾಮಾನ್ಯವಾಗಿ ನಾಲ್ಕು ಜನರಲ್ಲಿ ಮನ್ನಣೆವೆತ್ತ ಜೀವನ ಸಾಗಿಸುವ

ಮನುಷ್ಯ ಒಮ್ಮೊಂದೊಮ್ಮೆ ಸಮಾಜಬಾಹಿರ ವರ್ತನೆ ಮಾಡಿದುದಾದರೆ ಸಮಾಜ ರೊಚ್ಚಿಗೇಳುತ್ತದೆಂಬುದೇನೋ ನಿಜ; ಆದರೆ ಮರುಕ್ಷಣ ಅದು ಈ ರೀತಿ ತಿರುಗಿ ವಿಚಾರಮಾಡುತ್ತದೆ: 'ಈ ಮನುಷ್ಯ ಸಾಮಾನ್ಯವಾಗಿ ಒಳ್ಳೆಯವನೇ ಸರಿ. ಹಾಗಿದ್ದರೆ ಅವನು ಇದೇ ಒಂದು ವಿಷಯದಲ್ಲಿ ಹೀಗೇಕೆ ನಡೆದುಕೊಂಡಿರಬಹುದು? ಹಾಗೆ ಮಾಡುವದರಲ್ಲಿಯೂ ಬಹುತರ ಏನೋ ಜಾಣತನವಿರಲೇಬೇಕು.'

ತನ್ನ ಸುತ್ತಲಿನ ಸಮಾಜವೆತ್ತ ಸಾಗಿದೆ, ಅದರಲ್ಲಿಯ ಉದಯೋನ್ಮುಖವಾದ, ಹೊಸ ಬಾಳಿನ ಹೊಸ ನೀತಿಯನ್ನು ಪ್ರಸ್ಥಾಪಿಸಲೆಳಸುವ ತರುಣರ ವಿಚಾರಗಳು ಪ್ರಗತಿಯ ಮಾರ್ಗದಲ್ಲಿ ಎಲ್ಲಿಯ ವರೆಗೆ ಬಂದು ಮುಟ್ಟಿವೆ—ಇವೆಲ್ಲ ವಿಚಾರಗಳನ್ನು ಅವನು ಮನಗಂಡಿದ್ದ. ಸಮಾಜದ ರೋಷಕ್ಕೆ ಕಾರಣವಾಗುವ, ಸಮಾಜಕ್ರಾಂತಿಯ ದಾರಿಯಲ್ಲಿ ನಡೆಯುವ ವಿಚಾರವಂತನ ಕೃತಿಯು ಮುಂದೆ ಕಾಲಾಂತರದಲ್ಲಿ ಸಮಾಜದ ಆದರಕ್ಕೇ ಹೇಗೆ ಪಾತ್ರವಾಗುವದೆಂಬ ಮಾತನ್ನೂ ಅವನು ಅರಿತಿದ್ದ. ಗಳಹುತ್ತಿರುವ ಮೂರ್ಖ ಪಂಡಿತನ ಎದುರಿನಲ್ಲಿ ಕುಳಿತು ಮನದಲ್ಲಿಯೇ ನಗುತ್ತ ಅವನೆಲ್ಲ ಮಾತುಗಳನ್ನು ಆಲಿಸಿ, ಕೊನೆಗೆ ಮೆಲ್ಲಗೆ ಮಾತನಾಡಿ ಅವನನ್ನು ದಾರಿಗೆ ತರುವ ಜಾಣನಂತೆ ವಿರಾಗನು ಸಾಮಾಜಿಕರ ನಿಂದೆ, ನಿರ್ಭರ್ತ್ಸನೆಗಳನ್ನು ಶಾಂತ ಮನದಿಂದ ಆಲಿಸುತ್ತಿದ್ದನು. ಬಾಯಲ್ಲಾಡಿದುದನ್ನು ಕೈಯಲ್ಲಿ ಮಾಡಿತೋರಿಸಲಾಗದವರಂತೆಯೇ ಸಮಾಜದ ಸಾಮಾನ್ಯ ಜೀವನವಿರುತ್ತದೆ. ಅಚಲೆಯಂತೆ ಹೆಸರಿಗೆ ಸಧವೆಯಾದರೂ ವಿಧವೆಯರಂತೆಯೇ ಜೀವನ ಸಾಗಿಸುವ ಸ್ತ್ರೀಯರ ವಿಷಯವಾಗಿ ಸಮಾಜದಲ್ಲಿ ಅನುಕಂಪವಿರುವದಿಲ್ಲವೆಂತಲ್ಲ. ಆದರೆ ಆ ಅನುಕಂಪದನಂತರ ಏನು ಮಾಡುವದೆಂದು ವಿಚಾರಮಾಡುವದಕ್ಕೆ ಮಾತ್ರ ಸಮಾಜಕ್ಕೆ ವೇಳೆ ಬೇಕಾಗುತ್ತದೆ. ಅಂಥ ಸ್ತ್ರೀಯರ ಕರೆಗೆ ಓಗೊಟ್ಟು ಮುಂಬರುವ ಧೈರ್ಯವನ್ನು ಯಾರಾದರಲ್ಲಿ ಮಾಡಬೇಕಾಗುತ್ತದೆ. ಇಂಥ ಮನುಷ್ಯನ ಮೇಲೆ ಸಮಾಜ ಮೊದಲಿಗೆ ಕೆರಳಿದರೂ ಬೇಗನೆ ಅದಕ್ಕೆ ತಾನು ಮಾಡಿದ ಅನ್ಯಾಯದ ಕಲ್ಪನೆಯಾಗದಿರಲಾರದು. ಮತ್ತೆ ಕೂಡಲೆ ಅದಕ್ಕಾಗಿ ಹಳಹಳಿಸಿ ಆದಂಥ ಅನ್ಯಾಯದ ಪರಿಮಾರ್ಜನೆ ಮಾಡಲು ಅದು ಸಿದ್ಧವಾಗು

ತ್ತದೆ. ಸಮಾಜ ಜೀವನದ ಈ ಇತಿಹಾಸವನ್ನು ಅವನು ಅರಿತವನಾಗಿದ್ದ. ಅಚಲೆಗಾಗಲಿ ಅಥವಾ ಅವಳ ಮಕ್ಕಳಿಗಾಗಲಿ ಸಮಾಜದಲ್ಲಿ ಯಾವ ಸನ್ಮಾನದ ಸ್ಥಾನವೂ ದೊರೆಯಲಿಕ್ಕಿಲ್ಲವೆಂಬ ಮಾತೂ ಅವನಿಗೆ ಸ್ಪಷ್ಟವಾಗಿ ಕಾಣಿಸುತ್ತಿತ್ತು. ಅವನು ತನ್ನೆಲ್ಲ ಸಂಪತ್ತಿಯನ್ನೂ ಅವರಿಗೆ ಕೊಟ್ಟು ಬಿಟ್ಟಿದ್ದ. ಹಣದ ಪ್ರಭಾವವೆಂತಹದೆಂಬುದು ಅವನಿಗೆ ಗೊತ್ತಿದ್ದಿತು. ಸಮಾಜದಲ್ಲಿ ಮಾನ್ಯತೆಯೆಂಬುದು ಈ ಹಣದ ಮೇಲೆಯೇ ಅವಲಂಬಿಸಿದೆ. ಅಚಲಾ ವಿರಾಗರಿಬ್ಬರೂ ಈ ಎಲ್ಲ ವಿಷಯಗಳನ್ನೂ ಕೂಲಂಕಷವಾಗಿ ಚರ್ಚಿಸಿದ್ದರು. ತಾವು ಇಡುತ್ತಿರುವ ಹೆಜ್ಜೆಯಿಂದುದ್ಭವಿಸಬಹುದಾದ ನಾನಾ ತರದ ಸಮಸ್ಯೆಗಳೆಲ್ಲವನ್ನೂ ಅವರು ಛೇದಿಸಿ ಛೇದಿಸಿ ನೋಡಿದ್ದರು. ತಮ್ಮ ಮಾರ್ಗದೊಳಗಿನ ಎಲ್ಲ ಸಂಕಟಗಳನ್ನೂ, ಅಡ್ಡಿ ಆತಂಕಗಳನ್ನೂ, ತಾವು ಸಹಿಸಬೇಕಾಗಿರುವ ಎಲ್ಲ ಸಂಕಷ್ಟ ಅಪನಿಂದೆಗಳನ್ನೂ ಅವನು ಅವಳಿಗೆ ಸರಿಯಾಗಿ ಮೊದಲೇ ವಿವರಿಸಿ ಹೇಳಿದ್ದ. ಅದನ್ನೆಲ್ಲ ಅವಳು ಎದುರಿಸಿ ನಿಲ್ಲಬಲ್ಲಳೇ? ಆಗ ಅವಳ ಮನಸ್ಸು ಗಟ್ಟಿಯಾಗಿತ್ತು. ಅವಳು ಯಾವು ದಕ್ಕೂ ಸಿದ್ಧಳಾಗಿದ್ದಳೆಂದು ಅವನಿಗೆ ತೋರಿತು. ಅವಳ ಈ ನಿಶ್ಚಯವನ್ನು ಕಂಡೇ ಅವನು ಮುಂದಿನ ಹೆಜ್ಜೆ ಇಟ್ಟಿದ್ದ. ಆದರೆ ಅಚಲಾ! ಅನೇಕರಿಗೆ ತಮ್ಮನ್ನೇ ತಾವು ಬೇಟಿಯಾಡುವ ಚಟವಿರುವದುಂಟು. ಅಚಲೆ ಯಾವಾಗಲೂ ತನ್ನನ್ನು ತೀರ ಕಠೋರಳಾಗಿ ಪರೀಕ್ಷಿಸಿಕೊಳ್ಳುವಳು.

ಒಂದೊಂದು ಸಲ ಅವಳು ತೀರ ಹತಾಶಳಾಗಿ ವಿರಾಗನಿಗೆ ಅನ್ನುವಳು: "ನಿಮಗೆ ನನ್ನನ್ನು ಕಂಡರೆ ಆಗೀಗ ತಿರಸ್ಕಾರವೆನ್ನಿಸುವದಿಲ್ಲವಷ್ಟೆ? ಕೇವಲ ವಿಕಾರವಶಳಾಗಿ ನಾನು ನಿಮ್ಮನ್ನಾಶ್ರಯಿಸಿದೆನೆನ್ನಿಸುವದಿಲ್ಲವಷೆ ನಿಮಗೆ? ಈಗ ಒಬ್ಬರೊಡನೆ ಅವಿಶ್ವಾಸದಿಂದ ವರ್ತಿಸಿದ ನಾನು ನಿಮ್ಮನ್ನೂ ಹಾಗೇ ತೊಲಗಿ ಹೋಗಬಹುದೆಂದು ನಿಮಗನ್ನಿಸುವದಿಲ್ಲವಷ್ಟೆ?"

ಅವಳವೇ ಮನದ ಸಂಶಯ! ಅವಳವೇ ಮನದ ಭೂತಗಳು! ಅವು ಅವಳನ್ನು ಕುಳಿತಲ್ಲಿ ಕೂಡಗೊಡುತ್ತಿರಲಿಲ್ಲ! ಅವಳ ಮನಕ್ಕೆ ಶಾಂತಿ ಯೆಂಬುದೇ ಉಳಿದಿರಲಿಲ್ಲ ವಿರಾಗ ಅದಕ್ಕೇನೂ ಉತ್ತರ ಕೊಡುತ್ತಿರಲಿಲ್ಲ. ಆದರೆ ಅವನ ಹೃದಯದ ಸ್ಪಂದನ ಅವಳ ಕಿವಿಯಲ್ಲಿ ಉಸಿರುತ್ತಿತ್ತು: "ಕೇಳು, ನೆಟ್ಟಗೆ ಕೇಳು; ನೀನು ನನ್ನ ಪ್ರಾಣದ ಪ್ರಾಣವಾಗಿರುವೆ. ಈಗ

ಲಾದರೂ ನಂಬಿಗೆಯಾಯಿತೆ ನಿನಗೆ" ಅವಳ ತಳಮಳಿಸುವ ಜೀವ ಶಾಂತವಾಗುವದು. ಅಂತಹ ಅವಸ್ಥೆಯಲ್ಲಿ ಅವಳು ತನ್ನನ್ನು ತಾನೇ ದೂಷಿಸಿ ಕೊಳ್ಳುವಳು.

ಅವನೆನ್ನುವ, "ನೀನು ಮಾಡಿದುದು ನಿನಗೆ ಪಾಪವೆನ್ನಿಸುವದೆ?"

"ಎಂದಿಗೂ ಇಲ್ಲ."

"ಹಾಗಾದರೆ? ಅವಿಚಾರವೆಂದೆ?"

"ಇಲ್ಲ, ಇಲ್ಲ. ವಿರಾಗ, ಯಾವ ತಪ್ಪೂ ಅಲ್ಲ: ಅವಿಚಾರವೂ ಅಲ್ಲ. ಆದರೆ—ಆದರೆ"

'ಆದರೆ'ಯ ಅರ್ಥವೇನೆಂಬುದು ಅವಳಿಗೂ ಗೊತ್ತಿರಲಿಲ್ಲ.

ಇಂಥ ತಲೆತಿರುಗಿಸುವ ಮನದ ತೂಗಾಟದಲ್ಲಿಯೂ ಸುಖದ ಕ್ಷಣಗಳೇ ದುಃಖಕ್ಕಿಂತ ಹೆಚ್ಚಾಗಿದ್ದವು. ಅದು ಅವರಿಬ್ಬರದೇ ವಿಶ್ವವಾಗಿದ್ದಿತು. ಇಬ್ಬರೂ ಪರಸ್ಪರರ ಸಾನ್ನಿಧ್ಯದಲ್ಲಿ ಮೈಮರೆಯಿಸಿ ಬಿಡುವ ಆನಂದೋನ್ಮಾದವೊಂದರಲ್ಲಿ ಮುಳುಗಿ ಒಬ್ಬರೊಬ್ಬರ ಮನವನ್ನೆಲ್ಲ ವ್ಯಾಪಿಸಿ ನಿಲ್ಲುವರು. ಉಳಿದೆಲ್ಲವನ್ನೂ ಅಳಿಸಿ ಮರೆಯಿಸಿಬಿಟ್ಟಿದ್ದ ಆ ದಿವ್ಯ ಮಧುರ ವಾತಾವರಣದಲ್ಲಿ ದುಃಖದ ವಿಚಾರವೂ ಕೂಡ ಒಂದು ವಿಶೇಷವಾದ ಸುಖಸಂವೇದನೆಯನ್ನೇ ಉಂಟುಮಾಡುವದು.

ಶಾಶ್ವತ ಸುಖ ಮತ್ತು ಸಮಾಧಾನ! ಇದು ಜಗತ್ತಿನಲ್ಲಿ ಯಾರಿಗಾದರೂ ಲಭಿಸಿದೆಯೇ? ಸುಖಕ್ಕೆಂದು ಇಡೀ ಮಾನವ ಜಾತಿಯೇ ಧಡಪಡಿಸುತ್ತಲಿದೆ. ಆದರೆ ಕಾಲಚಕ್ರ ಮಾತ್ರ ಒಂದೇ ಸವನೆ ತನ್ನಷ್ಟಕ್ಕೆ ತಾನು ತಿರುಗುತ್ತಿರುತ್ತದೆ. ಯಾತಕ್ಕಾಗಿಯೋ ಏನೋ! ಆದರೆ ನಿರ್ಹೇತುಕವಾಗಿ, ಅಸಾಧ್ಯನಂತವಾಗಿ ತಿರುಗುತ್ತಿರುವ ಈ ಕುಲಾಲ ಚಕ್ರದಲ್ಲಿ ಸಿಕ್ಕುಬಿದ್ದ ಮಾನವರು ಒಂದೇ ಸವನೆ ಧಡಪಡಿಸುತ್ತ ಕಾಣದ ದಾರಿಯೊಂದನ್ನು ಹಿಡಿದು ಓಡಿಯೋ ಓಡುತ್ತಲಿರುತ್ತಾರೆ! ಆದರೆ ಅವರೆಷ್ಟು ಕಷ್ಟಪಟ್ಟರೇನು? ಏನು ಮಾಡಿದರೇನು? ಕಾಲಚಕ್ರ ಬದಲಾಗುವದಿಲ್ಲ. ಅದೇ ಅಸುಖ! ಅದೇ ಅಸಮಾಧಾನ! ವಿವೇಕದಿಂದ ನಡೆಯುವಿರೆಂದಾದರೆ ಭಾವನೆಗಳು ಕೆರಳಿ ನಿಲ್ಲುತ್ತವೆ. ಭಾವವಶರಾಗಿ ನಡೆದರೋ ವಿವೇಕದ ಚುಚ್ಚುವಿಕೆಗಾರಂಭವಾಗುತ್ತದೆ. ವಿವೇಕಬುದ್ಧಿ ಮತ್ತು ಭಾವನೆ ಇವೆರಡೂ

ಸರಿಸಮವಾಗಿ ಒಂದೇ ಪಾತಳಿಯಲ್ಲಿ ಎಂದೆಂದಿಗೂ ನಿಲ್ಲುವದೇ ಇಲ್ಲ. ಭಾವನೆ ಮತ್ತು ವಿವೇಕಗಳ ಪರಡಿಗಳನ್ನು ಒಂದೊಂದು ಬದಿಗೆ ಕಟ್ಟಿ ಕೊಂಡಿರುವ ಈ ಜೀವನದ ತಕ್ಕಡಿಯನ್ನು ತೂಗುತ್ತಲೇ ಮನುಷ್ಯನ ಜನ್ಮ ವೆಲ್ಲ ಕಳೆದುಹೋಗುತ್ತದೆ. ಆದರೆ ಜೀವಿತದ ಸಮತೂಕದ ಸುಖವೆಂದೂ ಮನುಷ್ಯನ ಉಡಿಯಲ್ಲಿ ಬೀಳುವದೇ ಇಲ್ಲ.

ಅಸಮಾಧಾನಿಯಾದ ಮನುಷ್ಯ ಸುಖಸಮಾಧಾನಗಳನ್ನು ಬಯಸಿ ಇಡುವ ಪ್ರತಿಯೊಂದು ಹೆಜ್ಜೆಯೂ ತಪ್ಪದೆ ತಿರುಗಿ ಅವನನ್ನು ಅಸಮಾ ಧಾನದ ಮಾರ್ಗಕ್ಕೇ ಒಯ್ಯುವಂತೆ ತೋರುತ್ತದೆ. ಕೈಗೆ ಬಂದುದೂ ಕೂಡ ಮಾಯಾನಗರದಲ್ಲಿಯ ಪ್ರಾಸಾದಗಳಂತೆಯೇ ಇಲ್ಲದಾಗುತ್ತದೆ. ಅನಂತರ ಏನಾದರೊಂದೊಂದನ್ನು ಬೇಡಿ ಬಯಸಿ ಅದು ಕೈಗೆ ದೊರೆತೂ ಅದರಿಂದ ಸುಖವಾಗದಿದ್ದಲ್ಲಿ ಎಂದೂ ಕೈಗೂಡದ ಹಾರೈಕೆಯೊಂದರ ಬೆನ್ನು ಹತ್ತಿ ಜೀವನದುದ್ದಕ್ಕೂ ಧಡಪಡಿಸುತ್ತಿರುವದರಲ್ಲಿಯೇ ಆನಂದವಿರಬಹುದೇ ಎಂದು ತೋರುತ್ತದೆ. ಆ ಅಲಭ್ಯಲಾಭದಲ್ಲಿಯೇ ನಿಜವಾದ ಸುಖವಿರಬಹು ದೆಂದೆನ್ನಿಸುತ್ತದೆ. ಲಾಭ ಮತ್ತು ಆ ಲಾಭದಿಂದ ಪೂರ್ಣತೆ?—ಛೆ, ಹಾಗೆಂದಿಗೂ ಆಗುವದೇ ಇಲ್ಲ. ಒಡಕು ಗಡಿಗೆಗೆ ನೀರು ಹಾಕಿದಂತೆಯೇ ಸರಿ! ಈ ಅಸಮಾಧಾನದ ಗುಹ್ವರವು ಅತ್ಯಂತ ಆಳವಾದುದಾಗಿದೆ. ಅದ ರಲ್ಲಿ ನೀವು ಏನೇ ತುಂಬಿರಿ. ಅದೆಂದಿಗೂ ತುಂಬಿ ಬರುವದೇ ಇಲ್ಲ. ಆದ್ದ ರಿಂದಲೇ ಅನುಭವಿಕರಾದ ತತ್ವಜ್ಞಾನಿಗಳು ಹೇಳುವದೇನೆಂದರೆ, 'ನಿರಾ ಸಕ್ತರಾಗಿರಿ. ಈ ಆಸಕ್ತಿ ಬೇಡ. ಅದರಿಂದುದ್ಭೂತವಾಗುವ ಅಸಮಾ ಧಾನವೂ ಬೇಡ.' ಆದರೆ ಮಾತೆಯ ಗರ್ಭದಿಂದ ಹೊರಬರುವಾಗಲೇ 'ಸೋಹಮ್, ಸೋಹಮ್' ಎಂಬ ಆತ್ಮಪ್ರತಿಷ್ಠಾಪನೆಯ ಮಂತ್ರವ ನ್ನುಚರಿಸುತ್ತಲೇ ಹೊರಬರುವ ಜೀವಕ್ಕೆ 'ನಿರಾಸಕ್ತ'ನಾಗೆಂದು ಹೇಳು ವದು ಬೀಸುವ ಗಾಳಿಗೆ ನಿಂತಲ್ಲಿಯೇ ನಿಲ್ಲೆಂದು ಹೇಳಿದಂತೆಯೇ ಸರಿ. ಸೃಷ್ಟಿಯ ಚಿರಂತನೆಯನ್ನೇ ಆಸಕ್ತಿಯು ತನ್ನ ಮುಷ್ಟಿಯಲ್ಲಿ ಮುಚ್ಚಿ ಹಿಡಿದಿದೆ. ಹೀಗಿರುವಾಗ ಈ ಮಹಾಸೃಷ್ಟಿಯ ಯಃಕಶ್ಚಿತ ಭಾಗವಾದೊಂದು ಜೀವಿಯು ಆ ಮುಷ್ಟಿಯೊಳಗಿಂದ ನಿರಾಸಕ್ತವಾಗಿ ಹೊರಬಿದ್ದು ಎಲ್ಲಿರ ಬಲ್ಲದು? ಏನು ಮಾಡಬಲ್ಲದು? ಹಾಗಾದರೇನು? ಹಾಗಾದರೆ ಇದೇ ನಿಜ

ವಾದುದು. ಜೀವನವೊಂದು ಕೊನೆಮೊದಲಿಲ್ಲದ ಹೊಡೆದಾಟ. ಈ ಹೊಡೆದಾಟವಿಲ್ಲದ ಜೀವನವೇ ಇರಲಾರದು. ನಿರಾಶೆ, ಅಸಮಾಧಾನ, ಅಸಂತುಷ್ಟಿ ಮತ್ತು ಸಂಕಟಗಳ ಕಲ್ಲುಮುಳ್ಳುಗಳನ್ನು ತುಳಿಯುತ್ತ ಅಲ್ಲಿ ದೂರದಲ್ಲಿ ಕ್ಷಿತಿಜದ ಮೇಲೆ ಕಾಣುತ್ತಿರುವ ಆಸೆಯ ಅಸಮಾಧಾನದ ಜ್ಯೋತಿಯನ್ನು ಹಿಡಿಯಲೆಂದು ಮುನ್ನುಗ್ಗುವದೇ ಜೀವನ! ಅದೊಂದು ಎಂದಿಗೂ ಮುಗಿಯದ ಮುಟ್ಟಾಟ. ದೂರದಲ್ಲಿ ಕಾಣುವ ಆ ಕ್ಷಿತಿಜ ಮತ್ತು ಅದರ ಮೇಲೆ ಪ್ರತಿಷ್ಠಿತವಾಗಿರುವ ಉಜ್ವಲ ಕಾಂತಿಯುತವಾದ ಜ್ಯೋತಿ! ಅದರ ಸಮೀಪಕ್ಕೆ ಮುನ್ನಡೆದಂತೆಲ್ಲ ಅದು ದೂರ ಹಿಂದಕ್ಕೆ ಸರಿಯುತ್ತ ನಡೆಯುತ್ತದೆ. ನಿಮ್ಮ ಮತ್ತು ಅದರ ನಡುವಿನ ಅಂತರ ಇಡೀ ಭೂಮಂಡಲದ ತುದಿಯನ್ನೇ ದಾಟಿ ನಡೆದುಹೋದರೂ ಕಡಿಮೆಯಾಗಲಾರದು. ಹಾಗಾದರೇನು? ಓಡಾಡಿ, ಜಿಗಿದು, ನೆಗೆದಾಡಿ, ಬಾಳಿ ಬೆಳೆದು ಸುಖಿಸಲೆಳಸುವ ಸಜೀವ ಸೃಷ್ಟಿಯೆಲ್ಲ ನಿಂತಲ್ಲಿ ನಿಂತುಬಿಡಬೇಕೆ? ಇಲ್ಲ ಅದೆಂದಿಗೂ ಸಾಧ್ಯವೇ ಇಲ್ಲ. ಹಾಗೆ ನಿಂತಲ್ಲಿ ನಿಂತುಬಿಡುವದರಲ್ಲಿಯಂತೂ ಹೆಚ್ಚಿನ ಅಸಮಾಧಾನವಿದೆ! ಈ ಜೀವನದ ಏರಿಳಿತ, ಎಳೆದಾಟ, ಹೊಡೆದಾಟಗಳಲ್ಲಿಯೇ ಹೆಚ್ಚಿನ ಆನಂದವಿದೆ.

## ೩೨

ಅಚಲೆ ಇಂದು ಜಗತ್ತಿನೆಡೆಗೆ ಬೆನ್ನು ತಿರುಗಿಸಿ ಕುಳಿತಿದ್ದಳು. ಇಂದು ಅವಳ ವಿಶ್ವದಲ್ಲಿ ಅವಳು ಮತ್ತು ವಿರಾಗ ಇಬ್ಬರೇ ಇಬ್ಬರಾಗಿದ್ದರು! ಆದರೆ ಆ ವಿಶ್ವದಲ್ಲಿ ಅವಳ ಜೀವನಲತೆಗೆ ಜೀವನದ ಮೊಗ್ಗರಳಿತು. ಪ್ರತಿದಿನವೂ ಆ ಕಲಿಕೆಯಿಂದಾಗಿನ ತನ್ನಲ್ಲಿಯ ಅಂತರ್ವ್ಯಾಪಾರಗಳನ್ನು ಕಿವಿಗೊಟ್ಟು ಆಲಿಸುವ ಉದ್ಯಮದಲ್ಲಿ ಅವಳು ತನ್ನ ಸುತ್ತಲಿನ ಜಗತ್ತಿನ ಕೋಲಾಹಲವನ್ನೆಲ್ಲ ಮರೆತಳು. ಅವಳ ಸುತ್ತಲಿನ ವಾತಾವರಣವೆಲ್ಲವೂ ಸ್ತಿಮಿತವಾಗಿ ನಿಂದಿತ್ತು. ಕ್ಷಣಕ್ಷಣಕ್ಕೂ ಹೆಚ್ಚೆಚ್ಚು ಅಂತರ್ಮುಖಳಾಗಿ ಅವಳು ತನ್ನನ್ನು ತಾನೇ ನಿರುಕಿಸುವಳು. ಕೈಯಲ್ಲಿ ಗಟ್ಟಿಯಾಗಿ ಹಿಡಿದ ಹಕ್ಕಿ ಕೊಸರಿಕೊಂಡು ಹೋಗಲು ಪಕ್ಕ ಬಡಿಯುತ್ತಿರುವಂತೆ ಅವಳ ಗರ್ಭದಲ್ಲಿ ಮೂಡಿದ್ದ ಆ ಪುಟ್ಟಜೀವ ಒಂದೇ ಸವನೆ ಧಡಪಡಿಸಲಾರಂಭಿಸಿತು. ಅದರ ಧಡ

ಪಡಿಕೆಯನ್ನು ಕಂಡು ಅಚಲೆಗೆ ಹೆದರಿಕೆಯಾಯಿತು. ಯಾಕೆ ಈ ಧಡಪಡ?" ಅವಳು ಅಧೀರತೆಯಿಂದ ಆಲಿಸಲಾರಂಭಿಸಿದಳು. ಅದು ಮತ್ತಷ್ಟು ಕಲಮಲವೆಬ್ಬಿಸಿತು. ಅವಳು ಕಾತರಳಾದಳು.

ಹಗ್ಗವನ್ನು ಹುರಿಗೊಳಿಸುವದಕ್ಕೆ ಮೊದಲು ನಾರನ್ನು ಕುಟ್ಟಿ ತೆಗೆದು, ಸರಿಯಾಗಿ ಹಿಂಜಿ ಅದನ್ನು ಸರಿಯಾಗಿ ಸಜ್ಜುಗೊಳಿಸಬೇಕಾಗುತ್ತದೆ. ಸಮಾಜದ ವಿರುದ್ಧವಾಗಿ ಕೃತಿಯೆಸಗುವಾಗಲೂ ಅವಳು ಅಂತೆಯೇ ತನ್ನೆಲ್ಲ ವಿಚಾರ-ವಿಕಾರಗಳನ್ನು ಸರಿಯಾಗಿ ಹಿಂಜಿ ಹಿಂಜಿ ನೋಡಿ ಸಿದ್ಧಳಾಗಿದ್ದಳು. ಆದರೆ ಸತ್ಯದ ಕಲ್ಪನೆ ಬೇರೆ, ವಾಸ್ತವಿಕ ನಗ್ನಸತ್ಯವೆಂಬುದೇ ಬೇರೆ. ಆ ಜೀವಂತ ಸತ್ಯದ ಸ್ಪಂದನಗಳು ಕೇಳಹತ್ತಿದಂತೆಲ್ಲ ಅವಳು ಉದ್ವಿಗ್ನಳಾಗಹತ್ತಿದಳು.

ನಮ್ಮೆಲ್ಲ ವಿಚಾರ, ವಿಕಾರ ಇಚ್ಛೆಗಳ ಫಲ ನಿರ್ಜೀವವಾದುದಲ್ಲ; ಅದು ಸಜೀವವಾದುದಾಗಿದೆ. ತನ್ನ ತಾಯಿಯ ಹೃದಯದ ಬಡಿತಗಳ ತಾಳಕ್ಕೆ ಮೇಳಗೊಡದೆ ಆ ಪುಟ್ಟ ಜೀವ ಒಂದೇ ಸವನೆ ಗತಿಗೆಟ್ಟಂತೆ ಗರಗರನೆ ತಿರುಗುತ್ತಿದೆಯೆಂದು ಅವಳಿಗೆನ್ನಿಸಲಾರಂಭಿಸಿತು. ಇಡೀ ಸಮಾಜದ ಬೆದರಿಕೆಯನ್ನೇ ಉಪಹಾಸಪೂರ್ವಕವಾಗಿ ನಕ್ಕು ಹೀಗಳೆಯಲೆತ್ನಿಸುತ್ತಿದ್ದ ಅಚಲೆಯನ್ನು ಆ ಚಿಕ್ಕ ಜೀವವು ಕೈಕಾಲುಗೆಡಿಸಿಬಿಟ್ಟಿತ್ತು.

ಅವಳಿಗೆನಿಸಿತು, ಆ ಚಿಕ್ಕ ಜೀವದ ಸಲುವಾಗಿ ತಾನು ವಿರಾಗನಿಂದ ದೂರ ದೂರವಾಗಿ ಹೋಗಿಬಿಡಬೇಕೆಂದು. ಆದರೆ ಅವಳು ಅವನಿಂದ ದೂರವಿರಲು ಪ್ರಯತ್ನಪಟ್ಟಂತೆಲ್ಲ ಆ ಜೀವವು ಹೆಚ್ಚೆಚ್ಚು ಒದ್ದಾಡಲಾರಂಭಿಸುವದು. ಅವಳು ವಿರಾಗನ ಹತ್ತಿರ ಕುಳಿತಾಗಲೆಲ್ಲ ಅದು ಹೇಸಿಕೊಂಡವರಂತೆ ವಿರಾಗನೆಡೆಯಿಂದ ಬೇರೆ ಕಡೆಗೆ ಮುಖ ತಿರುಗಿಸಿಬಿಡುತ್ತಿರುವಂತೆ ಅವಳಿಗನ್ನಿಸಲಾರಂಭಿಸಿತು! ಆಗೆಲ್ಲ ಅವಳಿಗೂ ವಿರಾಗನ ವಿಷಯವಾಗಿ ತಿರಸ್ಕಾರವೆನ್ನಿಸುವದು. ಇಡೀ ದಿನವೆಲ್ಲ ಅವನೊಡನೆ ಒಂದೇ ಒಂದು ಮಾತನ್ನೂ ಆಡದೆ ಇದ್ದುಬಿಡುವಳು. ಆದರೆ ಅದರಿಂದ ಅವಳ ಸಂಕಟ ಹೆಚ್ಚಾಗುವದು. ಒಮ್ಮೊಮ್ಮೆ ಅವಳಿಗೆ ಅವನ ಅಂತರಂಗದಲ್ಲಿದ್ದ ಮೂಕವಾದ ಕುದಿತ ಕಾಣುವದು. ಕೂಡಲೆ ಅವಳು ಅವನ ಕೊರಳಿಗೆ ಜೋತುಬಿದ್ದು ಬಿಕ್ಕಿ ಬಿಕ್ಕಿ ಅಳಲಾರಂಭಿಸುವಳು. "ವಿರಾಗ, ನಾನೇ ಎಲ್ಲ ತಪ್ಪು ಮಾಡಿದೆ.

ನಾನೇ ಅಪರಾಧಿನಿ. ವಿರಾಗ, ವಿರಾಗ, ಏನು ಮಾಡಲಿ! ಹೊಟ್ಟೆಯಲ್ಲಿ ಸಂಕಟವಾಗುತ್ತಿದೆ."

ಅವನೇನು ಉತ್ತರ ಕೊಡಬಲ್ಲ! ಅವನ ಮುಖಮುದ್ರೆಯೇ ಅಂತಹ ತೀರ ವಿಲಕ್ಷಣವಾದುದಿತ್ತು. ಅತ್ಯಂತ ಮೃದುವಾದ ಭಾವನೆಗಳ ಪ್ರತಿಕೃತಿ ಅದರಲ್ಲಿ ಮೂಡುವದೇ ಸಾಧ್ಯವಿರಲಿಲ್ಲ. ಅವನು ನೀಳವಾದೊಂದು ಉಸಿರು ಬಿಡುವ. ಅವಳಿಗೆ ತನ್ನ ತಪ್ತವಾದ ಹೃದಯವನ್ನು ಶಾಂತಗೊಳಿಸಲು ಮಾತಿನ ಸಾಧನವಾದರೂ ಒಂದಿತ್ತು. ಆದರೆ ಅವನಿಗೆ? ಅವನ ಹೃದಯ ಒಳಗಿಂದೊಳಗೇ ಹೊತ್ತಿ ಉರಿಯುತ್ತಿರುವದು. 'ಅವಳ ಸಂಕಟವನೆಂತು ಕಡಿಮೆ ಮಾಡಲಿ! ಏನು ಮಾಡಲಿ?'

ಬಾಬಾ, ಮಾಣಿಕ—ಮನೆಯವರ ಸಂಬಂಧವೆಲ್ಲವನ್ನೂ ಅವಳು ವಿರಾಗನಿಗಾಗಿ ತೊರೆದಿದ್ದಳು. ಸಮಾಜದ ಎಲ್ಲಾ ಪಾಶಗಳನ್ನೂ ಕಿತ್ತಿ ಬಿಸುಟಿ ಅವಳು ವಿರಾಗನ ನೆರಳಲ್ಲಿರಲಾರಂಭಿಸಿದ್ದಳು. ಆದರೆ ಆ ನೆರಳೇ ಅವಳನ್ನು ತಪ್ತಗೊಳಿಸಲಾರಂಭಿಸಿತು. ಇನ್ನೆಲ್ಲಿಗೆ ಹೋಗುವದು? ಅವಳ ತಪ್ತ ಅಂತಃಕರಣದ ಕಾವು ಅವಳಲ್ಲಿನ ಆ ಕೋಮಲ ಸತ್ವಕ್ಕೆ ಬಡಿಯಲಾರಂಭಿಸಿತು ಆದರಿಂದ ಅದು ದಿಕ್ಕುಗೆಟ್ಟು ಓಡಾಡಲಾರಂಭಿಸುವದು. ಅವಳು ಬೆದರಿ ಜರ್ಜರಿತಳಾಗುವಳು. 'ಏನು! ತಾಯಾಗಬೇಕೆಂಬ ಪ್ರಬಲವಾದ ಆಸೆಯಿಂದ ಪ್ರೇರಿತಳಾಗಿ ನಾನು ಆದರ ಇಚ್ಛೆಯಿಲ್ಲದೆಯೇ ಅದಕ್ಕೆ ಜನ್ಮವೀಯುತ್ತಿದ್ದೇನೆಯೇ?' ಅದು ಮತ್ತೆ ಹೆಚ್ಚೆಚ್ಚು ಗರಗರನೆ ತಿರುಗಲಾರಂಭಿಸುವದು. ಅವಳಿಗೆ ಆದರ ನಿಃಶಬ್ದವಾದ ಮಾತು ಕೇಳಬರುವದು. 'ಅಮ್ಮಾ, ಅಮ್ಮಾ, ನಾನು ಯಾರು? ಯಾರವನು! ಜಗತ್ತಿನಲ್ಲಿ ನನ್ನ ಸ್ಥಾನವೇನು?' ಅವಳು ವಿಹ್ವಲಳಾಗುವಳು. ಅನಾಥ ಬಾಲಕರಂತೆ, ಹೆಸರುದೆಸೆಯಿಲ್ಲದ ಜೀವನಕ್ಕೆ—ಚಂಡಾಲಿನಿಯಾದ ನಾನು ನಿನ್ನನ್ನು ನೂಕುತ್ತಲಿದ್ದೇನೆ' ನನ್ನ ಸ್ವೈರವರ್ತನೆಯ ವಿಷಫಲಗಳನ್ನು ನಾನು ನಿನಗೆ ಉಣಬಡಿಸುವವಳಿದ್ದೇನೆ!' ಹುಟ್ಟುವದಕ್ಕೆ ಮೊದಲಿಂದಲೇ ತನ್ನ ಗರ್ಭದಲ್ಲಿ ಬಿದ್ದುಕೊಂಡು ದುಃಖದ ತಿನಿಸನ್ನು ತಿಂದು ಚಡಪಡಿಸುತ್ತಿದ್ದ ಆ ಕಂದಮ್ಮನ ಸಂಕಟವನ್ನು ಕಂಡು ಅವಳಿಗೆ ಅತೀವ ವೇದನೆಯಾಗುವದು.

ಅವಳ ಕಣ್ಣೆದುರು ವಿಕಾರವಾದ ಚಿತ್ರಗಳು ಕಾಣುವವು. 'ಗಂಡೋ ಅಥವಾ ಹೆಣ್ಣೋ?'

ಹೆಣ್ಣು ? ಅವಳ ಎದೆಯಲ್ಲಿ ಧಸ್ಸೆನ್ನುವದು. ಆ ಮಗುವಿನ ಜೀವನದ ಸುಖವನ್ನೇ ಹಾಳುಮಾಡಿದ್ದ ಈ ತಾಯಿ! ಅವಳೆದುರು ಮುಂದಿನ ಎಲ್ಲ ಭೀಷಣವಾದ ದೃಶ್ಯಗಳು ಕಾಣುವವು.... ಜನರೆಲ್ಲ ಹೇಸಿಕೆಗೊಂಡು ನಿಂದಿಸುತ್ತಿದ್ದಾರೆ. ಇತ್ತ ನಿಃಸಹಾಯವಾದ ಆ ಕೂಸು ಹತಾಶಳಂತೆ ಮೃತ್ಯುವನ್ನೇ ಎದುರುನೋಡುತ್ತಿದೆ. "ಅಮ್ಮಾ, ಅಮ್ಮಾ" ಎಂಬ ಮಧುರವಾದ ಕರೆ ಕಿವಿಗೆ ಕೇಳಿಸುವ ಬದಲು, ತಿರಸ್ಕಾರದಿಂದ ದೂರದೂರವಾಗಿ ಓಡುತ್ತಿರುವ, ಭಯದಿಂದ ಕೈಕಾಲುಗೆಟ್ಟ, ದಾರಿ ಕಾಣದಾಗಿ ಪಿರಿಪಿರಿ ತಿರುಗುತ್ತಿರುವ ಆವಳ ಅನಾಥ ಮಗು ಅವಳಿಗೆ ಕಾಣುವಬರುವುದು. ಸಮಾಜವು ಬೇಟೆಗಾರನಂತೆ ಸುಸಜ್ಜಿತವಾಗಿ ಅದನ್ನು ತನ್ನ ಬಾಣಕ್ಕೆ ನಿರಿಯಿರಿಸಿ ಬಿಟ್ಟೂ ಬಿಡದೆ ಬೆನ್ನಟ್ಟಿದೆ. ಅಲ್ಲಲ್ಲಿ ಗಾಯಗೊಂಡು ಮೈಯೆಲ್ಲ ನೆತ್ತರಾಗಿ ತೀರ ನಿಃಸಹಾಯವಾಗಿ ಯಾವ ಆಸರೆಯೂ ಇಲ್ಲದೆ ಅದು ಮೃತ್ಯುವಿನ ದವಡೆಯಲ್ಲಿ ಸಿಲುಕಿದಂತೆ ಅವಳಿಗೆ ಕಾಣುವದು. ವಿಚಾರ! ವಿಚಾರ! ವಿಚಾರ! ಅದರಿಂದ ಅವಳ ದಣಿದ ಮೆದುಳು ನಿಶ್ಚೇತನಗೊಳ್ಳುವದು. ಆ ಭಯಂಕರವಾದ ಕರಾಳಸ್ವಪ್ನದೊಳಗಿಂದ ಅವಳು ಚಿಟ್ಟನೆ ಚೀರಿ ಎಚ್ಚರಾಗುವಳು.

ಬಿಡುಗಣ್ಣಿಂದ ಎಲ್ಲವನ್ನೂ ವಿರಾಗ ನೋಡುತ್ತಲಿದ್ದ. ಅವನ ವಿಚಾರಶಕ್ತಿಯೇ ಕುಂಠಿತವಾದಂತಾಗಿತ್ತು. ಅವಳಿಗೆ ತಿಳಿಹೇಳುವದರಲ್ಲಿ ಏನೂ ಅರ್ಥವಿರಲಿಲ್ಲ. ಅವಳನ್ನು ಬೇಕಾದಂತೆ ಇರಲು ಅವನು ಬಿಟ್ಟು ಬಿಟ್ಟಿದ್ದ. ಅವನಿಗೆ ಅವಳನ್ನು ನೋಡಿ ತಿರಸ್ಕಾರವುಂಟಾಗುವದು. ಅವನು ಅವಳಿಂದ ದೂರವಾಗಿಬಿಡುವ. ಅವಳು ಅವನಿಂದ ದೂರವಾಗಿ ತನ್ನಷ್ಟಕ್ಕೇ ಇರಬಯಸುವಳು. ಒಬ್ಬಳೇ ಸುಮ್ಮನೆ ಬಿದ್ದುಕೊಂಡಿರುವಳು. ಆ ಎಳೆ ಜೀವ ಶಾಂತವಾಗಿ ನಿದ್ದೆ ಹೋಗುವದು. ಅಚಲೆಗೆ ಅದರ ಮರೆವಾಗುವದು. ಮೈಮೇಲೆ ಎಚ್ಚರ ಬರುವದು. 'ವಿರಾಗ, ನಾನೆಷ್ಟು ದುಃಖ ಕೊಡುತ್ತಲಿದ್ದೇನೆ ನಿಮಗೆ? ನಿಮ್ಮನ್ನು ಅದೆಷ್ಟು ಪರಿಯಿಂದ ಪೀಡಿಸುತ್ತಲಿದ್ದೇನೆ ನಾನು? ನಾನೇ ನಿಮ್ಮೆಡೆಗೆ ನಿಮ್ಮ ಆಶ್ರಯ ಬಯಸಿ ಬಂದೆ. ಆದರೆ ನಾನೇ ಈಗ ಆ ಸಂಬಂಧವನ್ನು ಕೃತಜ್ಞಳಂತೆ ನಾಶಗೊಳಿಸಲುದ್ಯುಕ್ತಳಾಗಿದ್ದೇನೆ.' ಕಣ್ಣಿಂದ ಅಶ್ರುಗಳು ಸುರಿಯಲಾರಂಭಿಸುವವು. ಆ ಕಂದಮ್ಮನು ಮತ್ತೆ ಗತಿಗೆಟ್ಟು ಓಡಾಡಲಾರಂಭಿಸುವದು. ಅದು ತನ್ನ ತಾಯ ದುಃಖದ ಕಾರಣ

ವೇನೆಂದು ತಿಳಿಯಲು ಹವಣಿಸುವದು. ಅವಳು ಸ್ತಿಮಿತಳಾಗುವಳು. ಅವಳಿಗೆ ಆ ಚಿಕ್ಕ ಜೀವದ ಸ್ಪಂದನಗಳು ಕೇಳಲಾರಂಭಿಸುವವು. ಒಮ್ಮೆ ಅವಳಿಗೆ ವಿರಾಗನ ವಿಷಯವಾಗಿ ಕೆಡಕೆನ್ನಿಸುವದು. ಒಮ್ಮೆ ಆ ಚಿಕ್ಕ ಜೀವದ ವಿಷಯವಾಗಿ ಕೆಡಕೆನ್ನಿಸುವದು! ತನ್ನ ವಿಚಾರವೇ ಅವಳಿಗೆ ಬರುತ್ತಿರಲಿಲ್ಲ.

ಹೀಗೆ ಆ ಮನದ ತೂಗುಯ್ಯಾಲೆಯ ಮೇಲೆ ತೂಗುತ್ತ ತೂಗುತ್ತ ಅವಳೊಮ್ಮೆ ಗುಂಗುಹಿಡಿದು ನಿಸ್ತಬ್ಧಳಾಗಿ ಬಿದ್ದುಕೊಂಡಿದ್ದಳು. ವಿರಾಗ ಅನಿಮಿಷನೇತ್ರನಾಗಿ ಅವಳೆಡೆಗೆ ನೋಡುತ್ತಲಿದ್ದ. ಅವಳ ಆ ತೀರ ಕೃಶವಾಗಿದ್ದ ಶರೀರದ ಕಡೆಗೆ ನೋಡುತ್ತಲಿದ್ದ ಅವನ ಕಣ್ಣುಗಳಲ್ಲಿ ನೀರೂರಿದವು. ಅವಳು ಮೆಲ್ಲಗೆ ತನ್ನ ಕಳೆಗುಂದಿದ್ದ ಕಣ್ಣುಗಳನ್ನು ತೆರೆದು ನೋಡಿದಳು. ಅವನ—ವಿರಾಗನ ಕಣ್ಣುಗಳಲ್ಲಿ ನೀರು!

ಅವಳಿಗೆ ಹಿಡಿಸಲಾರದೆ ದುಃಖ ನೋವು ಉಕ್ಕಿ ಎದೆ ತುಂಬಿ ಬಂದಿತು.

" ವಿರಾಗ! "

" ಅಚಲ, ನಾನು ಯಾರಾರನ್ನು ಮನವಿಟ್ಟು ಪ್ರೀತಿಸಿ ನನ್ನವರನ್ನಾಗಿಸಬೇಕೆಂದು ಹವಣಿಸಿದೆನೋ ಅಂಥವರೆಲ್ಲರಿಂದ ನಾನದೇಕೋ ದೂರವಾಗುತ್ತಲೇ ಇದ್ದೇನೆ! " ಅವನ ತುಟಿಯ ವರೆಗೆ ಬಂದಿದ್ದ ಶಬ್ದಗಳು ಹೊರಬರದೆ ತಿರುಗಿ ಅವನ ಅಂತಪಾರವಿಲ್ಲದ ಎದೆಯಲ್ಲಿ ಲೀನವಾಗಿ ಹೋದವು "

" ವಿರಾಗ, ಇಲ್ಲ, ಇಲ್ಲ. ನಿಮ್ಮದೇನೂ ತಪ್ಪಿಲ್ಲ "

" ಅಚಲಾ, ನಿನ್ನದೂ ಏನೂ ತಪ್ಪಿಲಿಲ್ಲ. ನಿನಗೆ ಹೇಗೆ ತಿಳಿಹೇಳಲಿ?"

" ವಿರಾಗ, ನನಗೆ ಗೊತ್ತಿದೆ ನಿಮ್ಮದು—ನನ್ನದು ಯಾರದೂ ಏನೂ ತಪ್ಪಲಿಲ್ಲ. ಆದರೇನು ಮಾಡಲಿ? ಈ ನನ್ನ ದೇಹಕೋಶದಲ್ಲಿ ತಲೆತಲಾಂತರದಿಂದ ಇಳಿದಿರುವ ಸಂಸ್ಕಾರಗಳೇ ನನ್ನನ್ನು ಕಟ್ಟಿಹಾಕಿ, ದಿಙ್ಮೂಢಳನ್ನಾಗಿಸಿ ಕೈಕಾಲುಗೆಡಿಸಿವೆ."

" ಅದರೊಳಗಿಂದ ಹೊರಗೆ ಬಾ."

" ಅದಕ್ಕಾಗಿಯೇ ಥಡಪಡಿಸುತ್ತಲಿದ್ದೇನೆ."

" ಇಂಥ ಬಿರುಗಾಳಿ-ಭೂಕಂಪಗಳ ಹೊಯ್ದಾಟದಲ್ಲಿ ಆಳುಕದೆ ಸಾಗಿ ನಡೆಯುವದೇ ಜೀವನ! "

# ಉಷಾ ಸಾಹಿತ್ಯ ಮಾಲೆ, ಮೈಸೂರು

| | | | | | |
|---|---|---|---|---|---|
| ೧ | ರಕ್ತ ತರ್ಪಣ | ತ. ರಾ. ಸು | ೧ | ೮ | ೦ |
| ೨ | ಪಯಣದ ಹಾದಿಯಲ್ಲಿ | ಎಸ್. ಅನಂತನಾರಾಯಣ | ೧ | ೧೨ | ೦ |
| ೩ | ಕಣ್ಣೀರು | ಅ. ನ. ಕೃಷ್ಣರಾಯ | ೧ | ೧೨ | ೦ |
| ೪ | ಅಸ್ಥಿಪಂಜರ | ಅರ್ಚಕ ವೆಂಕಟೇಶ | ೩ | ೦ | ೦ |
| ೫ | ನಾಲ್ಕನೆಯ ಮನೆ | ನರೇಂದ್ರಬಾಬು | ೨ | ೦ | ೦ |
| ೬ | ಕನಸಿನ ಮನೆ | ವಿ. ಎಂ. ಇನಾಂದಾರ್ | ೩ | ೦ | ೦ |
| ೭ | ಶಂಖವಾದ್ಯ | ನಾ. ಕಸ್ತೂರಿ | ೧ | ೧೨ | ೦ |
| ೮ | ತತ್ವಜೀವಿ | ಎನ್. ಸೂರಪ್ಪ | ೧ | ೧೨ | ೦ |
| ೯ | ಹೇಮಾವತಿ | ಗೊ. ರಾಮಸ್ವಾಮಯ್ಯಂಗಾರ್ | ೩ | ೮ | ೦ |
| ೧೦ | ಸನ್ಯಾಸಿಯ ಬದುಕು | ಶಿವರಾಮ ಕಾರಂತ | ೨ | ೮ | ೦ |
| ೧೧ | ಕುಮಾರ ಸಂಭವ | ಶ್ರೀರಂಗ | ೨ | ೧೨ | ೦ |
| ೧೨ | ಕೊನೆಯ ದಾರಿ | ಕೃಷ್ಣಮೂರ್ತಿ ಪುರಾಣಿಕ | ೩ | ೦ | ೦ |
| ೧೩ | ಭಸ್ಮಾಸುರ | ಮಿರ್ಜಿ ಅಣ್ಣಾರಾಯ | ೧ | ೮ | ೦ |
| ೧೪ | ಶಾಪ | ವಿ. ಎಂ. ಇನಾಂದಾರ್ | ೩ | ೦ | ೦ |
| ೧೫ | ರೂಪದರ್ಶಿ | ಕೆ. ವಿ. ಅಯ್ಯರ್ | ೪ | ೦ | ೦ |
| ೧೬ | ಮಾಡಿ ಮಡಿದವರು | ಬಸವರಾಜ ಕಟ್ಟೀಮನಿ | ೩ | ೦ | ೦ |
| ೧೭ | ದಾಸಕೂಟ | ಬಳ್ಳಾರಿ ಬೀಚಿ | ೧ | ೧೨ | ೦ |
| ೧೮ | ಕುಡಿಯರ ಕೂಸು | ಶಿವರಾಮ ಕಾರಂತ | ೪ | ೮ | ೦ |
| ೧೯ | ಮಂಜುಳಾ | ಕೃಷ್ಣಮೂರ್ತಿ ಪುರಾಣಿಕ | ೩ | ೦ | ೦ |
| ೨೦ | ಜೋಕಾಲಿಯ ಮೇಲೆ | ಡಿ. ಎಸ್. ಕುಲಕರ್ಣಿ | ೨ | ೮ | ೦ |
| ೨೧ | ಕಾರಂತರ ಕಾದಂಬರಿಗಳು | ಎಸ್. ಅನಂತನಾರಾಯಣ | ೨ | ೦ | ೦ |
| ೨೨ | ಉಷಾ ಸ್ವಪ್ನ | ,, ,, | ೧ | ೦ | ೦ |
| ೨೩ | ಅಗ್ನಿಕನ್ಯೆ | ಅ. ನ. ಕೃಷ್ಣರಾಯ | ೨ | ೦ | ೦ |
| ೨೪ | ಮುತ್ತು ಹವಳ | ಬೇರೆ ಬೇರೆ ಬರಹಗಾರರಿಂದ | ೨ | ೪ | ೦ |
| ೨೫ | ಜಗಜ್ಜ್ಯೋತಿ ಬಸವೇಶ್ವರ | ಅ. ನ. ಕೃಷ್ಣರಾಯ | ೨ | ೦ | ೦ |
| ೨೬ | ಮೂರಾಬಟ್ಟೆ | ವಿ. ಎಂ. ಇನಾಂದಾರ್ | ೩ | ೧೫ | ೦ |
| ೨೭ | ನಟಸಾರ್ವಭೌಮ | ಅ. ನ. ಕೃಷ್ಣರಾಯ | ೧೦ | ೦ | ೦ |
| ೨೮ | ಯಶೋಧರ ಚರಿತೆ | ಕ. ವೆಂ. ರಾಘವಾಚಾರ್ | ೨ | ೪ | ೦ |
| ೨೯ | ಐಸಾಕ್ ನ್ಯೂಟನ್ | ಎನ್. ಎಸ್. ವೀರಪ್ಪ | ೩ | ೦ | ೦ |
| ೩೦ | ದಿಲ್ಲಿಯ ಪತ್ರಗಳು | ಎಸ್. ವಿ. ಕೃಷ್ಣಮೂರ್ತಿರಾವ್ | ೧ | ೮ | ೦ |
| ೩೧ | ಅಭಿಜ್ಞಾನ ಶಾಕುಂತಲ | ವಿ. ಸೀತಾರಾಮಯ್ಯ | ೦ | ೧೨ | ೦ |
| ೩೨ | ಮನಸ್ವಿನಿ ಮತ್ತು ಇತರ ಕತೆಗಳು | ತಿ. ಶೇ. ಮಣಿ | ೨ | ೦ | ೦ |